# ಉಪೋದ್ಘಾತವು.

ರಾಜಶೇಖರ ವಿಳಾಸವನ್ನು ರಚಿಸಿದ ಷಡಕ್ಷರದೇವನು ಮುಮ್ಮಡಿ ಕೃಷ್ಣರಾಜಒಡೆಯರ ದಿವಾನರಾಗಿದ್ದ ಪೂರ್ಣಯ್ಯನವರ ಸರ್ವಮಾನ್ಯಕ್ಕೆ ಸೇರಿದ ಎಳಂದೂರುಗ್ರಾಮದಲ್ಲಿ ವಾಸಿಸುತ್ತಿದ್ದನು. ಈತನ ಮಠದನಿವೇಶನವನ್ನು ಈಗಲೂ, ಅಲ್ಲಿನ ಜನರು ತೋರಿಸುತ್ತಾರೆ. ಷಡಕ್ಷರದೇವಕವಿಯು ತಾನು ರೇಣುಕಾಚಾರ್ಯಸಾಂಪ್ರದಾಯಿಕನೆಂದೂ, ದನುಗೂರುಮಠದ ಸ್ವಾಮಿಯಾದ ಚಿಕವೀರದೇಶಿಕನ ಶಿಷ್ಯನೆಂದೂ, ಪ್ರಥಮಾಶ್ವಾಸದಲ್ಲಿ ೫೩ನೆಯದಾದ ಶಿವವಕ್ತ್ರೋದ್ಭವಸ್ಮರೇಣುಪ್ರಭವನೆನಿಸಿಯುಂ ಎಂಬ ಪದ್ಯಮೊದಲ್ಗೊಂಡು ಚಿಕವಿರದೇವನ ಕರಕಂಜಾತಸುಜಾತಂ...ಎಂಬ ೬೭, ೬೮ ನೆ ಪದ್ಯಗಳವರೆಗೆ ತಿಳಿಸುತ್ತಾನೆ. ಮತ್ತು ಅದೇ ೬೮ ನೆಯ ಪದ್ಯದಲ್ಲಿ "ಸಾಂಬಶಂಕರಪಾದಾಬ್ಜಮಧುವ್ರತಂ" ಎಂದು ತನಗೆ ವಿಶೇಷಣವಂ ಕೊಟ್ಟಿರುವುದರಿಂದಲೂ ಪ್ರಥಮಾಶ್ವಾಸದ ೭೨ ನೆಯ ಪದ್ಯದಲ್ಲಿ "ನಿನಗೆ ನಿಸರ್ಗಮತ್ತೆ.....ಶಿವಯೋಗಮಾಗಮವಿಚಾರರತಿ.:....ಷಟ್ಸ್ಥಲಾಂಕಶಾಸ್ತ್ರನಿಜಯುಸಾರದರ್ಶನಂ" ಎಂದು ಹೇಳಿರುವುದರಿಂದಲೂ, ಈ ಕವಿಯು ಲಿಂಗಾಂಗಸಾಮರಸ್ಯರೂಪಮುಕ್ತಿಪ್ರತಿಪಾದಕವೀರಶೈವಶಕ್ತಿವಿಶಿಷ್ಟಾದ್ವೈತಸಿದ್ಧಾಂತಿಯೆಂದೂ ಗುರುಸ್ಥಲದ ಪಟ್ಟಾಧಿಕಾರಿಯೆಂಬ ಬ್ರಹ್ಮಚಾರಿಮಾಹೇಶ್ವರನೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ. ೧೪ ನೆಯ ಆಶ್ವಾಸದ ೧೮೪ ನೆಯ ಪದ್ಯದಲ್ಲಿ "ಸುರುಚಿರಶಾಲಿವಾಹನಶಕಾನ್ವಿತರತ್ನಸಮುದ್ರಬಾಣಭೂಪರಿಗಣನಾಂಕ ಬಂಧುರ ಜಯಾಬ್ದದ" ಎಂದು......ಗ್ರಂಥ ಸಮಾಪ್ತಿಕಾಲವನ್ನು ಹೇಳಿರುವುದರಿಂದ ಶಾಲಿವಾಹನಶಕ ೧೪೭೬ ನೆಯ ಜಯಸಂವತ್ಸರದಲ್ಲಿ (ಕ್ರಿಸ್ತಶಕ ೧೫೫೪ ರಲ್ಲಿ) ಈ ಕವಿಯು ಜೀವಿಸುತ್ತಿದ್ದನೆಂದು ನಿರ್ಣಯವಾಗುತ್ತದೆ. ದನುಗೂರುಮಠದ ಸ್ವಾಮಿಯ ಶಿಷ್ಯನಾದ ಷಡಕ್ಷರದೇವನು ಎಳಂದೂರಲ್ಲಿ ವಾಸಿಸುತ್ತಿದ್ದಕ್ಕೆ ಕಾರಣವೇನೆಂದರೆ:—ಆ ಕಾಲದಲ್ಲಿ ಹದಿನಾಡೆಂಬ ದೇಶವನ್ನು ಪಾಲನಮಾಡುತ್ತಿದ್ದ ಮುದ್ದರಾಜನು ತನ್ನ ಹೆಂಡತಿಯ ತೌರುಮನೆಯ ಗುರುವಾಗಿದ್ದ ಷಡಕ್ಷರದೇವನನ್ನು ಕರೆಸಿ ತನ್ನ ಹೆಂಡತಿಯ ತೌರೂರಾದ ಎಳಂದೂರಿನಲ್ಲಿಯೇ ಒಂದುಮಠವನ್ನು ಕಟ್ಟಿಸಿ, ಅನುಕೂಲತೆಪಡಿಸಿದ್ದನು.

ಈ ಕವಿಯು ಕಾಲದಲ್ಲಿ ಒಂದಾನೊಂದು ದಿನ ಜೈನಮತಸ್ಥರು ನೇಮಿಚಂದ್ರನಿಂ ಮಾಡಲ್ಪಟ್ಟ ಲೀಲಾವತಿ ಎಂಬ ಕರ್ಣಾಟಕ ಚಂಪೂಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ, ಆನೆಯ ಹೊಟ್ಟೆಗೆ ಒಂದು ಬೆಳ್ಳಿಯ ತೊಟ್ಟಿ

ಲನ್ನು ಕಟ್ಟಿ ಬೀದಿಯಲ್ಲಿ ಮೆರೆವಣಿಗೆಮಾಡಿಕೊಂಡು ಬರುತ್ತಿರಲು ಷ. ದೇವನ ಮಠದ ಮುಂದೆ ನಿಲ್ಲಿಸಲು, ಆತನ ಶಿಷ್ಯರು ನೋಡಿ, ಆ ಗುಂಪಿನಲ್ಲಿ ಮುಖ್ಯರಾದವರನ್ನು, ಇದೇನು ಮೆರವಣಿಗೆ ಎಂದು ಕೇಳಲಾಗಿ ಇದು ಕರ್ಣಾಟಕಗ್ರಂಥಶಿರೋಮಣಿಯಾದ ಕವಿಕುಂಜರಲೀಲಾವತಿಯ ಮೆರವಣಿಗೆ ಎಂದು ಹೇಳಿದರು. ಅದು ಸರಿ. ಈ ಆನೆಯ ಹೊಟ್ಟೆಗೆ ತೊಟ್ಟಿಲನ್ನು ಕಟ್ಟಿರುವುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಲು, —ನಗುತ್ತಾ ಓಹೋ ನಿಮಗೆ ಗೊತ್ತಾಗಲಿಲ್ಲವೋ? ಈ ಗ್ರಂಥವು ರಸಭರಿತವಾದುದು. ಆ ರಸವು ಸ್ರವಿಸಿ ನೆಲದಲ್ಲಿ ಬಿದ್ದೀತೆಂದು ಊಹಿಸಿ ತೊಟ್ಟಿಲನ್ನು ಕಟ್ಟಿದ್ದೇವೆ ಎಂದು ಕುಚೇಷ್ಟೆಯ ಮಾತುಗಳನ್ನಾಡಿದರು. ಶಿಷ್ಯರು, ಒಳಗೆ ಹೋಗಿ ಆ ಸಂಗತಿಯನ್ನು ಷಡಕ್ಷರದೇವನಿಗೆ ತಿಳಿಸಿದರು. ಆತನು ಕೇಳಿ—ಇದಕ್ಕಿಂತಲೂ ರಸಭರಿತವಾದ ಗ್ರಂಥವಿರುವಲ್ಲಿ ಈ ಗ್ರಂಥಕ್ಕೆ ಇಷ್ಟು ಬಹುಮಾನವು ಸಲ್ಲುವುದಿಲ್ಲ ಆದುದರಿಂದ ಮೆರೆವಣಿಗೆಯನ್ನು ಹಿಂತಿರುಗಿಸಬೇಕೆಂದು ಶಿಷ್ಯರಕೂಡ ಹೇಳಿ ಕಳುಹಿಸಿ ಮುಂದಕ್ಕೆ ಹೋಗದಹಾಗೆ ತಡೆಸಿದನು. ಈ ಸಂಗತಿಯನ್ನು ಅವರು ಅರಮನೆಯ ಆಸ್ಥಾನದಲ್ಲಿ ದೂರಿದಾಗಿ ಅಧಿಕಾರಿಗಳು ವಿಚಾರಮಾಡುವ ಸಂದರ್ಭದಲ್ಲಿ ಷಡಕ್ಷರದೇವನು ಇನ್ನೊಂದು ವರ್ಷದೊಳಗಾಗಿ ರಸಭರಿತವಾದ ಗ್ರಂಥವನ್ನು ಕಾಣಿಕೆಯಿಂದ ತರಿಸುತ್ತೇನೆ ಅದಕ್ಕಿಂತ ಲೀಲಾವತಿಯು ರಸಭರಿತವಾದುದೆಂದು ವಿದ್ವಾಂಸರಿಗೆ ತೋರಿದರೆ, ಆಗ ಮೆರವಣಿಗೆ ಮಾಡಬಹುದೆಂದು ಹೇಳಿದುದಕ್ಕೆ ವಾದಿಗಳೆಲ್ಲರೂ ಒಪ್ಪಿಕೊಂಡರು. ಅನಂತರ ಷಡಕ್ಷರದೇವನು ರಾಜಶೇಖರ ವಿಳಾಸವೆಂಬ ಗ್ರಂಥವನ್ನು ರಚಿಸುವುದಕ್ಕೆ ಪ್ರಾರಂಭಿಸಿ, ಒಂದು ವರ್ಷದೊಳಗಾಗಿ ಪೂರ್ಣಮಾಡಿ, ವಿದ್ವಾಂಸರನ್ನು ಕೂಡಿಸಿ ಸಭೆಯಲ್ಲಿ ಮೊದಲು ಕವಿಕುಂಜರ ಲೀಲಾವತಿಯ ಮುಖ್ಯ ಭಾಗಗಳನ್ನು ಓದಿಸಿದಮೇಲೆ ರಾಜಶೇಖರದಲ್ಲಿ ಅಂತಹ ವರ್ಣನಾಂಶಗಳನ್ನು ಓದಿ ತಾನೇ ಅರ್ಥವನ್ನು ಹೇಳಿ—ಎರಡರಲ್ಲಿ ಯಾವುದು ರಸಭರಿತವಾದುದೆಂದು ಕೇಳಲು; ವಿದ್ವಾಂಸರೆಲ್ಲರೂ ಲೀಲಾವತಿಯು ಕನ್ನಡದಲ್ಲಿ ಪ್ರೌಢವಾದುದಾಗ್ಯೂ ರಾಜಶೇಖರ ವಿಳಾಸದಷ್ಟು ರಸಪುಷ್ಟಿಯುಳ್ಳುದಲ್ಲವೆಂದು ಹೇಳಿ, ಒಟ್ಟಾಗಿ ಷಡಕ್ಷರ ದೇವನ ಕವಿತಾ ವಿಷಯವಾಗಿ

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರ |
ನ್ಮಂಜೀರಧ್ವನಿಮಂಜುನಾದವಿಭವ ಶ್ರೀಗರ್ವಸರ್ವಂಕಷಾಃ ||
ಪೀಯೂಷಾರ್ಣವತಃ ಷಡಕ್ಷರ ವಿಭೋಃ ಕುಂದಾರವಿಂದಾವಳೀ |
ಮಂದಾರದ್ರುಮಮಂಜರೀ ಮಧುಝರೀ ಮಾಧುರ್ಯಧುರ್ಯಾಗಿರಃ ||

ಎಂದು ಯೋಗ್ಯತಾ ಪತ್ರವಂ ಕೊಟ್ಟರೆಂದು ಬಹು ಕಾಲದಿಂದಲೂ ಒಂದು ಐತಿಹ್ಯವು ಜನಜನಿತವಾಗಿ ಬಂದಿರುವುದು. ಇದಕ್ಕನುಗುಣವಾಗಿ ರಾಜಶೇಖರ ವಿಳಾಸ ಗ್ರಂಥದ ೧೪ ನೆಯ ಆಶ್ವಾಸದ ೧೬೨ ನೆಯ ಪದ್ಯವಿದೆ.

ಇಂತೀಕಾವ್ಯಮನೊಲ್ದುಕೇಳ್ದು ವಿಬುಧರ್ಮೆಚ್ಚಿರ್ವೆಚ್ಚಿ ಕೊಂಡಾಡೆಪೇ |
ಳ್ದಂ ತಾನೊರ್ವನೆ ಸಾಂಬಶಂಭುಕೃಪೆಯಿಂದೇ ಕಾಬ್ದದೊಳ್ಪೂರ್ಣಮು ||
ಪ್ಪಂತೋರಂತೆ ಷಡಕ್ಷರಾರ್ಯನನಘಂಸಾಹಿತ್ಯ ಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗ ಸಂಗತಮಹಾಮಾಹೇಶ್ವರಂ ಭಕ್ತಿಯಿಂ ||

ಷಡಕ್ಷರದೇವನ ಕಾಲದಲ್ಲಿ ಮುದ್ದುರಾಜನು ಹದಿನಾಡಿನಲ್ಲಿ ರಾಜ್ಯವನ್ನಾಳು ತ್ತಿದ್ದನೆಂಬ ವಿಷಯವನ್ನು ಯಳಂದೂರಿನ ಗೌರೀಶ್ವರದೇವಾಲಯದ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.

ಶಾಸನದ ೩೨ ನೆಯ ಪಙ್ಕ್ತಿಯಿಂದ ೪೮ ನೆಯ ಪಙ್ಕ್ತಿಯವರೆಗೆ—

ಕಂ|| ಶ್ರೀ ಪತಿವಿಭವಂಮನಸಿಜ ರೂಪಂದೇವೇಂದ್ರಸೂನುಕಾಮನೃಪಾಲಂ ||
ಭೂಪಕುಲತಿಲಕನವಿಳಕ | ಳಾಪರಿಣತನಾಳುತಿರ್ದ್ದಪದಿನಾಡುಗಳಂ ||
ಶಾಲಿವಾಹನಶಕವರ್ಷ, ೧೪೯೦ ಸಂದ ವಿಭವ ಸಂವತ್ಸರದಲ್ಲಿ:—
ಅಣೆಯುರದಿಂ ಗೌರೀಶನ | ಗುಣನಿಧಿ ಪೂಜಾರ್ಥವಾಗಿ ತದ್ಭೂಪಾಲಂ ||
ಗಣಗನೂರಾಖ್ಯನಗರಮ | ನೆಣಿಕೆಯುನುಳಿದಿತ್ತನೇಂ ಕೃತಾರ್ಥನೊ ಜಗದೊಳ್ ||
ಆತನನುಜಾತನಿಮಿಳೋ | ರ್ವೀತಳನುತನಮಳಕೀರ್ತಿ ಚೆನ್ನನೃಪಾಲಂ ||
ನೂತನಮದನಂಗೆಸೆವಖ್ಯಾತಸುತರ್ನ್ನಂಜರಾಜತಿರುಮಲರಾಜರ್ ||
ಮತ್ತಮಾನಂಜರಾಜಾಗ್ರಜಂತಿರುಮಲರಾಜಂ

ಕಂ|| ಇತ್ತಂ ವಡಿಯುರಪುರಮಂ | ಬಿತ್ತರವೆತ್ತಿಸೆವ ಸೀನಗೂಡಲುಮಂ ಭೂ||
ಪೋತ್ತಮನತಿಮುದದಿಂದೇ| ವೋತ್ತಮಗೌರೀಶ್ವರಂಗೆ ಚಂತನಪುರಮಂ ||

ವೃ|| ಎಸೆವಾ ಭೂಪನಸೂನುಸತ್ಯನಿಧಿ ಸದ್ಧರ್ಮಾನ್ವಿತಂ ಸಂತತಂ |
ಕುಶಲಂಬೆತ್ತುರೆ ಯಾಳುತಿರ್ದುಹದಿನಾಡಾಖ್ಯಾತ ಭೂಭಾಗಮಂ ||
ಕುಸುಮಸ್ತ್ರಾಭವದಾಂಬುಜಾತನವಭ್ಯಂಗಂ ಯಾಚಕಾಧಾರನೇಂ |
ವಸುಧಾಚಕ್ರದೊಳೊಲ್ದುರಾಜಿಸಿದನೋ ಮುದ್ದೇಂದ್ರ ಭೂಪಾಲಕಂ ||
ಶಾಲಿವಾಹನಶಕವರ್ಷ ೧೫೭೬ ಸಂದಜಯಸಂವತ್ಸರದಲ್ಲಿ—

ಕಂ|| ಅಂತಪ್ಪಮುದ್ದುಭೂಪತಿ | ಸಂತಸದಿಂತೋಟಗದ್ದೆ ಕೊಂಡಂಗೆರೆಗಳ ||
ಕಂತುಗಿರಿಕುಲಿಶಗೌರೀ | ಕಾಂತಂಗೊಲಿದಿತ್ತನೇನುದಾತ್ತನೊಜಗದೊಳ್ ||

ಈ ಸಂದರ್ಭಗಳನ್ನು ಪರ್ಯಾಲೋಚಿಸಿದರೆ ಚಿಕ್ಕದೇವರಾಜೊಡೆಯರು ಸಿಂಹಾಸನಾರೂಢರಾಗುವುದಕ್ಕಿಂತ ೩೪ ವರ್ಷಗಳ ಹಿಂದೆ ಷಡಕ್ಷರದೇವನು ಈ ಗ್ರಂಥವನ್ನು ಬರೆದನೆಂದು ತಿಳಿದುಬರುತ್ತದೆ. ಷಡಕ್ಷರಕವಿಯು ತನ್ನ ಗ್ರಂಥಗಳಲ್ಲಿ ಮುದ್ದುರಾಜನ ಹೆಸರನ್ನಾದರೂ ಚಿಕ್ಕದೇವರಾಜನ ಹೆಸರನ್ನಾದರೂ ಎತ್ತದಿದ್ದಾಗ್ಯೂ ಪ್ರೊ॥ [illegible] ಶಾಸನವನ್ನು ಕುರಿತು ವಿಚಾರಮಾಡಿದರೆ ಷಡಕ್ಷರದೇವನು ರಾಜಶೇಖರವಿಳಾಸವನ್ನು ಪೂರ್ತಿಮಾಡಿದ ವರ್ಷದಲ್ಲಿಯೇ ಮುದ್ದುರಾಜನು ಗೌರೀಶ್ವರನಿಗೆ ಹೊಂಬಳಗದ್ದೆ, ಕೊಂಡಂಗೆರೆ ಎಂಬ ಗ್ರಾಮಗಳನ್ನು ಬಿಟ್ಟಿರುವುದರಿಂದ ಷಡಕ್ಷರದೇವನು ಮುದ್ದುರಾಜನಾಶ್ರಯದಲ್ಲಿದ್ದನೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ. ಮತ್ತು ಷಡಕ್ಷರದೇವನು ವೃಷಭೇಂದ್ರವಿಜಯ, ಶಬರಶಂಕರವಿಳಾಸ ಎಂಬ ಬೇರೆ ಎರಡು ಕರ್ಣಾಟಕಚಂಪೂಗ್ರಂಥಗಳನ್ನೂ, ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯ ಎಂಬ ಮೂರು ಸಂಸ್ಕೃತಗ್ರಂಥಗಳನ್ನೂ ರಚಿಸಿದ್ದಾನೆ. ರಾಜಶೇಖರವಿಳಾಸದಲ್ಲಿನ ಕೆಲವು ಪದಗಳು ಪ್ರಾಚೀನಗಳಾದ ಚಂಪೂಗ್ರಂಥಗಳ ಪದ್ಯಗಳಿಗೆ ಸಮಾನವಾದ ಶೈಲಿಯುಳ್ಳವುಗಳಾಗಿಯೂ ಕೆಲವು ಪದಗಳು ಪೂರ್ವಗ್ರಂಥಗಳ ಶೈಲಿಗಿಂತ ರಮಣೀಯವಾದ ಶೈಲಿಯುಳ್ಳವುಗಳಾಗಿಯೂ ಲಲಿತವಾದ ಪದಬಂಧವುಳ್ಳವುಗಳಾಗಿಯೂ ಇವೆ. ಗದ್ಯಗಳು ಪುರಾತನ ಗ್ರಂಥಗಳಲ್ಲಿನ ಗದ್ಯಗಳಿಗಿಂತ ಸ್ವಲ್ಪವಾಗಿಯೂ ಓದುವುದಕ್ಕೆ ಸರಳವಾಗಿಯೂ ಇವೆ. ಈ ಗ್ರಂಥದಲ್ಲಿ ಸಂಸ್ಕೃತಶಬ್ದಗಳೂ, ಕರ್ಣಾಟಕಶಬ್ದಗಳೂ ಪ್ರಾಯಶಃ ಸಮಾನವಾಗಿಯೇ ಪ್ರಯೋಗಿಸಲ್ಪಟ್ಟಿವೆ. ಕವಿತಾಪಾಕಗಳಲ್ಲಿ ಕದಳೀಪಾಕವೆಂದು ಹೇಳಬಹುದು. ಈ ಕಾಲದಲ್ಲಿ ಚಂಪೂಪ್ರಬಂಧವನ್ನಾಗಲಿ, ಪದ್ಯಪ್ರಬಂಧವನ್ನಾಗಲಿ, ಗದ್ಯಪ್ರಬಂಧವನ್ನಾಗಲಿ ರಚಿಸಬೇಕೆನ್ನುವವರು ರಾಜಶೇಖರವಿಳಾಸದ ಸರಣಿಯನ್ನು ಹಿಡಿದು ರಚಿಸಿದರೆ ಗ್ರಂಥವು ಶ್ಲಾಘನೀಯವಾಗುವುದು. ಮತ್ತು ಕರ್ಣಾಟಕ ಭಾಷಾಭ್ಯಾಸಿಗಳು ಈ ಗ್ರಂಥವನ್ನು ಅವಶ್ಯವಾಗಿ ಓದಿದರೆ ವ್ಯುತ್ಪತ್ತಿಯುಂಟಾಗುವುದು. ವಾಚಕರಿಗೆ ಸುಲಭವಾಗುವಂತೆ ಪಾದಪಾದಗಳನ್ನು ವಿಂಗಡಿಸಿ ಪದ್ಯಗಳಿಗೆ [illegible] ವ್ಯಕ್ತವಾಗುವಂತೆ [illegible] ದಗಳನ್ನೆಲ್ಲಾ ಕೊಡಿಸಿ ಮುದ್ರಣಗೊಳಿಸಲ್ಪಟ್ಟಿರುವ ಈ ನೂತನ ಪುಸ್ತಕವನ್ನು ಗುಣಗ್ರಾಹಿಗಳಾದವರು ಓದಿ ಸಂತೋಷಗೊಂಡು ನನ್ನ ಉದ್ದೇಶವನ್ನು ಸಾಫಲ್ಯಗೊಳಿಸುವರೆಂದು ನಂಬಿದ್ದೇನೆ.

ಪಿ. ಆರ್. ಕರಿಬಸವಶಾಸ್ತ್ರಿ.

# ವಿಷಯಾನುಕ್ರಮಣಿಕೆ.


| ಆಶ್ವಾಸ. | ಪುಟ. | ವಿಷಯ. |
|---|---|---|
| ೧ | ೧ | ಪೀಠಿಕಾರಚನಾಸಮುದ್ರೋರುಗಿರಿವರ್ಣನಂ. |
| ೨ | ೩೧ | ದ್ರಾವಿಡದೇಶಾದಿವರ್ಣನಂ. |
| ೩ | ೬೩ | ಕಥಾವತರಣಶಿವಲೀಲಾವರ್ಣನಂ. |
| ೪ | ೮೫ | ರಾಜಶೇಖರಾಭ್ಯುದಯವರ್ಣನಂ |
| ೫ | ೧೧೨ | ಕಿರಾತದೂತಾಗಮನಮೃಗಯಾವರ್ಣನಂ. |
| ೬ | ೧೪೪ | ರಾಜಶೇಖರವಿಜಯವರ್ಣನಂ. |
| ೭ | ೧೭೮ | ಸರ್ವಮಂಗಳಾದರ್ಶನವರ್ಣನಂ. |
| ೮ | ೨೦೧ | ಸರ್ವಮಂಗಳಾಪರಿಣಯ, ವಿವಾಹ, ವರ್ಷರ್ತು ವರ್ಣನಂ. |
| ೯ | ೨೨೮ | ಹೇಮಂತವಸಂತಋತುವರ್ಣನಂ. |
| ೧೦ | ೨೪೪ | ರಾಜಶೇಖರನವಿಹಾರಜಲಕ್ರೀಡಾವರ್ಣನಂ. |
| ೧೧ | ೨೭೦ | ಸೂರ್ಯಾಸ್ತಮಯವರ್ಣನ, ಚಂದ್ರೋದಯವರ್ಣನ, ಚಂದ್ರಿಕಾವಿಹಾರಾದಿವರ್ಣನಂಗಳ್. |
| ೧೨ | ೩೧೪ | ರಾಜಶೇಖರಸಭಾವರ್ಣನಂ. |
| ೧೩ | ೩೩೬ | ರಾಜಶೇಖರವೀಧೀವಿಹಾರೋತ್ಸವ, ಶಂಕರಕುಮಾರಸ್ಮೃತಿ, ತಿರುಕೊಳವಿನಾಚಿಪ್ರಲಾಪಾದಿ ವರ್ಣನಂ. |
| ೧೪ | ೩೭೫ | ಪರಮೇಶ್ವರಪ್ರಸನ್ನತಾ, ರಾಜಶೇಖರಾದಿಮುಕ್ತಿಪ್ರಾಪ್ತಿ, ಕೈಲಾಸ, ಶಿವಸಭಾವರ್ಣನಂ. |

# ಶುದ್ಧಾಶುದ್ಧಪತ್ರಿಕೆ.

| ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ೫ | ೨೧ | ಭುವವನವೆ | ಭುವನವೆ | ೫೩ | ೧೩ | ಸ್ಪೈರಸ | ಸ್ಪೈರ | ,, | ೧೮ | ದೊಲ್ಲಿಂ | ಪೊಲ್ಲಿಂ |
| ೧೦ | ೧೮ | ನಗ್ನವಂ | ನಗವ | ೫೪ | ೮ | ಗಲ್ಕ್ರ | ಗಲ್ಕ್ರ | ೮೫ | ೩ | ಜನತಾಕು | ಜನತಾ |
| ೧೧ | ೭ | ಪಡೆವು | ಪಡೆಯು | ,, | ೧೯ | ಯೂಥಿಕಾ | ಯೂಥಿಕಾ | ,, | ೯ | ದಿವ್ಯಾಂಘಿ | ದಿವ್ಯಾಂಘ್ರಿ |
| ೧೫ | ೪ | ತಿಸ್ಥಿ | ಸ್ಥಿತಿ | ೫೬ | ೩ | ಸವುರ | ಸಪುರ | ,, | ೧೦ | ಪರಸಿರ | ಪರಸಿದ |
| ,, | ,, | ಯೊಳಡಚ್ಚುರ್ | ಪೊಡಚ್ಚುರ್ | ,, | ೮ | ತೋಂರೆ | ತೋರ | ,, | ೧೩ | ಮಹಿಂಗೆ | ಮಹಿಗೆ |
| ೧೯ | ೮ | ನ್ಪೊಳ್ಕರಂ | ನೊಳ್ಕರಂ | ೬೦ | ೨೨ | ಲ್ವಳಿಪ | ಲವ್ವಳಿಪ | ೮೯ | ೭ | ಚ್ಚ್ರದ | ಚ್ಚಿದ |
| ೨೦ | ೨೪ | ಮುರಿಯುವೆಟ | ಮುರಿಯವೆವಟ | ೬೧ | ೧ | ಕಾಂಯಂತಿ | ಕಾಂತಿಯಂ | ,, | ೧೦ | ವರ್ಪಾರ್ಂಬು | ಘರ್ಮ್ಮಾಂಬು |
| ೨೩ | ೧೬ | ಮುಕ್ತಾಘು | ಮುಕ್ತಾಘ | ,, | ೧೧ | ಬಿಂಬಾದಾ | ಬಿಂಬಾಧರಾ | ,, | ೧೬ | ಕುರುಳೆಂ | ಕುರುಳೆಂಬ |
| ೨೯ | ೧೧ | ಶಶ್ವಂ | ಶಶ್ವ | ,, | ೭೮ | ತನುಕುರ | ತನುಕು | ೯೦ | ೫ | ಸೂಂಕಿದಂ | ಸೂಂಕಿದಂ |
| ೩೪ | ೩ | ಕನ | ಕನಕ | ೬೨ | ೧ | ಕುಂಡೆ | ಕಡೆ | ೯೧ | ೨ | ಮಂಚಿ | ಮಂಚಿತ |
| ೩೭ | ೧೬ | ವಿರಾಜಿತು | ವಿರಾಜಿತ | ೬೪ | ೨೦ | ಕಾಂತಾತ | ಕಾಂತಾರ | ೯೨ | ೨ | ಕ್ಷಿವ | ಕ್ಷೀವ |
| ೩೮ | ೨೦ | ಬಳಯಿಸೆ | ಬೆಳೆಯಿಸೆ | ೬೫ | ೫ | ಗೃಹಸ್ತುಂ | ಗೃಹನುಂ | ೯೮ | ೫ | ನವರ | ನವರಿ |
| ೪೨ | ೨೪ | ಕಾರುಕು | ಕಾರುಕ | ೭೦ | ೧೨ | ದುರ್ಚಿಯಂ | ದುರ್ಚಿಯಿಂ | ೧೦೨ | ೧೩ | ಕಾತುಕಾ | ಕೌತುಕಾ |
| ೪೭ | ೧೫ | ಘುವರ್ಮ | ಘರ್ಮ | ೭೮ | ೧೩ | ಪಯೋಜನ | ಪಯೋಜ | ೧೦೫ | ೨೪ | ಗುವರ | ಗುರುವರ |
| ೪೮ | ೧೪ | ಮಂಮಾಡಿ | ಮಂಡಿ | ,, | ೧೬ | ಕೃತ್ಯ | ಕೃತ್ಯ | ೧೦೯ | ೧ | ಪೊಡವೊಡ | ಪೊಡವಡ |
| ,, | ೨೦ | ಮೆಸಹಿದು | ಮೆನಿಸಿದುರ್ | ೮೧ | ೧೦ | ದಳ | ದಳೆ | ೧೧೧ | ೩ | ಡೊಕ್ಕರ್ | ಪೊಕ್ಕರ್ |

| ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ೧೧೨ | ೨೧ | ನಾಕುಪಾರ್ಶ್ವ | ನಾಕುಪಾರ್ಶ್ವ | ೨೦೦ | ೨೨ | ರಿವೃತ | ಪರಿವೃತ | ೨೭೦ | ೨೨ | ರುಚಿವಿ | ರುಚಿರವಿ |
| ೧೧೫ | ೧ | ನೃಷ | ನೃಪ | ೨೦೫ | ೪ | ಗೊಳಿದ | ಗೊಳಿಸಿದ | ೨೭೧ | ೧೬ | ಪ್ರಭೆಯಾ | ಪ್ರಭೆಯೋ |
| ೧೧೮ | ೨೧ | ಸಂಘಟಿಂ | ಸಂಘದಿಂ | ೨೧೧ | ೯ | ಬಂದವ | ಬಂದನವ | ,, | ೨೬ | ವೆಗುಂ | ಮನೆಗುಂ |
| ೧೨೨ | ೧೦ | ಖರ ಡ | ಖರಖಡ | ೨೧೫ | ೧೮ | ಬಳಿಯಿಂ | ಬಳಿಕಂ | ೨೭೫ | ೯ | ತ್ತಳೆ | ತಳೆ |
| ೧೨೫ | ೧೧ | ನುಡಿಗಳ್ಳಿ | ನುಡಿಗಲ್ಲಿ | ೨೧೬ | ೧೭ | ಮುವ್ಮಾ | ಮುವಾಸ್ಯ | ೨೭೬ | ೧೭ | ಅಗಳೆ | ಆಗಳೆ |
| ೧೨೬ | ೨೪ | ಕಾನಪ | ಕಾನನ | ೨೨೧ | ೮ | ಯ್ಯುಂದಿದಿಂರ | ಯ್ಯುಂದಿಂದಿರ | ೨೭೭ | ೮ | ವಯೆಂದು | ಯೆಂದು |
| ೧೨೭ | ೧೨ | ಕಾತುಕಾ | ಕೌತುಕಾ | ೨೨೨ | ೨ | ಸತಪೆ | ಸತ್ಪದ | ,, | ೧೧ | ಕಾಶಂ | ಕಾಶ |
| ೧೩೦ | ೨೦ | ಯುಮಿಷ್ಠಿರ | ಯುಧಿಷ್ಠಿರ | ,, | ೯ | ಷೇಖರ | ಶೇಖರ | ೨೭೯ | ೭ | ಮುಳಾಳಾಂ | ಮರಾಳಾಂ |
| ೧೩೨ | ೩ | ಳ್ತಡಮ | ಳ್ದಡೆದು | ೨೩೦ | ೨೧ | ನಳಿನಾ | ಸಲಿಲಾ | ೨೮೧ | ೧೭ | ದೀಂಟೆ | ದೀಂಟಿ |
| ,, | ,, | ಪಗಲುವಿ | ಪಗಲುಳ್ಕುಪೀ | ೨೩೨ | ೧೭ | ವವಿ | ವಲಿ | ೨೮೩ | ೩ | ಚಂದ್ರ | ಚಂದ್ರಂ |
| ೧೩೫ | ೧೪ | ಮೂರ್ತಲಮಂ | ಮೂರ್ತಲಮುಂ | ೨೩೯ | ೨೫ | ನಟಿ | ನಟ | ೨೮೫ | ೨೨ | ಮುಟ್ಟ | ಮುಟ್ಟ |
| ೧೩೯ | ೬ | ಪ್ವಿಲಯಾಗ್ನಿ | ಕ್ಷ್ವಿಲಯಾಗ್ನಿ | ೨೪೭ | ೨೩ | ಪಕರ | ಪ್ರಕರ | ,, | ೨೪ | ಮೊಟ್ಟನೆ | ಮೊಷ್ಠಿರೆ |
| ೧೪೩ | ೨ | ಪಿಜಾ ಪಸಂ | ವಿಜಾ ಪಸಂ | ೨೬೨ | ೮ | ವೊ ದಲಾ | ವಾ ದಯೊ | ೨೮೬ | ೩ | ಟೆಂದುಟ | ಚೆಂದುಟಿ |
| ೧೫೩ | ೧೭ | ರಂಜಿಸೆಯುಂ | ರಂಜಿಸೆಯುಂ | ,, | ೧೬ | ಮತ್ತೆ | ಮುತ್ತೆ | ೨೮೮ | ೧೫ | ಬೊಡಚಿ | ವೊಡಚ್ಚಿ |
| ೧೭೩ | ೨೫ | ತಜೊ° | ತಜೊ° | ,, | ೧೮ | ಕಾಸ್ತ್ರಿರಿ | ಕಾಸ್ತ್ರಿರಿ | ,, | ೨೧ | ಚಂತುಟಿ | ಚೆಂದುಟಿ |
| ೧೭೮ | ೭ | ಮೊಂರಿಂ | ಮೇಲಂ | ,, | ೧೯ | ವೈತ | ವೆತ್ತ | ೨೯೦ | ೨೪ | ಟ್ವಲ್ಲ | ಟ್ಟಲ್ಪ |
| ೧೮೨ | ೧೫ | ಯನಸಾಂ | ನಯಸಾಂ | ೨೬೩ | ೨೩ | ನವನ | ನವಳ | ೨೯೧ | ೧೦ | ಮರಳು | ಮರುಳ್ಳು |
| ೧೮೫ | ೨೪ | ಪಪಯುಪೆ | ಪಡೆಯಪೆ | ೨೬೪ | ೧ | ನಾವಿಂಗಿಸಿ | ನಾಲಿಂಗಿಸ | ೨೯೨ | ೪ | ಮಾಡವ | ಮಾಡವೆ |
| ೧೯೨ | ೧೭ | ಕೆಂಳಿದ | ಕೆಂದಳಿ | ೨೬೬ | ೨೫ | ಪಿಂಗದ | ಪಿಂಗದ | ,, | ೧೯ | ನುಡಿಯೆ | ನುಡಿಯಲೇ |
| ೧೯೫ | ೧೧ | ಘಸ | ಘನ | ೧೬೮ | ೪ | ಪ್ರೊಲಿವ | ಪ್ರೊಲಿಳಿವ | ೨೯೪ | ೩ | ವೆರೆಪುದು | ವೆರೆಪುದು |
| ೧೯೮ | ೯ | ಭಧೀಯು | ಭವದೀಯ | ೨೬೯ | ೧೧ | ಜಮಾ | ಜನವಾ | ೨೯೫ | ೬ | ಟೀನ | ಪೀನ |

| ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|---|---|---|---|
| ,, | ೧೬ | ತಿಳು | ತಿಳಿ | ,, | ೧೫ | ಬಲಿಗಟ್ಟಿ | ಬಲಿಗಟ್ಟು | ೩೭೩ | ೫ | ಪೊರಗೆ | ಪೊರೆಗೆ |
| ೨೯೬ | ೯ | ವಾಗಿಳೊ | ವಾಗಿಲೊ | ೩೦೭ | ೧ | ಶ್ಲಾಘ್ಯ | ಶ್ಲಾಘ್ಯ | ೩೭೫ | ೨೧ | ವಸೂನ | ಮಸೂನ |
| ೨೯೮ | ೨೦ | ತಲ್ವ | ತಲ್ಲ | ೩೧೦ | ೨೨ | ಲಘ | ಲಘು | ೩೭೮ | ೧೧ | ಒಡೆದಾ | ಬಡೆದಾ |
| ,, | ೨೩ | ಹಸ್ತಾ | ಹಸ್ತಾ | ೩೧೩ | ೨೧ | ಮುಡಿ | ಮುಡಿದ | ೩೭೯ | ೨೦ | ರಾತ್ರೆ | ರಾತ್ರೀ |
| ೩೦೦ | ೮ | [illegible] | [illegible] | ೩೧೫ | ೮ | ನಾಚು | ನಾಚ್ಚು | ೩೮೬ | ೧೪ | ಅಕ್ಕಟಫ | ಅಕ್ಕಟ |
| ,, | ೨೨ | ಶಾಸ್ತ್ರ | ಶಾಸ್ತ್ರಾ | ೩೧೬ | ೩ | ಚಾಬ್ಚಂ | ಚಾಬಂ | ೩೮೪ | ೧೮ | ದದ್ವತ | ದದುತ |
| ೩೦೧ | ೧೮ | ನವದೆಂ | ನದಿಂ | ೩೧೭ | ೧೭ | ಸುರಿತ | ಸ್ಫುರಿತ | ೩೯೬ | ೮ | ಕುರಾವವ | ಕುರಾವ |
| ,, | ೨೦ | ದೊಡುಮು | ದೊಡು | ೩೨೮ | ೨೩ | ಮಣ | ಮಣಿ | ೩೯೯ | ೧೩ | ಸಿಟಿಲ | ಸಿಟಿಲ |
| ,, | ೨೧ | ಮಡದೆ | ಮಾಡದೆ | ೩೩೪ | ೧೭ | ಗೊಗಳ್ಳು | ಗೊಗಳ್ಳು | ೪೦೨ | ೧೪ | ನಮುದರ್ಗ | ನಮುರ್ಗ |
| ೩೦೨ | ೬ | ಯಾನದ | ಯಾನದೆ | ೩೩೫ | ೧ | ಪೊಡೆ | ಯೊಡ | ೪೦೬ | ೨೦ | ವಿಗಮಿಗ | ಮಿಗಮಿ |
| ,, | ೧೧ | ನೊವ್ವಲೊ | ನೊವ್ವಲೊ | ೩೩೭ | ೭ | ವಿಳಸಿಸಿತ | ವಿಳಸಿತ | ೪೦೯ | ೫ | ಮುರುಘು | ಮುರುಘ |
| ,, | ೧೩ | ಪೆಸೆ | ಪೊಸೆ | ೩೪೦ | ೧೮ | ದ್ವಿರದುಂ | ದ್ವಿರದಂ | ,, | ೮ | ರಭ | ರಭವ |
| ,, | ೧೮ | ನಲಿ | ನಲ್ಲಿ | ೩೪೪ | ೧೫ | ತ್ರಿಜ | ಕ್ಷಿಜ | ೪೧೨ | ೧೦ | ತೇಂದ | ತೇಂದ್ರ |
| ೩೦೩ | ೧೧ | ವಾತಾತಿ | ವಾತಾಗಿ | ೩೪೬ | ೨೨ | ಸತ್ತೂ | ಪತ್ತೂ | ,, | ೧೧ | ಜಯಹ್ರ | ಜಯಹ್ಯ |
| ,, | ೧೨ | ವಿತ | ವಿತ್ತ | ೩೫೨ | ೨೪ | ತವಳಡೆ | ತಳವಡೆ | ೪೧೪ | ೨೪ | ಮತ್ಕೃತಿ | ಮತ್ಕೃತಿ |
| ,, | ೧೫ | ದೊಂವ | ದೊಂಮ | ೩೫೫ | ೭ | ದ್ವಂವ | ದ್ವಂದ್ವ | ೪೧೬ | ೭ | ಯಿಂದ ಬದ್ಧ | ಯಿಂದಬದ್ಧ |
| ೩೦೪ | ೯ | ದಿರಿಗಿ | ದಿರುಗಿ | ೩೫೮ | ೨೪ | ತಕ್ಕೆ | ತಳಕ್ಕೆ | ,, | ೮ | ಸಿದ್ಧಿಸಿ | ಸಿದ್ಧಿಸಿ |

ಶ್ರೀಪ್ರಮಥಗಣೇಭ್ಯೋನಮಃ

ಮಂಗಳಮಸ್ತು

# ರಾಜಶೇಖರವಿಳಾಸಂ

## ಪ್ರಥಮಾಶ್ವಾಸ ಪ್ರಾರಂಭವು.



ವೃತ್ತ॥ ಶ್ರೀಶೈಲಾದಿಪ್ರಸಿದ್ಧಂ ಸುರುಚಿರವಿಜಯಸ್ತುತ್ಯಸುವ್ಯಕ್ತಸತ್ವಾ |
ವೇಶಂ ಕಲ್ಯಾಣಭೂಭೃತ್ಸ್ವದನಧನದಮಿತ್ರಂ ಧರಾಧಾರಧುರ್ಯಂ ||
ವೈಶದ್ಯದ್ಯೋತಿ ಚಂದ್ರೋಪಲಸಿತಧವಳತಾಸಂತತಕಾಂತೋತ್ತಮಾಂಗಂ |
ಶ್ರೀಶೈವಶ್ರೀಯುಮಂ ಪಾಲ್ಕೆಮಗನವರತಂ ಸಂಪಿಕೇಶಂ ಮಹೇಶಂ||

ನಿಜನೇತ್ರಂ ಲೋಕನೇತ್ರಂ ನಿಜಧರಣಿಯಿಳಾಚಕ್ರಭಾರಾವಹಂ ಮೋ |
ಣ್ಣೈಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ ||
ನಿಜರೂಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳೀಮಾತೆ ನಿಚ್ಚಂ |
ನಿಜಮಾದಂ ಸುಪ್ರಮೋದಂ ಕುಡುಗೆಮಗತುಳಶ್ರೀಯುಮಂ ಶೈಲಜೇಶಂ||

ಪರಮುಕ್ತಿಪ್ರಮದಾಮುಖೈಕಮುಕುರಂ ಮೋಹಾಂಧಕಾರೌಘಭಾ
ಸ್ಕರಬಿಂಬಂ ಮುನಿಮುಖ್ಯಮಾನಸಗೃಹಾಂತರ್ಜ್ಯೋತಿ ಚಿದ್ವ್ಯೋಮಪ |
ಸ್ಫುರದಬ್ಜಾಹಿತಮಂಡಳಂ ಶ್ರುತಿಸತೀಸೀಮಂತರತ್ನಂ ಮಹೇ |
ಶ್ವರಪಾದಾಬ್ಜನಖಂ ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್ ||

ಕ್ಷಿತಿಯುಂ ಪಾಲಿಪಗಣ್ಯಪುಣ್ಯಮತಿಯಂ ಪ್ರಖ್ಯಾತಸೌಂದರ್ಯಸಂ |
ಗತೆಯುಂ ಶೈವಮತೈಕಕಲ್ಪಲತೆಯುಂ ಶ್ರೀವಾಗ್ವಧೂಸಂತತ ||
ಸ್ತುತೆಯುಂ ಚಂದ್ರಧರಾರ್ಧದೇಹಯುತೆಯುಂ ಬಾಲಾಬ್ಜನೀಕಾಂತಸ |
ದ್ಯುತಿಯುಂ ಪಾರ್ವತಿಯುಂ ಕೃಪಾವತಿಯನಾಗಳ್ಪಣ್ಣಿಪೆಂ ಭಕ್ತಿಯಿಂ ||

ವೃ॥ ರೇಣುಕರಾಮಪಂಡಿತ ಮಹಾಮರುಳಾರ್ಯರ ಮಾಯಿದೇವರಂ ।
ಜಾಣನ ಜಕ್ಕಣಾರ್ಯನ ಜಗನ್ನುತಮುಲ್ಲಣಮಲ್ಲಣಾರ್ಯರಂ ॥
ಪ್ರೀಣಿತಶಂಭುಶಂಕರಹರೀಶ್ವರರಾಘವಕೇಶಿರಾಜರಂ ।
ಮಾಣದೆ ಬಣ್ಣಿಸುತ್ತೆರಗಿ ಬೇಳ್ಪುವೆಂ ಪರಮಾರ್ಥಸಿದ್ಧಿಯಂ ॥

ವೃ॥ ನುತಿಪೆಂ ವಿಶ್ರುತವೀರಶೈವಶರಧಿಶ್ರೀಸೋಮನಂ ಸೋಮನಂ ।
ಜಿತವಾದಿವ್ರಜಸದ್ಬುಧಸ್ತುತಲಸತ್ಸತ್ಪದ್ಮನಂ ಪದ್ಮನಂ ॥
ತತಗರ್ವೋದ್ಧತದುರ್ವಿದಗ್ಧಜನತಾಸ್ಪೃದ್ಧೀಮನಂ ಭೀಮನಂ ।
ಸತತಾರಾಧಿತ ಶಂಕರೀರಮಣಪಾದಾಂಭೋಜನಂ ಭೋಜನಂ ॥

ಧರೆಯೊಳ್ಶೀಣ್ಬುಟ್ಟಿಪುಟ್ಟುತ್ತುರುಳ್ವನರರ ಮೇಲುಜ್ಜ್ವಕಬ್ಬಂಗಳ
ತ್ತುರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ಕೆಟ್ಟುಪೋದರ್
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ ।
ವರನಾದಂ ಮತ್ತಮಂಗತ್ತಧಿಕ ಶಿವಕವೀಂದ್ರಂಗಳಾನಪ್ಸಾಟಿಯುಪ್ಪರ್॥

ಕಂ॥ ವರ್ಣತ್ರಿತಯಾತ್ಮಜನಕರ ।
ಪರ್ಣಾಪರಮೇಶರೆಂಬನಿಗಮೋಕ್ತಿಯನಾ ॥
ಕರ್ಣಿಸಿ ತನ್ನುತಿಗೆಯ್ವದ ।
ದುರ್ಣರಕೃತಿಕರನೆ ಬದ್ಧವರ್ಣಪರಾಕಂ ॥

ರಸೆಯೊಳ್ಸಪತ್ಕಪತಿಯ ।
ನುಸಿರಲ್ಲದೆ ದಸಮನಯನನಂ ಪೊಗಳದೆ ಮಾ ॥
ನಿಸರಂ ಸುರರಂ ಪೊಗಳ್ವುದು ।
ಕಸವರಮಂ ಕಳೆದು ಕಸಮನಾಂತವೊಲಕ್ಕುಂ ॥

ಆದರಿಂದೆ ಮಹಿತಮಹಿಮಾ ।
ಸ್ಪದನಂ ಶಿವನಂ ತದೀಯಶರಣವ್ರಜಮಂ ॥
ಪಡೆದು ಮುದಮೊದವೆ ಬಲ್ಲಂ ।
ದದೆ ನುತಿಪೆಂ ನುತಿಸೆನಾಳದ ಸುರರಂ ನರರಂ ॥

ವೃ|| ಬರೆಬರೆದಂತದಂ ತೊಡೆದು ತೊಟ್ಟನೆ ಸಿಟ್ಟಿಸಿ ಮೆಲ್ಲನೊಂದುಮಂ|
ಸರಸಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತಿಯುಕ್ತಿಯಂ ||
ವಿರಚಿಸುತಂತುಮಿಂತುಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ |
ಲುರಿಚರ ತೋರ್ಪ್ಪದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪ್ಪನೇ || ೨೩

ಕಂ|| ಅಳಿಗಬ್ಬಿಗನೊರ್ವ್ವಂ ಮಂ |
ಜುಳಯುಕ್ತಿಯನೊಂದನೊಂದಿ ಸರಿವರ್ಪ್ಪನೆಯು||
ಗ್ಗಳ ಕವಿಗೆರತ್ನವೊಂದಂ |
ತಳೆದಪಿ ರತ್ನಾಕರಕ್ಕೆ ಸರಿವಂದಪುದೇ || ೨೪

ಸಕಳಕಳಾನಿಧಿಸಿಕಟದೆ |
ಸುಕರರಸಪ್ರಕಟಕಾವ್ಯಮೆಂಬಮೃತಪಯೋ ||
ಧಿ ಕರಂ ಪೆರ್ಚ್ಚುಗುಮಲ್ಲದೆ |
ಕುಕವಿಬುಧಪ್ರಭೃತಿಯಿದಿರೊಳೇಂ ಪೆರ್ಚುಗುಮೇ || ೨೫

ಕೃತಿಕೃತಕೃತಿಯುಂ ಕ್ಷಿತಿಯೊ |
ಳ್ಮತಿರಹಿತರ್ತ್ತಳಿಯರೆಂದು ಪಳಿಯಂ ಮುಳಿಯಂ ||
ರತಿಲಾಲಸ ರಮಣೀಸಮು |
ರತಿಯಂ ಕ್ಲೀಬರ್ಕ್ಕಳೆಂತುಮೇನರಿದಪರೇ || ೨೬

ಪೇರೆನಿಸಿ ಮಿಸುಗುವಲರ್ಗ |
ಳ್ಪೀರುವನರುಗಂಪಿನೊಳ್ವಿಶೇಷಮನರಿವಂ ||
ಪಾರಡಿ ನಾನಾಕೃತಿಯೊ |
ಳ್ತೋರುವನವಭಾವಭೇದಮಂ ಬುಧನರಿವಂ || ೨೭

ವೃ|| ಭುವನವಿದೆ ಭೋಜರಾಜನ ಮಹಾಸಭೆಯೊಳ್ಬುಧಶಾಸ್ತ್ರಕೋವಿದ |
ಸ್ಸರ್ವಿ ಸಲೆ ಪೊಣ್ಮೆ ಪಾಡುವವರೇಸಿರರೇ ತೆಗೆ ಕಾಳಿದಾಸಮು ||
ಖ್ಯವಿವಿಧಸತ್ಕವೀಂದ್ರರ ಜಸಂ ಪಿಡನಿನ್ನುಮಿರುತ್ತೆ ತೋರ್ಪವೋ |
ಲವರ ಜಸಂ ವಿರಾಜಿಪುದೆ ಸತ್ಕವಿಯೊಳ್ಸಲೆವರ್ಪ್ಪನಾವನೋ || ೨೮

ಕಂ|| ಕಡಿವಡೆದುದೊ ನಂಜಿನ ಮು |
ಳ್ಳುಡಿದುದೊ ಕರ್ಬೊನ್ನ ಸರಳೆ ಕೀಲಿಸಿದುದೊ ಮೇ||
ಣಡರ್ದುದೊ ಮೂಕಗ್ರಹಮೆನೆ |
ಮಿಡುಕದು ಖಳರಸನೆ ಸುಕವಿಕಾವ್ಯಸ್ತವದೊಳ್ || ೪೧

ಇಲ್ಲದದೋಷಮನಲ್ಲಿಯೆ |
ಸೊಲ್ಲಿಪನದನೆಲ್ಲಿ ತರ್ಪ್ಪನೋ ಖಳನಿದನೆ ||
ನ್ನಲ್ಲಿ ನೆರೆ ತಿಳಿಪೆನಬ್ಧಿಯೊ |
ಳಿಲ್ಲದವಿಷಮುಂ ಮಹಾಹಿಯೊಳಂ ತೋರದೆ ಪೇಳ್ || ೪೨

ಖಲಕರ್ಣಬಿಲದೊಳಿಳಿದು |
ಜ್ಜ್ವಲಕೃತಿರಸದಿಂದೆ ನಂದಿತಕ್ಕುಂ ದ್ವೇಷ ||
ಜ್ವಲನಮದಲ್ಲದೆ ತನ್ಮ್ರಿಪಿ |
ವಲಯಮನಾವರಿಸಿ ಪೊಗೆಯದೇಂ ತೋರುಗುಮೋ || ೪೩

ಘನಮಾರ್ಗಸುಭಗಸತ್ಕಾಂ |
ತಿಸಂಯುಕ್ತಂ ವಿಗತದೋಷಮಮೃತರುಚಿಸ್ಪ ||
ರ್ಧಿ ನವೀನಕಾವ್ಯರವಿ ದು |
ರ್ಜನಘೂಕಪ್ರಜಕಸಹ್ಯಮುಂ ಪುಟ್ಟಿಸುಗುಂ || ೪೪

ತಿಳಿದನಿತನನುಭವಿಸಿ ನೆರೆ |
ತಿಳಿಯದುದಂ ತಿಳಿದರಿಂದೆ ತಿಳಿವುದು ಕೃತಿಯೊ ||
ಳ್ಪೊಳೆವರ್ಥಮನದನೆ ಖಳಂ |
ತಿಳಿಯದೆ ತಾಂ ಪಳಿಯೆ ಪಳಿಗೆ ಪಕ್ಕಾಗಿರನೇ || ೪೫

ಸಲೆ ಸತ್ಕೃತಿಯೊಳ್ದೋಷಮ |
ನೆಲಸದೆ ನಡೆ ನೋಡಿನೋಡಿ ಕಾಣದೆ ಮನದೊ ||
ಳ್ಮಲಮಲನೆ ಮರುಗುವೀಕೋ |
ಟಲೆಯಿಂ ಖಳನೆಂತು ಬರ್ದುಕುವಂ ಭೂತಳದೊಳ್ || ೪೬

ಅದರಿಂ ದೋಷಾಭಾಸಮು |
ನೊದವಿಪರೊಂದೆಡೆಗೆ ದುರ್ಜನಸ್ತುತ್ಯತು ಎಂ||
ಬುದನನುಕರಿಸಿ ಕವೀಂದ್ರ |
ರ್ಪುದಷಿಂ ಕೃತಿಯೊಳ್ವರೋಪಕೃತಿ ಪರತಂತ್ರರ್ || ೪೭

೦|| ಪಳಿಯುಲ್ಬಲ್ಲಂನೆಗಳ |
ಲ್ಬಳನೇಂ ಬಲ್ಲನೆ ನಪೀನಕಾವ್ಯಮನಿಳೆಯೊಳ್ ||
ತೊಳಗುವರವಿಯುಂ ಮುಸುಳಿಪ |
ಜಳಧರಮದರಂತೆ ಜಗಮನೇಂ ಬೆಳಗುಗುಗುಮೇ || ೪೮

ಸುಕವಿಗುಣರಚಿತಕೃತಿಜಂ |
ಪಕಮಾಲಿಕೆಗಕಟ ಮಳಿನನಮಳಿನ ಸುಮನಃ ||
ಪ್ರಕರಮನಲೆದೆರಗುವಧೂ |
ರ್ತಕದಂಬಭ್ರಮರನಿವಹಮೇ ನೆರಗುಮೇ || ೪೯

ರಸಿಕಕವಿರಚಿತಕೃತಿಮಾ |
ನಸದೊಳ್ವಿಹರಿಪವಿದಗ್ಧ ವಿಮಳಮರಾಳಂ ||
ವಸಿಯಿಕುಮೆ ಕುಕವಿಕೃತಕೃತಿ |
ವಿಸರತ್ಪಲ್ವಲದೊಳಬುಧಬಕಸೇವಿತದೊಳ್ || ೫೦

ವೃ|| ಒರೆಯೆ ಸುವರ್ಣರೇಖೆ ಮಿಗೆ ಬಾರದೊಡಂ ಪೊಸಬಿನ್ನದಂತೆ ಕಂ|
ಡರಸಿದೊಡಿಕ್ಷುಕಾಂಡಮೆನೆ ಸೀಯ್ಯನೆ ಸದ್ರಸಮುಣ್ಮದಿರ್ದೊಡಂ ||
ಸರಗೊಳಿಸುತ್ತೆ ತಾಳೆ ಮಣಿಮಾಲಿಕೆಯಂತೆ ಕೊರಲ್ಗೆ ಕಾಂತಿಯಂ |
ನೆರಪದೊಡಂ ರಸಜ್ಞಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್ || ೫೧

ಕಂ || ಕವಿವಿಬುಧರ ಕಿವಿಯೊಳ್ಪೊ |
ಸುವನವರಸಮಿಳಿದು ತೀವಿ ತನುವಂ ಮನವಂ ||
ಕವಿದು ಪೊರಸೂಸಿತೆನೆ ಪೊ|
ಣ್ಮುವಸುಖಬಾಷ್ಪಂ ತುಳುಂಕೆ ಸೇಳ್ವುದು ಕೃತಿಯಂ || ೫೨.

ಜ್ಞಾನಸಿದಾಸನಾಸತಜನಪ್ರಸರಾಮರಭೂರುಹಂ ಸುಧಾ |
ಭಾನುಸಮಾನಕೀರ್ತಿ ಶಿವಮೂರ್ತಿ ಮುನೀಶ್ವರ ಚಕ್ರವರ್ತಿ ಧಾ||
ತ್ರೀನಪಿತಾನವಾಸಿತಪದಂ ಪಡೆದೊಪ್ಪಿದನುತ್ಪ್ರಭಾವನು |
ದ್ಧ್ಯಾನನವೀನ ಸಾಮಜರಪುಂಗವಸಂಗಜಮಾನಮರ್ದನಂ || ೬೯

ಆಶಿವಯೋಗಿಹಸ್ತಕಮಲೋದರದೊಳ್ಮಿಗೆ ಪುಟ್ಟಿ ಭಕ್ತಿಯಿಂ |
ಶ್ರೀಶಿವನಂಘ್ರಿಯಂ ಭಜಿಸಿ ತತ್ಕೃಪೆಯಿಂ ಘನಶಿಷ್ಯವೃಂದಮಂ ||
ದೇಶಿಕಶೇಖರಂ ಪಡೆವುತಾತ್ಮಸಮಾನರನುರ್ವಿಗನ್ನರಾ |
ಪೀಠಸೆಸಿಷ್ವನಾಮ್ನಮುಧಿರಾಮತೆವೆತ್ತಿರೆ ತೋರ್ದನೂರ್ಜಿತಂ || ೭೦

ಶಿವನ ಗುಣಂ ಪುರಾಂತಕನ ವಿಕ್ರಮಮಿಂದುಕಳಾಕಪರ್ದನ|
ತ್ಸವಮುಮಿರಾಜಭೂಷಣನ ನ್ಯೈಪುಮಹೇಶನ ಭಾಗ್ಯಮುಂಬರಾ ||
ಧವನ ಜಸಂ ಗಿರೀಶ್ವರನ ಗೌರವಮೊಬ್ಬುಳಿಗೊಂಡು ಪುಟ್ಟಿದಂ |
ತೆವ್ರೊಳೊಗೆದಂ ತದೀಯ ಕರಕಂಜದೆ ದೇವಣಸಿದ್ಧದೇಶಿಕಂ || ೭೧

ಕಂ|| ಧರಣೀರಮಣೀಹೃದಯಾಂ |
ಬುರುಹದಪ್ರೋತ್ತಿರೆದು ತೋರ್ಪ್ಪದನುಗೂಡೊಳ್ಗ ||
ಸುರಕರ್ಣಿಕೆಯೆನೆ ರಾಜಿಪ |
ವರಮಠದೊಳ್ಗುರುಪಂಗಸನೆ ರಂಜಿಸಿದಂ || ೭೨

ವೃ|| ಶಿವಪೂಜಾರತಿಯಿಂ ದಶೀಶ್ವರಜಯಪ್ರಾಗಲ್ಭ್ಯಸದ್ವೃತ್ತಿಯಿಂ |
ವಿವಿಧಾಮ್ನಾಯಮಹಾರದಿಂ ಶರಣಗೋಷ್ಠೀಸಾರಸಾಮ್ರಾಜ್ಯದಿಂ ||
ಭುವನಸ್ತುತ್ಯನಶೇಷಶಿಷ್ಯತತಿಯಿಂ ತಾನೊಪ್ಪಿದಂ ಶಂಭುಸಂ |
ಭವತದ್ರೇಣುಕರೂಪ ದೇವಣಮಹಾಯೋಗೀಂದ್ರ ಪಂಚಾನನಂ || ೭೩

ಕಂ|| ವರವಾಣಿ ವಿಬುಧಸೇವಿತ |
ಚರಣಾಂ ಕಲಾನಿಗರ್ಭನಾಗಿಯುಮುಜನಂ |
ಶಿರೆ ಬಡಬುಜನೆನಿಸದೆ ತ |
ದ್ಗುರುಕರಕಂಜಾತಜಾತನೆನಿಸಿದನೀಶಂ || ೭೪

ವೃ|| ಮಣಿಯುದಮೂನ್ಯರಿಲ್ಲ ತಲೆವಾಗದವಾದಿಗಳಿಲ್ಲ ಬಂದು ಸಂ |
ದಣಿಸದಸಂತರಿಲ್ಲ ನಡೆನೋಳ್ಪೊಡೆ ಬಾರದರಾಜರಿಲ್ಲ ಕೂ ||
ರ್ತ್ರಣಿಸದಧೀರರಿಲ್ಲ ನುತಿಗೆಯ್ಯದಕಬ್ಬಿಗರಿಲ್ಲ ಸಾರಸ |
ದ್ಗುಣಮನೆನಲ್ಧರಾತಳದೊಳೊಪ್ಪಿದನಾಚಿಕವೀರದೇಶಿಕಂ || ೭೫

ಕ್ಷೀರಪಟೀರಹೀರಘನಸಾರಸುಶಾರದನೀರದೋರುಮಂ |
ಪಾರತುಷಾರವಾರವರಹಾರಸರೋರುಹಸಾರಸಾರಿಬ್ಭಂ ||
ದಾರಕವಾರಗಾರುಚಿರನಾರದತಾರಸವಿೂರಭುಗ್ವರೋ |
ದ್ಧಾರಯಶಂ ವಿರಾಜಿಸಿದುದೆಣ್ದೆಸೆಯೊಳ್ಚಿಕವೀರದೇವನಾ || ೭೬

ಜನನುತಶಾಂತಿಭೂಷನ ಜಗಜ್ಜನವಂದ್ಯನ ಧರ್ಮಪೂರ್ಣಕೋ |
ಶನ ಧರಣೀಶಪೂಜ್ಯನ ಶುಭಾವಹಭಾವನ ಶೈವಪಾರಿಜಾ ||
ತನ ಮಧುರಸ್ವಭಾವನ ಮಹಾಮಹಚಿತ್ತನ ಮನ್ಮಥಾರಿರೂ |
ಪನ ಚಿಕವೀರದೇವನ ಚಿದಂಬರಶಂಬರಜಾತಪುತ್ರನಾ || ೭೭

ಕರಕಂಜಾತಸುಜಾತನುತ್ತಮಜನಾನಂದಾಬ್ಧಿರಾಕಾಸುಧಾ |
ಕರನುದ್ವೃತ್ತವಿತಾಲತಾರ್ಜಿತಯಶಃಪುಷ್ಪೋದಯಂ ಸಾಂಬಶಂ ||
ಕರಪಾದಾಬ್ಜಮಧುವ್ರತಂ ಸುಕವಿವೃಂದಸ್ತೋತ್ರಪಾತ್ರಂ ಷಡ |
ಕ್ಷರದೇವಂ ಸರಸಪ್ರಬಂಧಸುಭಗಾಂಭೋಜಪ್ರಭಾವಲ್ಲಭಂ || ೭೮

ಕಂ|| ಜಸವೆತ್ತು ಪೆಸ್ಮೆ ಮಿಗೆ ರಂ |
ಜಿಸೆ ವಸುಧಾತಳದೊಳವಿಳಕಳೆಗಳನೊಳಕೊಂ ||
ಡೆಸೆವಬುಧರಾಜರಾಸಂ |
ದಿಸಿ ಸಲೆ ಕೊಂಡಾಡಿ ಕೂರ್ಮೆಯಿಂದಿಂತೆಂದರ್ || ೭೯

ಎಳವರೆಯದೊಳವಿಳಕಳಾ |
ವಿಳಾಸಮಂ ಕಂಡು ಮೆಚ್ಚಿಬರೆ ಕವಿತಾಕೋ ||
ಮಳೆಯುವಗ್ಗದೆಯಿತ್ತುಂ ಯುತಿ |
ತಿಳಕಂ ನೀನೆನಿಪುದಿಳೆಗಿದಚ್ಚರಿಯಲ್ತೆ || ೮೦

ಇಂಗಡಲೊಡನಾಡಿಯೊ ಸೆರೆ |
ದಿಂಗಳಸೋದರವೊ ಸುದತಿಯಧರಾಮೃತದಿಂ ||
ಪಿಂಗಿದು ಗುರುವ್ರೊ ಸುಧಾರಸ |
ಮಂ ಗೆಲ್ದಂಕವೊ ಭವದ್ವಚಸ್ಸಮುದಯುವೋ || ೨೧

ವೃ|| ನಿನಗೆನಿಸರ್ಗ್ಗಮತ್ತೆ ನಿರಹಂಕೃತಿ ನಿರ್ಮ್ಮಲಬುದ್ಧಿ ಶುದ್ಧವ |
ರ್ತ್ತನೆ ಶಿವಯೋಗಮಾಗಮವಿಚಾರತೆ ಸದ್ಗುರುಭಕ್ತಿ ಶೈವಕಾ ||
ವ್ಯನಿವಹಸತ್ಪುರಾಣತತಿತರ್ಕಸಮಂಚಿತಷಟ್ಸ್ಥಲಾಂಕಶಾ |
ಸ್ತ್ರನಿಚಯಸಾರದರ್ಶನಮಿಳಾಪತಿಪೂಜಿತಪಾದಪಂಕಜಾ || ೨೨

* ಎಂದು ಮನಂದಂದು ಕೀರ್ತಿಸಿ ಮತ್ತಮಿಂತೆಂದರ್

ಶ್ರೀಮತ್ಕೈಲಾಸದೊಳ್ಶಂಕರನಿರೆ ಸಭೆಯೊಳ್ಬಂದು ಪೆಯ್ಮೆಕ್ಕಿಬೊಮ್ಮಂ|
ಸ್ವಾಮಿ ಶ್ರೀಕಂಠನಿಮ್ಮಾಜ್ಞೆಯೊಳ್ ಗುಹನನೊಲಿಲ್ದೋಗಿಸಲ್ಕೆಂದು ಮುನ್ನಾಂ||
ಪ್ರೇಮಂಚೆತ್ತೊಪ್ಪುವೋಂಕಾರಮನೆಬರೆಯೆ ಕೋರ್ಧ್ವೋಸ್ಥಾನೋಬ್ರೂಹಿಯಿಂದೆಂ|
ಬೀಮಾತಂ ಪೇಳೆಮುಂಕೇಳ್ವುದು ಲಘುವೆನೆ ಪೊಯ್ದಂ ಕಶಾದಂಡದಿಂದಂ||

ಕಂ|| ವೇದಾಂಗವದನನಿವನೊ|
ಳ್ವಾದಿಸುವುದಯುಕ್ತಮೆಂದು ತತ್ಪ್ರಣವಕ್ಕಾ ||
ನೋದಿದೆನುಚಿತಗ್ರಂಥಮ |
ನಾದರದಿಂ ದೇವ ಪನ್ನೆರಳ್ಸಾಸಿರಮಂ || ೨೪

ವೃ|| ಅದನಾಕರ್ಣಿಸಿ ಜಾಡ್ಯಬುದ್ಧಿ ತೊಲಗೆಂಪೇಳ್ತಂದಸಿಲ್ಲಿಂಪೆಮೋ |
ಲೆ ದಯಾವಾರಿಧಿ ನೀಂ ನಿರೂಪಿಸೆನೆ ಕೇಳೆಂದೋದಿದಂ ಶಂಭು ಸಂ ||
ಮದದಿಂ ದ್ವಾದಶಲಕ್ಷಮಂ ಪ್ರಣವದರ್ಥಗ್ರಂಥಮಂ ಕೇಳ್ದು ಷ |
ಡ್ವದನಂ ದ್ವಾದಶಕೋಟಿಯುಂಟೆನೆ ಮಹೇಶಂ ಮೆಚ್ಚಿ ಸಂಪ್ರೀತಿಯಿಂ|| ೨೫

ಅಂದಗಜಾತೆಗಾನೊರೆವಕಾಲದೊಳಾಲಿಸಿ ಬಾಲನೀಕುಮಾ |
ರಂ ದಿಟಮಂತದಂ ಮರೆದೆನಲ್ಲೆನುತುಂ ಪೊಗಳ್ದಲ್ಲಿ ಪೋಗು ನೈ ||
ಪೊಂದಿದಚೋಳಮಂಡಳದ ಶೈವಸಮೂಹಕೆ ಮಂತ್ರದರ್ಥಮಂ |
ಕುಂದದೆ ಬೋಧಿಸೆಂದುಸಿರ್ದುಕಂಜಜನಂ ಕರೆದೊಲ್ದು ಶಂಕರಂ || ೨೬

ವಾಗೀಶಾಹ್ವಯವೂಂತು ಪುಟ್ಟಿ ತಿಳಿ ಸೀನೀಮಂತ್ರದರ್ಪಂಗಳಂ |
ಪೋಗೆಂದಂಬೊಡಗೂಡಿ ಮೇಣ್ಕಳಿಪೆಬೋಳೋರ್ವೀತಳಕ್ಕೈದಿ ಸ ||
ದ್ವಾಗಂ ಕೈಮಿಗೆ ತಾಮುವಂಗರಿ ಪುವಾಗಳ್ಪಿನ್ನೈನಾರರಿಂ |
ಬಾಗಿದ್ರ್ಪಂವಿತಿಹಾಸಮಂ ದ್ರವಿಡಭಾಷಾಭೇದದಿಂ ಪೇಳಿದರ್ || ೨೭

ವೃ|| ಆಕಥೆಯಂ ಕೃತಾರ್ಥಸುಮನೋಲತೆಯಂ ವರಮಲ್ಲಣಾರ್ಯರು|
ರ್ವೀಕವಿರಾಜರಾಜಿನುತವಾಗಿರೆ ವರ್ಣಕದಿಂದೆ ಭಾವರ ||
ತ್ನಾಕರವಾಗಿ ಪೇಳ್ದರದನೊಪ್ಪಿರೆ ವಸ್ತುಕವಾಗಿ ಪೇಳ್ವುದಾ |
ಲೋಕಿತಕಾವ್ಯಬೃಂದನೊಳಗಿಲ್ಲದ ಮಂಜುಳಯುಕ್ತಿಪುಂಜದಿಂ || ೨೮

ವ|| ಎನೆ ನಾನಂದಂದು

ಕಂ|| ಮೃದುಮಧುರ ಪದವಿಲಾಸಾ |
ಸ್ಪದರಸವಿಸರಪ್ರಕಾಶಕರ್ಣಾಟಕವಿ ||
ತ್ತದೊಳೊಪ್ಪನೆ ಸಸರ್ವಹಿದ |
ನ್ಯದಚಿಕರಸುದಿತಮಾರ್ಗದಿಂದಿದನೊರೆವೆಂ || ೨೯

ನೊದಲೊರೆದ ಕೃತಿಗಳಿರೆ ಸೇ |
ಳ್ವುದು ಮಿರೆಯುದಿಪೆಸ್ವ ದಿಕ್ಕೆ ವಿಬುಧನೊರ್ಮದಲಿ ||
ಗ್ಗದಸಕ್ಕದಮುರೆ ಕನ್ನಡ |
ಮುದಮಿರೆ ರಂಜಿಸವೆ ಕರ್ಣಕಮಸೀಯುತೆಯಿಂ || ೩೦

ಕಾವ್ಯ ಮಿಸಿದುರ್ವಿಬುಧನು|
ಸೇವ್ಯಂ ಸವರಸಮುದಿಸಿ ಛಂಗವಿರಹಿತಂ ||
ಭವ್ಯಗುಣಮಿಸಿ ಕುಜನಾ|
ಭಾವಂ ಮುತ್ಸ್ವ್ರ ಹಮುತ್ಸ್ವ್ರತಿಪ್ರದಮುಶ್ವಿ || ೩೧

ವೃ|| ಸರಸಿಜದಂತೆ ಸಾರಗುಣನಾರ್ದ್ರಪದಂತೆ ರಸಾರ್ದ್ರಮುರ್ಕಸಂ |
ತಿರಿಕ್ಷಸವಾದ್ರಶೋಫ ವಸಿತಾಬಸದಂತಿರೆ ಭಾವಜಾತಿಬಂ ||
ಧುರಮುಮರಾದ್ರಿಯಂತೆ ವಿಬುಧಾವಳಿಸೇವಿತಮುಂದುಬಂಬದಂ |
ತಿರೆ ಸುಕರಪ್ರಸಿದ್ಧಮಿಸಿಕುಂ ವಿಳಸತ್ಕೃತಿ ಸಸ್ಸನೋಜ್ಞನಾ || ೩೨

ಕಂದ|| ನರನೊಮ್ಮೆನೆನೆಯೆ ಸಲೆ ಶಂ !
ಕರನಂ ನೆರೆ ಮಾಳ್ಪಮಹಿಮೆಯುಂ ತಳೆದಷಡ ||
ಕ್ಷರಮಂತ್ರದಮಳಕಥನಮು |
ನೂರೆವೆನ್ನಿಂದನ್ಯರೊಳರೆ ಧನ್ಯಜ್ಜಗದೊಳ್ || ೮೯
ಅಂದೆಂತೆಂದೊಡೆ

ವೃ|| ಅಂಭಃಕುಂಭೀನಕುಂಭೀನಸಮುಕರ ಮಹಾಕೂರ್ಮಕೀರ್ಣೋರ್ಮಿಮಾಲಾ
ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧ್ರವಿಸ್ಫಾರವಿದ್ಯು ||
ತ್ಸಂಭಿನ್ನಾಂಭೋಭೃದುದ್ಯತ್ತಟಚಟುಳಜಳನ್ಮೀನಫೇನಪ್ರತಾನಂ |
ಶುಂಭದ್ಗಂಭೀರಿಮಂ ರಂಜಿಸಿದುದಮಮ ದತ್ತೇಂದ್ರಭದ್ರಂ ಸಮುದ್ರಂ ||

ಕಂ|| ಯಮುನಾನದಿ ರೋಮಾಳಿವೊ |
ಲಮರೆ ಮಹೀರಮಣಿ ನಿಜಮಹೀಧರಜಘನ ||
ಕ್ಕೆ ಮುದಂ ಮಿಗೆ ತೆಗೆದುಟ್ಟವೊ |
ಲೆ ಮನೋಜ್ಞಾಂಬರಮನೆಸೆದುದಂಬುನಿಧಾನಂ || ೯೧
ವ|| ಮತ್ತಮಲ್ಲಿ ||
ತನುಜನ ತೇಜಮನಪಹರಿ |
ಪನಿವನೆನುತ್ತಬ್ಧಿ ಮುಳಿದು ಸಂಧ್ಯಾರುಣಸೂ ||
ರ್ಯನ ಕಿರಣಮನುರೆ ಸೆರೆವಿಡಿ |
ದನೆನೆ ವಿರಾಜಿಪುದು ವಿದ್ರುಮಂ ಸದ್ರುಚಿಯಿಂ || ೯೨
ಜಲಕರಿನಿಕರಂ ಪುಷ್ಕರ |
ಮಲರೆ ಕರಂ ನಿಮಿರೆ ಫೂತ್ಕರಿಸೆ ಸಿಡಿದಲಸ ||
ಜ್ಜಲಕಣಮನಮಳಮುಕ್ತಾ |
ಫಳಮೆಂದುರೆ ಮುಗ್ಧಖಚರಿಯುಕ್ಕೈಯಿಡುವರ್ || ೯೩
ಪಡೆದುದುಗಡ ಮೊದಲಿಂದುವ |
ಕಡಲಿದು ಮೇಣಿಂದು ಪಡೆದುದುಡುವಿತತಿಯನೆಂ ||
ಬೆಡೆಗೆಡೆಯಾದುದು ಜಡನಿಧಿ |
ಸಿಡಿದೆಡೆವಿಡಿದಿಡಿದವಾರಿಕಣಗಣದಿಂದಂ || ೯೪

ಎಲೆಜಲಧಿ ಜಿಷ್ಣುಚಕಿತಾ |
ಜಲಪಾಲಕ ಕಾವುದೆಮ್ಮನೆನುತುಂಕರ್ಗ್ಗ ||
ೞ್ತಲೆ ಖರಕರಕರಭಯುವಿ |
ಹ್ಪಲಮಿರ್ಪ್ಪಂತದರತೀರದೊಳ್ಮುಗಿಲೆಸೆಗುಂ || ೯೬

ಜಲನಿಧಿ ಜಲಮುಂ ಜಲಷ್ಟ|
ತ್ಕುಲಕ್ಕೆ ನಲಿದಿತ್ತುದತ್ತಮಿತ್ತನದೀ ನಿ ||
ರ್ಮಲಸಲಿಲಂ ದೊರೆದುದುಗಡ |
ನೆಲದೊಳ್ಕೊಟ್ಟಂಗೆ ಬಡತಸಂಬಂದಪುದೇ || ೯೭

ಘನದಬರವಪ್ರಯೋಜನ |
ಮೆಸುತರಿದುಂ ಜಡಧಿ ಜಡಮನಿತ್ತುದದಂ ನೆ ||
ಟ್ಟನೆ ಪೊತ್ತುದು ಜಳದಂ ವ್ಯ |
ರ್ಥಸಿಯುಕ್ತಮಿದೆಂದು ಒಗೆಪ್ರೊಡಿದುಚಿತ್ರತರಂ || ೯೮

ವೃ|| ಜಲನಿಧಿ ಜಂಘವೈರಿಗರಿಯುಂ ಗಿರಿಯುಂ ಜಡು ಪೇಗಮೊಂದು ಬಂ |
ದುಲಿವವೊಲೊಪ್ಪೆ ಸುಸ್ತನಿತಮುಜ್ಜತಟಿತ್ಕರವಾಳನಾಂತತ ||
ಜ್ವಲದಭಟಂಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿಭೂ |
ತಲದೊಳೆ ಸತ್ತ್ವಶಾಲಿ ಪಗೆಗೇಂ ಮರೆವೊಕ್ಕನನೀಯಲಾರ್ಪ್ಪನೇ || ೯೯

ಕಂ|| ಎರಗಿದಸಿರಮುಗಿಲೊಳ್ನೆರೆ |
ಮಿರುಗುವ ಮಿಂಚುಗಳನುಡಿದು ಪಿಡಿದನೊ ಕಡುಪಿಂ ||
ತೊರೆಯೊರೆಯುಂ ತೆರೆಗೈಗಳೆ |
ನುರದೆಸೆ ಕಮ್ಮೀಂಗಳೇಂ ಮನಂಗೊಳಿಸಿದುವೋ || ೧೦೦

ವೃ|| ಎನ್ನೊಳ್ಪುಟ್ಟಿದಚಂದ್ರನಿಂದೆ ಪಡೆಗುಂ ಸಸ್ಯಾಳಿ ಸಂಪತ್ತನಂ |
ತೆನ್ನೊಳ್ಪುಟ್ಟಿದ ಲಕ್ಷ್ಮಿಯಿಂದೆ ಪಡೆಗುಂ ಸೌಭಾಗ್ಯಮಂ ಧಾತ್ರಿ ಮೇ ||
ಗೆನ್ನೊಳ್ಪುಟ್ಟಿದವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು ತಾ |
ನೆನ್ನೊಳ್ಪೇಳ್ಸರಿಯಾವನೆಂದುಲಿವವೋಲುದ್ಘೋಷಿಕುಂ ಸಾಗರಂ || ೧೦೧

ಅಳಿಯುಂ ಪೂಗಣ್ಣನೆನ್ನೀಮಗಳೆ ಚಪಳೆ ಪುತ್ರಂ ಕರಂ ರಾಜಯುಕ್ಷ್ಮಾ
ಕುಳನೆನ್ನೈಶ್ವರ್ಯಮುಂ ನಿರ್ಜರರೆ ಕವರ್ದರೆನ್ನೊಳ್ಪಿಸಂ ಪುಟ್ಟಿತೆನ್ನಂ ||
ಕಳಶಪ್ರೋದ್ಭೂತನಂದೀಂಟಿದನಕಟ ಮಹಾಭಂಗಮಂ ತಾಳ್ದೆನೆಂದೆಂ |
ದೊಳಗಂಭೋರಾಶಿಚಿಂತಾಗ್ನಿಯನೆತಳೆದವೋಲೌರ್ವನಂತಸ್ಥಮಿರ್ಕುಂ||೧೦೨

ವಚನ|| ಮತ್ತಂತಡಿಗೊಂಡೆಡೆವಿಡದೆ ಮಡಲ್ತು ಬಳೆದ ತರುಣತಮಾಲತರುವನದೊಳಿಡಿದು ಕಡುಗೊರ್ಬ್ಬಿ ಪರ್ಬ್ಬಿದಮುಬ್ಬು ಮಿಗವಕ್ಕೆಗನೊಳಾದಪಗೆತನಮುಂ ಬಗೆಗೊಂಡು ತಜ್ಜನಕವನಸಿಧಿಯುಂ ಕನಲ್ದು ಸುತ್ತಮೊತ್ತರಿಸಿ ಮೊತ್ತಂಗೊಂಡು ಪತ್ತುಗೆಗುಂದದೊತ್ತಿಮುತ್ತಿದುದೆಂಬೊಪ್ಪಮನಪ್ಪುಗೆಯ್ದುಳಿಯ ಬಣ್ಣಮುಂ ಪಳಿದು ನೀರುಣಲೆಂದುಸಾರೆವಂದು ತೀರದೊಳ್ನಿಂದ ನೀರದಂಗಳ ಪಾರದಿಂ | ಆನೀರದಂಗಳೊಳ್ವಾರಿವಾಹವಾಹನೊಳೊದವಿದ ವೈರದಿಂ ವಾರಿಧಿಯೊಳ್ಪೊಕ್ಕಭೂರಿಭೂಧರಂಗಳ್ಪಳಂಚಲೆಂದು ಪಟುತೆಯಿಂದಿದಿರ್ಚ್ಚಿ ನಿಂದುವೆಂಬಂತೆ ಸಾತ್ತ್ರಂವದಂ ಪ್ರತಿಗಜವ್ರಜಮೆಂದು ಸರಿಸದೊಳ್ನಿಂದು ಕೊಡಂಕೆ ಚಲಿಸೆ ಕೋಡಮೊನೆಯೊಳೀಡಿರಿಯೆ ಮುಗಿಲ್ಮುತ್ತುಗಳ್ಪೆರಸು ಜಲಕಣಗಣಂ ಝಲ್ಲನುಗೆ ಮಿಗೆಮೆರೆವಂಬುಸ್ತಂಬೇರಮಂಗಳಿಂ| ಆಸ್ತಂಬೇರಮಂಗಳಸಂಬುದಂಗೆತ್ತು ದಂತಕಾಂತಿಯುಂ ಗೊಂಚಲ್ಮಿಂಚೆಂದು ಗರ್ಜನೆಯುಂ ಪರ್ಜನ್ಯಜನ್ಯಧ್ವನಿಯೆಂದು ಮುಂದುಗೆಟ್ಟು ತೊಟ್ಟನೆ ಕಂಡಕಷೆಗೆ ಬಡಬಂಗಳ್ಕಿ ಶಂಖಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ನೆಗೆದು ತಳರ್ವ ತರುಣ ಮರಾಳಂಗಳಿಂ| ಆ ಮರಾಳಂಗಳ ಗುಂದುರುಗಲ ತುದಿಗಳಿಂ ಕೆದರ್ದುರುಳ್ವ ವಿಮಳಜಳಕಣಗಣಮುಂ ಕಡಲೊಳ್ಬಡಬಾನಲಜ್ವಲಜ್ವಾಲೆಯಿಂ ಶುಕ್ತಿಪುಟಂಗಳ್ಕಿಳಿಲನೆ ಸಿಡಿದೊಡೆದದರಿಂದುಚ್ಚಳಿಸಿದಚ್ಚಮುತ್ತೆಂದು ತುಡುಂಕಲವ್ವಳಿಪ ಖೇಚರಾಂಗನೆಯರಂ ನೆರೆನೆಗೆವಸಿಡುಮಿಂಗಣ್ಗಳಿಂ ಕಂಡು ಕೆಂಬವಳಮೆಂಬ ತಂಬುಲರಸಂ ಸೂಸೆ ಶುಕ್ತಿಯಿಂ ಪೊರಪೊಣ್ಮುವನುಣ್ಮುತ್ತೆಂಬ ಸುಲಿಪಲ್ಲ ಸೂಸುವೆಳಗು ಧಳಧಳಿಸಿ ಪೊಳೆಯೆ ಬೆಳ್ನೊರೆಯೆಂಬಹಸನರುಚಿ ದೆಸೆದೆಸೆಗೆ ಪಸರಿಸೆ ತೊಳಪಸಿಳ್ದೆರೆಯೆಂಬ ನಳಿತೋಳಂ ನೀಡಿನದೀನಾರಿಯರರುಣಸರಸಿಜಮೆಂಬ ಕರತಳಮಂ ಗಳಿಲನೆ ಪೊಯ್ದುರಯ್ಯುಮೆನೆಮೆಯ್ಯುದಿರೆ ಮುತ್ತೆಮುತ್ತೆ ಮೂಣಟ

ಗಹಗಹಿಸಿ ನಕ್ಕಪನೆಂಬಂತೆ ಪವನಹತಿಪ್ರಚಲಿತತರಂಗಸಂಘಸಮುದ್ಘೋಷಣದಿಂ ತಳ್ತುರತ್ನಾಕರಂ ರಮಣೀಯಮಾಗಿಪ್ಪುದಂತುಮಲ್ಲದೆ ||

ವೃ|| ಪವಳಮೆನಿಳ್ಪ ಕೆಂಜಡೆ ಮೊಗಂ ಶತಪತ್ರಮುದೀರ್ಣಫೇನಮೊ |
ಪ್ಪುವಭಸಿತಂ ಕರೋಟಿ ಸುಳಿ ಕಂಬುಕದಂಬಕಮಸ್ಥಿಮಾಲೆಮೀ |
ನ್ಪ್ರವಿಮದಘೂರ್ಣಿತಾಕ್ಷಿ ಜಳಸರ್ಪನೆ ಕೂರಸಿ ವೀಚಿಬಾಹುವ |
ರ್ಣವನವಭೈರವಂಗೆ ಮಣಿಬುದ್ಬುದಕಿಂಕಿಣಿ ಕಣ್ಗೆರಂಜಿಕುಂ || ೧೦

ಅಂತುಮಲ್ಲದೆಯುಂ

ವೃ|| ಘುಳಿಘುಳಿಸುತ್ತೆ ಒಪ್ಪುತೆರೆಯಿಂ ಕರೆಯಿಂ ನೊರೆಯಿಂಬನೊಕ್ಕರಂ |
ಬಳೆದತಮಾಲನೀಲವನದಿಂ ಘನದಿಂ ಜನದಂಬುಗುತ್ತೆ ಸಂ |
ಚಳಿಸುವಪೀನಮೀನಕುಲದಿಂ ಬಲದಿಂ ಜಲದಿಂ ಸಿಡಿಲ್ದಸಿ |
ರ್ಮಳತರಶುಕ್ತಿಯಿಂದೆ ಹರಿಯಿಂ ಕರಿಯಿಂ ಗಿರಿಯಿಂದದೊಪ್ಪುಗುಂ || ೧೨

ವ|| ಮತ್ತಮಾಸಮುದ್ರಂ ರುದ್ರನಂತೆ ವಿಷವಿಷಧರಭರಣನುಂ | ಸುಪರ್ಣಪತಾಕನಂತೆ ಶಂಖಚಕ್ರಕರಾಂಬುಜ ಕಲಿತನುಂ|ವಿರಿಂಚನಂತೆ ಸುರಸಭಾಕಾಂತನುಮಮರಲೋಕದಂತನಿಮಿಷಸಂತಾನಾಶ್ರಯನುಂ | ಅರಣ್ಯದಂತೆ ನಗನಾಗವಿಲಸಿತನುಂ| ದಿವದಂತಹಿಮಕರಮಂಜುಲನುಂ| ಸುರಪಥದಂತುಡುಪತರಣಿಗಮನರಮಣೀಯನುಂ|ದ್ವಿಪಪ್ರವಿಷ್ಟವನದಂತೆ ಸುಪ್ರವಾಳಭಂಗಭಾಸುರನುಂ|ಶರದ್ಘನದಂತೆ ಮುಕ್ತಾಂಬುಕಣಮನೋಹರನುಂ| ಭೂತಲದಂತೆ ಸದಾನದೀನತಾಸಹಿತನೆನಿಸಿರ್ದನಂತುಮಲ್ಲದೆ

ವೃ|| ಯಮಿಯಂತಂಬರದಂತೆ ಹಂಸನಿಲಯಂ ಪದ್ಮಾಭಿರಾಮಂ ರಮಾ |
ರಮನಂತಾನಿಧಿಯಂತೆ ಪುಷ್ಕರಯುತಂ ಮತ್ತೇಭದಂತರ್ಕನಂ ||
ತೆ ಮಹಾಮಾರುತಿಯಂತೆ ಚೈತ್ರಕುಜದಂತುದ್ಯತ್ಪ್ರವಾಳಾಶ್ರಯಂ |
ಸುಮದಂತುತ್ತಮನಂತೆ ಸಂಭೃತರಸ ಶ್ರೀಗಾಗರಂ ಸಾಗರಂ || ೧೨೫

ಪೃಥುತರಮಧ್ಯಕಂಕಣಮೆ ಸುತ್ತಿದ ಪನ್ನಗನಾಗೆ ತತ್ಫಣಾ |
ಪ್ರಥಿತಸುರತ್ನಮಾಗೆ ಮಣಿಸಾನು ಸುರರ್ಪ್ಪರಿದಾಸೆಯಿಂದೆ ಮೇ |
ಣ್ಮಥಿಯಿಸಲೆಂದು ಮಂದರಮನಲ್ಲಿರದಿಟ್ಟರೆನಿಪ್ಪಭಾವಮಂ |
ಕಥಿಯಿಸುವಂತೆ ಮೇರು ಮೆರೆದಿರ್ದ್ದುದುಮಧ್ಯದೊಳಾಪಯೋಧಿಯಾ||೧೨೬

ನುತನಕ್ಷತ್ರಾಭ್ರಷ್ಟಮುಕ್ತಾವೃತಮಮೃತಮಯೂಖಾರ್ಕಸದ್ದರ್ಪಣಂ ತ|
ದ್ಗತಶೃಂಗೋತ್ತುಂಗದಂಡಾಮರವರಸರಿದುದ್ಯದ್ಧ್ವಜಂ ರತ್ನರುಕ್ಛಿ |
ತ್ರಿತಪಾಥೋಭೃತ್ಪಟಂ ಶಂಕರಗೃಹಕಲಶಂ ದೇವರಾಜಾದಿದೇವ |
ಪ್ರತಿಮಂ ಸ್ವರ್ಣಾಚಲಾಲಂಕೃತರಥಮೆಸೆದತ್ತೀಶ್ವರಾವಾಸಯೋಗ್ಯಂ||೧೦೭

ಮೇವಮುಗಿಲ್ಗಳಿಂ ಮುಸುಕಿ ಮೋಹಿಪಭೂಧರಮೊಂದುಪಕ್ಕದೊ |
ಳ್ತಾವರೆಗಣ್ಣನಂತಿರೆ ಧರಾಧರಮೊಂದು ಸಧಾತು ನಿಂದವಾ ||
ಣೀವರನಂತೆ ತಳ್ತಿರೆ ಪೊದಲ್ದುದಿಗಾಣಿಸದಿರ್ದ್ದಸಾಂದ್ರತೇ |
ಜೋವಹಲಿಂಗದಂತೆ ಕನಕಾಚಲಮುಜ್ಜ್ವಲಮಾದುದುರ್ವಿಯೊಳ್ || ೧೦೮

ಕಂ|| ಹರಸಿರ್ಪ್ಪಗಿರಿಯಿದೆಂದಾ |
ದರದೆ ನಭೋಲಕ್ಷ್ಮಿ ಭಗಣವಿಚಕಿಲಸುಮದಿಂ ||
ದಿರದರ್ಚಿಸಿ ಬೆಳಗುವಚಂ |
ಘುರದೀಪದತೆರದೆ ಹಿಮಕರಂ ಬಲವರ್ಪ್ಪಂ || ೧೦೯

ಖರನಖರದೆ ಹರಿ ಗಿರಿಕರಿ |
ವರಶಿರಮಂ ಸೀಳ್ದು ಕೆದರ್ದಮುತ್ತಿನಮಣಿಗಳ್ ||
ತರುಗಳೊಳೆಡೆವಿಡದಮರ್ದಂ |
ತಿರುತಿರ್ಪ್ಪವು ತಪ್ಪಲಲ್ಲಿ ಮಿಗೆ ತಾರಗೆಗಳ್ || ೧೧೦

ಸಾರಸಸಟನಾನಗಕಾ |
ಸಾರಸಮುತ್ಪನ್ನಕಮಳಮಂ ಕೀಳ್ತಾಂತಂ ||
ದಾರಿಯೊಳಲ್ಲದೊಡೆ ನಭ |
ಶ್ಚಾರಿಗೆ ನೆಲನರಿಯೆ ನಳಿನಮೇಂ ದೊರೆದಪುದೇ || ೧೧೧

ನಗದ ಗಗನೇಚರಿಯ ನು |
ಣ್ಗೊಬ್ಬಿಗರುಗುವಮೊಗಂ ಮೃಗಾಂಕನುಂ ಸಂಧಿಸೆ ತ ||
ನ್ಮೃಗಮದತಿಲಕಂ ಪತ್ತಿರೆ |
ಜಗಮರಿಯದೆ ಟಮಿದೆಂಬುದಿಂದುವಕಂದಂ || ೧೧೨

ಗುರುತರತರುತಳದೊಳ್ಕಿ |
ನ್ನರಿಯರ ಸರಕೆಳಸಿ ಬಳಸದಿರೆ ನಿಜಹರಿಣಂ ||
ಹರಿಣಾಂಕಂ ಸಲೆ ನಿಲೆ ತ |
ತ್ತರುಣಿಯರಿದು ಸುಕರಮುಕುರಮೆಂದೀಕ್ಷಿಸುವರ್ || ೧೨೩

ಮುನಿದಿನಿಯುಳಿನಿಯನೊಳ್ದ |
ಲ್ಲನೆದೀವಿದಜಾದಿಯಲ್ಲಿ ಮೈಗರೆದಿರೆ ತ ||
ದ್ವನಿತೆಯ ನಿಡುಜಡೆಗಂಡದ |
ನನುವಿಸುವಂ ರಾಹುವೆಂದು ರಜನಿಪನದರೊಳ್ || ೧೧೪

ಚಪಲಾಕ್ಷಿಯರಾಗಿರಿಯೊ |
ಳ್ತಪನಾತಪಮ್ಮೆದೆ ಸುಟ್ಟೊಡಿರಲಾರದೆ ಪಾ ||
ರಿ ಪಯೋಧರದೆಡೆಯೊಳ್ಳೀ |
ತಪಯೋಜಾಕರದೆ ಪೊಕ್ಕು ಜಳಮಂ ಕಳೆವರ್ || ||೧೧೫

ವೃ|| ವಿರಹಿಣಿಯಂತೆ ತದ್ಗಿರಿಯ ತಂಗೊಳದೊಳ್ನೆಲಸಿರ್ಪ್ಪಪದ್ಮಿನೀ |
ತರುಣಿಯ ಚಾರುಕೋರಕಕುಚಂಗಳನುತ್ಕರದಿಂದಿನಂ ಸಮಂ ||
ತಿರದಮರ್ದಂಟೆ ಕಂಟಕಿತಮಾದಲತಾಂಗಮೆ ಕಂಪಿಪಂತೆ ತೆ |
ಳ್ದಿರೆ ಪೊಯ ತೋರ್ಪುದೇಳ್ವಬೆಮರಂತಿರೆ ತದ್ಗತಶೀಕರೋತ್ಕರಂ || ೧೧೬

ಪರಿತಂದಾಗಿರಿಯೊಂದು ತಪ್ಪಲೆಳವುಲ್ಲಂ ಮೇದು ಮೆಯ್ಪೆರ್ಚ್ಚಿ ನಿ |
ರ್ಜರಕಾಂತಾನನಚಂದ್ರನಿಂ ದೊಸರ್ದ ಚಂದ್ರಾಶ್ಮಾಂಬುವಂ ಪೀರ್ದು ರ್ಕಂ ||
ನರಗೀತಕ್ಕೆ ಕಡಂಗಿ ಕಾಮುಧುಘುಮುದ್ಯತ್ಕ್ಷೀರಮಂ ಕೆಚ್ಚಲಿಂ |
ಸುರಿಯಲ್ತಳ್ತು ಸುಧಾಂಗನಾದನದರೊಳ್ಮಾಂದಿಂದುವೇನೆಂದಪೆಂ || ೧೧೭

ಅರಿಗಿರಿವ್ಯೆರಿ ವಾರಿಧರಗುಪ್ತಚರರ್ಕ್ಕಳನಟ್ಟಿಕಂಡು ತ|
ದ್ಗಿರಿ ನೆರೆ ತಳ್ತಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ವವೋ ||
ಲಿಗೆ ಸೆಳೆಮಿಂಚು ಕಣ್ಬನಿವೊಲಲ್ಪರಿತರ್ಪ್ಪವೊಲೊಪ್ಪೆ ವೃಷ್ಟಿ ಶೋ |
ಕರವದ ಮಾಳ್ಕೆಯಿಂದವರಪೆಮ್ಮೊಗಳಗೊಪ್ಪುಗುಮಲ್ಲಿ ತಪ್ಪಲೊಳ್|| ೧೧೮

ಚರಿಪನಿಳಿಂಪಕಾಂತೆಯುರ ಪಜ್ಜದ ಪಜ್ಜೆಯಕಾಂತಿ ಕಣ್ಗೆ ಮುಂ |
ಬರಿಯೆ ಕರುಂಕೆಗೆತ್ತೆಳಸಿ ಚಂದ್ರನ ಪುಲ್ಲೆ ತುಡುಂಕಲೆಂದು ನಿಂ ||
ದಿರೆ ಪರಿವೊಜ್ಜರಂಬಿಡಿದು ಪುಟ್ಟಿದಪುಲ್ಗಳಸೀವರಲ್ಲಿ ತ
ತ್ತರುಣಿಯರಂದದಕ್ಕೆ ನಿಜನೇತ್ರವ ನೇತ್ರದೆ ಪೋಲ್ತನಣ್ಪಿನಿಂ || ೧೧೯

ಕಂ|| ೦ರಪಶರಧರದ ತುರುಗ |
ಲ್ಕರೆವಘಸೋಪಳಕದಂಬಮುಡುಗಣಮನೆ ಮೇ ||
ಣ್ತರಿಸಂದು ನುಂಗಿ ಕಳ್ತಲೆ |
ಸರೆಯುಗುಳ್ವೊಂದೊಪ್ಪವೊಪ್ಪೆ ತಪ್ಪಲೊಳೆಸೆಗುಂ || ೧೨೦

ಮುಗಿಲಿಂಪೆ ತಟಿಲ್ಲತೆ ಮಿಗೆ |
ಚಿಗಿದೊಗೆವಂದದೊಳೆ ನೆಗೆವಪಿಚರಿಯ ಮುಡಿಯಿಂ ||
ದುಗುವಲರ್ಗಳ್ಕರಮೆಸೆಗುಂ |
ಮುಗಿಲಿಂಮುಗಿಲೊಗೆದು ಕರೆವಕರಕಂಗಳವೋಲ್ || ೧೨೧

ವೃ|| ಗಿರಿಶೃಂಗಾಗ್ರದೆನಿಂದು ನೆಟ್ಟನಿದಿರೊಳ್ತೋರ್ಪಿಂದುವಂ ನೋಡಿಪಂ |
ಕರುಹಂ ತಪ್ಪದಿದೆಂದು ಮಧ್ಯದ ಕಳಂಕಂ ಕಂಡು ಮತ್ತಾಳಿಯೆಂ ||
ದು ರಣತ್ಕಂಕಣಹಸ್ತಮಂ ನೆಗಪಿ ಸೋವುತ್ತಿರ್ಪ್ಪಗಂಧರ್ವಸುಂ |
ದರಿಯಂ ಕಿನ್ನರಿಯರ್ಕ್ಕರಂ ನಗುವರಾಸ್ವರ್ಣಾರ್ಚಲಪ್ರಾಂತದೊಳ್|| ೧೨೨

ನಗತಟನಂದನಸ್ಥಿತಲತಾಭವನಂಗಳೊಳಾಂತಸಂಗಕೇ |
ಳಿಗಳನೆ ಖೇಚರೀನಿವಹಮಾಗಸಕಾಗಳೆ ಪಾರಿಪೋಗಲು ||
ಜ್ಜುಗಿಸಿ ಬಳಲ್ದು ಪಾರಲಳವಿಲ್ಲದೆಕಮ್ರ್ಮಗಿಲೇರಿ ನಲ್ಲರೊ |
ಳ್ನಗುತೆ ವಿಳಾಸದಿಂ ತಳರ್ವ್ವದಲ್ಲಿಯಮಿಂಚೆನೆ ಚಂಚಲೇಕ್ಷಣಂ || ೧೨೩

ಕಂ|| ಪೊಸಸುಸಿಲೊಳೆಸಗೆ ರಮಣಂ |
ಮಿಸುಗುವನೆಲೆವೊಲೆಯೊಳೆಸೆವನಖಹತಿಯನದಂ ||
ಮುಸುಕುದೆರೆದೆರಗಿ ನೋಡು |
ತ್ತಸವಸದಿಂ ದಾರಿದಪ್ಪುವರ್ಖೇಚರಿಯರ್ || ೧೨೪

ವೃ|| ಮುಳಿದು ನಿಜೇಶನೊಳ್ ಚರಕರ್ಮಗಿಲೊಳ್ ಮರೆಗೊಂಡು ಗಾಳಿಯಿಂ |
ತಳರ್ದೋಡದಾಗಸಕ್ಕೊಡನೆ ತಾಂ ತಳರುತ್ತಿರೆ ಸೋರ್ವಕರ್ಪ್ಪಿನು ||
ತ್ಪಳದಳಮಾಲೆಯಾಂತಕಬರೀಭರದಿಂ ಕರುವಾಸ ಕರ್ಚ್ಚಿ ಕಂ |
ಗೊಳಿಸುವಸೋಗೆಯಂ ಕೆಳೆತನಕ್ಕದು ತಾಳ್ದುದೆನಲ್ಪಿರಾಜಿಕುಂ || ೧೨೫

ವಚನ|| ಇಂತು ಸಕಳವಿಭವಸಮಗ್ರಸಮುಜ್ಜ್ವಳವಿಲಾಸಂಬಡೆದು ರಂಜಿಪಾಪೊಂಬೆಟ್ಟದ ನಿತಂಬದೊಳಿಂಬುವಡೆದ ಜಂಬೂ ಜಂಬೀರ ಪನಸ ಪಾಟಳೀ ರಸಾಲ ಸಾಲ ತಮಾಲ ತಾಲ ಹಿಂತಾಲ ನಾಳಿಕೇರ ನಾರಂಗ ಲುಂಗ ಲವಂಗ ಪೂಗ ಪುನ್ನಾಗ ನಾಗಕೇಸರ ಕರ್ಣಿಕಾರ ಖರ್ಜೂರ ಕರ್ಪೂರಕದಳೀಷಂಡಕಮಲಷಂಡಂಗಳಿಂದಿಡಿದು ಕಡುಬೆಡಂಗಾದ ಸಾರ್ವರ್ತುಕವಾದ ಸದಮಳತಪೋವನದ ಪರಮಪವಿತ್ರತೆವೆತ್ತ ಪರ್ಣಶಾಲೆಯೊಳ್ ಇಟ್ಟವಿಭೂತಿಯು ತೊಟ್ಟ ರುದ್ರಾಕ್ಷದುಟ್ಟ ಮೃಗಾಜಿನದ ಬಿಟ್ಟಳಲ್ವ ಕೆಂಜಡೆಯ ಕಟ್ಟಿದ ಕರಣಂಗಳ ನಟ್ಟವೀಕ್ಷಣದ ಮುಟ್ಟಿಮಾಳ್ಪ ಜಪದ ಮಿಟ್ಟನೆಮಿಡುಕದಂಗದ ನೆಟ್ಟನೆನಿಂದ ಮನದ ತೊಟ್ಟನೆ ತೋರ್ಪ್ಪ ಸಾತ್ವಿಕದ ದಿಟ್ಟಿಗಚ್ಚರಿಗೊಳಿಪ ಕಟ್ಟಣಕದಕಡುಮೈಮೆಯಾಂತತಪೋಧನರಿರ್ಪ್ಪ ತಾಣದಲ್ಲಿ.

ವೃ|| ಉಡುಗುತ್ತಿಲ್ಲಿರ್ಪ್ಪುದುದ್ಯಚ್ಚಮರ ರಜಮನಾತಾಣದೊಳ್ ಸ್ತ್ರೀಕೈಸೀ |
ರಡುತುಂಸಮ್ಮಾರ್ಜನಂಗೈವುದು ಸುರಿವುದು ಮುಕ್ತಾಘನುಂ ಮೇಘಮುಂದಂ||
ಬಡೆವಂತಲ್ಲಲ್ಲಿ ರಂಗಂಗೊಳಿಪುದು ಸುಮನೋರೇಣುವಿಂ ಮಾರುತಂ ಸಂ |
ಗಡವೆಲ್ಲಂ ಪೆಲ್ಲನಾತಾಪಸರ್ಗೆ ಪರಿಚಯಂಮಾಳ್ಪುವಾಗಳ್ ಮೃಗಂಗಳ್ ||

ವಚನ|| ಮತ್ತಮಲ್ಲಿ,

ವೃ|| ಸುಮಮಕರಂದದಿಂದೆ ಕಪಿ ಕೈದೊಳೆದಾದ್ರುಮಪತ್ರಪುಷ್ಪಾಳಿ ||
ಹೊಂತು ಒಂದು ಸಂ |
ಸಮೆದದರಲ್ಲಿ ತುಂಬಿ ತುಳಿದೊಂದದಪೂಗಳನ್ನೈದೆ ಪತ್ರೀವಭಕ್ತಿಯಿಂ || ೧೨೭
ಡಮರ್ದಮರ್ದಂತೆ ತೋರ್ಪ್ಪಗಿಳಿಮುಟ್ಟಿಸ್ತ್ರಿಯಲ್ಲಿ,
ಯಮಿಗಳ ಮುಂದೆ ನಿಂದೆರಗಿ ಕಾರ್ಣ್ಣೆ
ಪೊದಳ್ದಿರೆ ಕಂಡು ಕೆರಿಡಮಂ |
ವ|| ಮತ್ತಮೊಂದು ಪವಿತ್ರಿ ಪೊರ್ದ್ದಿ ತುಡುಂಕೆ ಕೈಸುಡಲ್ ||
ವೃ|| ಹೋಮದಕುಂಡದಿಂ ಕಡೆಗೆ ಪರ್ದ್ದಿರೆದು ಕಿಪ್ಪನುತೂದಿ ಪುರ್ಬ್ಬಿಡು |
ಕಾವಿಸಿ ಗೇರಪಣ್ಣೆನುತೆ ಹರ್ರಿನು ತೇಡಿಸಿ ತೊಂದು ಕೋಡಗಂ || ೧೨೮
ಭೂಮಿಗೆ ತಗ್ಗಿ ಕುಗ್ಗಿ
ತ್ತಾಮುನಿಪುತ್ರರಂ ನಗಿಸಿ

ವ|| ಮತ್ತಮೊಂದುದೀರ್ಘಮಹಿಮಾಕೀರ್ಣವರ್ಣಪೂರ್ಣಪರ್ಣಶಾಲೆಯಲ್ಲಿ

ವೃ|| ಯಮಮುಖ್ಯಾಷ್ಟಾಂಗಯೋಗಂಸಮನಿಸೆಹೃದಯಾವಾಸದೊಳ್ಕಂಭುಪಾದಾ
ಬ್ಜಮನೋರಂತಿಟ್ಟು ಕಟ್ಟುಬ್ಬಟೆಯ ಪವನನಂ ಕಟ್ಟಿ ಕೈಕೊಂಡು ಬೋಧ ||
ಕ್ರಮಮಂ ದೇಹೋಹಮೆಂದೆಂಬುದನುಡುಗಿ ನಿಜಾನಂದಮಂ ನೆರ್ಮ್ಮಿ ಭಿನ್ನ|
ಭ್ರಮೆಯಂಕೀಳ್ತಿಕ್ಕಿಮುಕ್ತಿಪ್ರಮದೆಯನೊಲಿಸಲ್ಕಾಸ್ಸಲ್ವರಿರ್ದ್ದರ್ಮುನೀಂದ್ರರ್

ವ|| ಪೆರತೊಂದುಕುಸುಮಕಿಸಲಯಮಹಿತಮಂದಾರ ಮಹೀಜಾತ ಸಂಜಾತ ಮಧ್ಯಪ್ರದೇಶದಲ್ಲಿ,

ವೃ|| ಶಿವಕಥೆಪೇಳ್ವ ಶಂಕರಪುರಾಣಮನಾಲಿಪ ಶೈವತತ್ವಮಂ |
ವಿವರಿಪ ಶಂಭುವಂ ಪದೆದು ಕೀರ್ತಿಪ ಹೃದ್ಗೃಹದಲ್ಲಿ ಶೈಲಜಾ ||
ಧವನನೆ ನೆಟ್ಟು ಚಾನಿಪ ಮಹೇಶನನರ್ಚಿಪ ಸೋಮನಾಮಮಂ |
ಸವಿನುಡಿಯಿಂದೆ ಬಣ್ಣಿಸುವ ಬದ್ದಿನ ತಾಪಸವರ್ಯರೊಪ್ಪಿದರ್|| ೧೩೦

ವ|| ಅಲ್ಲಿ ಮತ್ತಮೊಂದುತಳಿರ್ತ್ತತರುಣತಮಾಲತರುವನದ ತಳದ ತಣ್ಣೆಳಲ ಪಳಿಕುವಾಸರೆಯಪರ್ಣಶಾಲೆಯಲ್ಲಿ,

ವೃ|| ಕರಿಯನೆ ನೆರ್ಮ್ಮಿ ಸಿಂಗಮದನಂಟೆ ಮಹಾಶರಭಂ ಶಿರೋದ್ವಯಂ |
ಕರಮದನೊಂದೆ ಸಾರ್ದ್ದು ಪುಲಿ ಪುಲ್ಲೆಯನಲ್ಲಿಯ ಮಾಸಿಮಧ್ಯದ ||
ಲ್ಲಿರುತೆ ಮುದಂಬಡುತ್ತೆ ನೆರೆದಾಲಿಪುದದ್ಭುತಮೆಂಬಿನಂ ಪೊದ |
ಳ್ದರಗಿಳಿಯೋದುವೀಶ್ವರಪುರಾಣಮನಾದರದಿಂದನಾರತಂ || ೧೩೧
ಎಳವಿಱಿಛಂ ಪೋಲ್ವಬಂಬಲ್ಜಡೆ ಬಳೆದಘನಶ್ಮಶ್ರು ಭಸ್ಮತ್ರಿಪುಂಡ್ರಂ |
ತೊಳಪುದ್ಯದ್ಭಾಳಪಟ್ಟಾಲಂಬಿತವಿಳಸಿತರುದ್ರಾಕ್ಷಮಾಲಾಳಿ ಹಸ್ತೋ ||
ಜ್ಜ್ವಳದಂಡಂ ಯೋಗಪಟ್ಟಂ ಪಿಙ್ಗಗದಸದಜಿನಂ ವಲ್ಕಲಂ ಲಾಗುಳಂ ಮಂ |
ಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪರ್ತ್ತಪ್ಪಲೊಳ್ತಾಪಸೇಂದ್ರರ್ ||

ವ|| ಮತ್ತಮೊಂದುನಗತಟದ ಸರಸಸ್ಸರೋವರದ ತೀರದಲ್ಲಿ,

ವೃ|| ಪಗೆಯಂ ಕೈಬಿಸಮಾಗಿಪೊಂದುಬಗೆಯಂ ಕ್ರಾಳ್ಟಲ್ಲಿ ಕಾಸಾರವಾ |
ರಿಗತಂ ತಾನೆನಿಸಿರ್ದ್ದು ಮಾಡಿ ತಪಮಂ ತತ್ಪ್ರಾಣಿಯಾದಂಬುಜಂ ||
ನಗದೊಳ್ಬಪ್ಪ ಮೃಗಾಂಕನಂ ಪಿಡಿದುದೆಂಬಂತು ಸ್ಫಲಾಪಾತ್ರಮದಿಂ |
ನೆಗಳ್ದೊಳ್ಗುಂಡಿಗೆಯಾಂತದಕ್ಷಿಣಕರಂ ತೋರ್ದ್ದತ್ತು ಯೋಗೀಂದ್ರನಾ ||

ವ|| ಮತ್ತೊಂದೆಡೆಯೊಳೊತ್ತರಂಬಿಡಿದೊತ್ತರಿಸಿ ಒಳೆದಕ್ಷೀಣವೇಣುಕುಂಜದ ಮಂಜುಳಸ್ಥಾನದಲ್ಲಿ,

ಕಂ|| ಒತ್ತರಿಸಿ ಸುತ್ತಿ ಮೆಯ್ಯೊ |
ಳ್ಪುತ್ತಿಡೆ ಬೇರಳಿಯೆ ಜಡೆಗಳೆಡಿಕಿರಿದಹಿಗ ||
ಳ್ಪತ್ತಿ ಪರಿದಾಡುತಿರೆ ನಡು |
ನೆತ್ತಿಯ ಪೆಜ್ಜೊಡರನೊರ್ವನೀಕ್ಷಿಸುತಿರ್ದಂ || ೧೩೪

ಅಡರ್ದು* ನಿಡುಜಡೆಯೆಡೆಯೊಳಹಿ |
ಯಡಂಗೆ ತನ್ಮಸ್ತಕಸ್ಥಫಣಮಣಿ ಪದಪಂ ||
ಪಡೆದುದು ತನ್ಮುನಿಪನ ತಲೆ |
ಯೆಡೆಯಣ ಚಿಜ್ಜ್ಯೋತಿ ಚಿಗಿದು ಪೊರಪೊಣ್ಮಿದವೋಲ್ || ೧೩೫

ವ|| ಮತ್ತಮಲ್ಲಿ ಸಲ್ಲೀಲೆಯಿಂ ವಲ್ಲಭನೊಡನೆ ಮೆಲ್ಲನಿಳಿದು ತಳಿರ್ತಕಂಕೇಳಿವನಮಧ್ಯದ ಮಲ್ಲಿಕಾಮಂಟಪದಲ್ಲಿ ಪಸರಿಸಿದ ಮಿಸುಪಕುಸುಮದೆಸಳ ಪೊಸವಸೆಯ ಮೇಲೆ ನಲ್ಲನೊಡನೆ ಚಲ್ಲದಿಂ ಕುಳ್ಳಿರ್ದು ಫುಲ್ಲಶರಕೇಳಿಯುಂ ಮನಂ ತಣಿಯೆ ತನುಕರಗಲನುಭವಿಸಿ ಬಳಲ್ದೆಲರ್ವಟ್ಟೆಗೆ ಪಾರಲಳವುಗೆಟ್ಟ ಒಟ್ಟಜವ್ವನದ ಬಿಜ್ಜೋದರಿಯುರಂ ಪೆಗಲೊಳ್ಪಿಂಪಿಂ ತಳೆದು ತಳರ್ವವಿಪುಳವಿದ್ಯಾಧರಗ್ಗ ಸಹಾಯಮಾಗಿ ಪೊತ್ತೆತ್ತಲುಜ್ಜುಗಿಪ ಕಮ್ಮುಗಿಲ್ಗೆ ಕಬ್ಬುವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡಮಾಗಿ ಪೋಗಿ ಪೊತ್ತೆತ್ತುವ ಗಂಧವಹನ ಪಿಂದುಗೊಂಡು ಮಂಡಳಿಸಿ ಮರಿಮುಗಿಲಂತೆ ಪಾರ್ವಮದಮಧುಕರಪ್ರಕರದಿಂ | ಮತ್ತಮೊಂದೆಡೆಯೊಳ್ದರದಳಿತವಿಮಳದಳವಿಪುಳ ಪರಿಮಳಮಿಳಿತಕುಸುಮವಿಸರವಿಳಸಿತ ಮಧುರಮಧುಮುದಿತತರುಣಮಧುಕರನಿಕರಪರಿವೃತಮೃದು ಳಕಿಸಲಯಮಹಿತ ಪಾರಿಜಾತಮಹೀಜಾತಮೂಲ ಹರಿನೀಲವಿಶಾಲಶಿಲಾತಳದೊಳ್ಸಂದಣಿಸಿ ಗೊಂದಣಂಗೊಂಡು ಕುಳ್ಳಿರ್ದು ಸುರಸುದತಿಯರ ನೆರವಿಯೊಳೊ

ವ್ವರ್ಗಮನ್ನಣೆಯು ಕಿನ್ನರಕನ್ನೆ ತನ್ನ ಚೆನ್ನಕಿನ್ನರಿಯುಂ ತೆಗೆದು ಮೇಳಂಗೈದಾಳಾಪಿಸಿ ಕೊರಲಬೆರಲ ಸಂಚುಗೂಡಿ ನುಣ್ಚಾರಂದೆಗೆಯೆ ಕೇಳ್ದೊಡನೆ ಪೆಡೆಯೆತ್ತಿದ ಕಾಳಾಹಿಯೆಂಬಂತೆ ನಿಡುಜಡೆ ಕಡುಬೆಡಂಗುವಡೆಯುಲೆಳಸಿ ಬಳಸಿ ಬಂದು ನಿಂದು ಸುತ್ತಿ ಮುತ್ತಿ ಮೋಪಂ ತೊರೆದು ಮೆಯ್ಯುಂ ಮರೆದಭ್ಯರ್ಣದೊಳಾಕರ್ಣಿಪ ತರುಣಹರಿಣಗಣಕ್ಕೆ ಸರಸೇಕ್ಷಣದ ಸವಿನೋಟಮನುಪಸೇಶಿಪಂತೆ ದೇಸಿವಡೆದು ಮುರಿದಿಟ್ಟಿ ಪರಿದಿಟ್ಟಿ ಸೆರೆ ಪುರೆಯೆ ಪೊಗಸಸಿಯು ಮುಗುಳ್ನಗೆಜೊನ್ನದಿಂ ಮುನ್ನಲರ್ದ ಕನ್ನವುರದ ಕನ್ನೈದಿಲೆಯೊಳಿರದೆರಗಿ ಝೇಂಕರಿಪ ಮಧುಕರಿ ಮದನನಾಣತಿಯಿಂ ಜಾಣೆಂದೊಡನೆ ಸ್ತುತಿಯುಚ್ಚರಿಸಿದಪುದೆಂಬಂತೆಸೆಯೆ ಕೇಳ್ವರಕರ್ಣಕುಹರಕಾಸಾರಂ ತುಂಬಿ ಪೊರಸೂಸಿ ಪೊನಲಿಟ್ಟು ಪರಿವಂತೆ ಪಿಂಗದೆ ಸಂಗೀತಸುಧಾರಸವೃಷ್ಟಿಯುಂ ಸುಧಾಕಾದಂಬನಿಯಂತೆ ಕರೆಯೆ ಕೂರ್ಮ್ಮೆಯಿಂ ಕೇಳ್ದು ವಸಂತಂ ಸಂತಸಂಬಟ್ಟು ಮರದುದಿಯೊಳಿರ್ದ್ದು ಮೆಚ್ಚಿ ಪುಷ್ಪಾಂಜಲಿಗರೆದನೆಂಬಂತೆ ಪವನಪಾತದಿನಾಯುವತಿಯುಮೇಲೆ ತತ್ಕುಜದ ಸೆಳೆಗೊಂಬಿನಿಂ ಕಳಿದು ಕವಿವಕಮ್ಮಲರ್ಗಳಿಂ | ಮತ್ತಮೊಂದೆಡೆಯೊಳ್ಬಿಸಿಗದಿರನ ಬಿಸಿವಿಸಿಲ್ಮೆಯ್ಯಂ ಪೊಯ್ಯೆ ತನುಲತೆ ಮುಗಳ್ತಂತೆ ತಳ್ತಿಡಿದು ತೀವಿದಘರ್ಮಜಳಕಣದಿಂ ಭಗಣಮಂ ತಳೆದ ಗಗನಲಕ್ಷ್ಮಿನಗದ ಪೆರ್ಮ್ಮೆಯುಸೊರ್ಮ್ಮೆಕೂರ್ಮ್ಮೆಯಿಂ ನೋಡಲಿಳಿತಂದಳೆಂಬಂತಂದಂಬಡೆದಿಳಿತಂದು ಕಂದರದೊಳ್ನಿಂದು ಕಂದಿದಮೊಗದಾವರೆಯುಂ ಕಾಂತಿಗುಂದಿದ ಕಣ್ಣೈದಿಲುಂ ಬಳಲ್ದಕುಚಕೋಕಮಿಥುನಮುಂ ಕೊರಗಿದತೋಳ್ವಳ್ಳಿಯುಂ ನೀವ್ವರ್ಗಿಸುವಂತೆ ವಿಪುಳಪುಳಿನವಿದಳಿತನಳಿನ ವಿಮಳಕುಮುದ ಕಲ್ಹಾರ ಸುರಭಿಮಿಳಿತ ತುಹಿನಶೀತಳಸಲಿಲಸಂಭೃತ ಸರಸಿಜಾಕರಮಂ ಸಂತಸಂಮಿಕ್ಕು ಪೊಕ್ಕು ಮುಗಿಲಿಂ ಮುತ್ತು ಸುತ್ತಂ ಸೂಸುವಂತೆ ಮುಡಿಯಿಂ ಮುಗುಳುದಿರೆ ಕುಚಕಮುಳಕುಟ್ಮಳಕ್ಕೆ ಮುಖಚಂದ್ರನತ್ತಣಿಂ ಭೀತಿ ಬೇಡೆಂದು ಕುಸುಮಶರಂ ಪೊಸವಿಸಿಲ ಗವಸಣಿಗೆದುಡಿಸಿದಂತೆ ಮನೋರಮಣಂ ರತಿಸಮಯದೊಳ್ನಿಜಕರದಿಂ ತೊಡೆದ ಕುಂಕುಮಪಂಕಂ ಜಳದೊಳೊಡವೆರೆದು ತರಳತರತರಂಗಪಾತದಿಂ ವಿಕಚಕನಕ ಕಮಳ

ಪರಾಗಪಟಳಂ ಸುರಿದು ಪರಿದಂತೆ ಪಸರಿಸೆ ಕಮಳವನದೊಳೆರಗಿದ ಪರಮೆದುರು ಗಲೆಂಬಂತಲ್ಲಿ ಚಿಕುರನಿಕರಮೆಸೆಯೆ ಸಲಿಲಕೇಳಿಯನಾಂತು ಬಳಲ್ಕೆಗಳೆದ್ದೈದಿ ತನ್ನಗ ದಕಾಂತಿಯನೆಳವಿಸಿಲ್ಗೆತ್ತು ಮೆಯ್ಯೊತ್ತಿ ಸಿಂದಂಬುಜಂ ತುಂಬಿಗಳ ಬಂಬಲಂಮ್ಮೈ ದಡಪುವಂತೆ ನುಣ್ಗುರುಳ್ಗಳಂ ನೆಳಲುವಕರಾಬ್ಜಂ ಕಂಗೊಳಿಸೆ ತೋರ್ಪ್ಪ ಗಂಧ ರ್ವಸುಂದರಿಯರಿಂ | ಮತ್ತಮೊಂದೆಡೆಯೊಳ್ಗಗನಕ್ಕೊಗೆವಮುಗಿಲೊಡನೆ ನೆಗೆದು ಪಾರ್ವ್ವಲ್ಲಿ ನಿಜಾರುಣಾಧರಮನವಲೋಕಿಸಿ ರಸಾಲದಳಬಿಂಬಫಳಭ್ರಾಂತಿಯಿಂ ಕರ್ದುಂಕಲೆಂದೈತಂದು ನೆಟ್ಟನೆ ಕಟ್ಟಿದಿರೊಳ್ನಿಂದ ಪರಪುಟ್ಟಪಂಡಿತವಕ್ಕಿಗಳಂ ನಿಜಕರಾಗ್ರದಿಂ ಪಿಡಿದೊಡಗೊಂಡು ಪೋಗಿ ನಿಜಗೃಹದೊಳೋವಿಯಾಗಿಳಿಯ ಮುದ್ದುತನಕ್ಕೊಲ್ದು ವಾತ್ಸ್ಯಾಯನಮನೋದಿಸಿ ರಸಾಲರಮಣನೆಂಬ ಪೊಸವೆ ಸರನಿಟ್ಟು ಕಳಕಂಠನ ಕಳರವಕ್ಕೆ ಮೆಚ್ಚಿ ನಿಚ್ಚಂ ಸವಿಸವಿಯದಸಾರಸಂಗೀತಮಂ ಕಲಿಸಿ ಮಾಕಂದಮಧುರನೆಂದು ನಾಮಕರಣಂಗೆಯ್ದನಂತರಂ ಸಿಂಗರಂಬಡೆದು ಕನಕನಗದ ನಂದನಮಧ್ಯದ ಮಂದಾರತರುತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾ ಕುಸುಮಮಾಲಿಕಾಲಂಕೃತಕುಸುಮಮಂಟಪದೊಳರವಿಂದಕೆಂಜಾದಿಯ ನನೆದು ರುಗಲ ಸಿಂಹಾಸನದಮೇಲೆ ತಳಿರಗದ್ದುಗೆಯಲ್ಲಿ ಚೈತ್ರನೆಂಬ ಚಿಪ್ಪಿಗಂ ಮಾಂದ ಳಿರ್ವ್ವಟ್ಟೆಯೊಳ್ಶಿರೀಷಕುಸುಮಮಂ ತುಂಬಿ ಕಮಳಕಂಟಕಸೂಚಿಯಿಂ ಕಮ ಳಸೂತ್ರಮಂ ಕೋದುಪೊಲಿದಿರಿಸಿದಮಲಂಗುಮೂಡೆಯುಂ ಮೋಡಿಯೊಳೊರಗಿ ಬಳಸಿ ಶಶಿವಸಂತಾದಿಗಳೋಲೈಸಿ ನಿಲೆ ಶೃಂಗಾರಸಾರಸರ್ವಸ್ವಮಂಗಂಬಡೆದಂತೆ ಕಂಗೊಳಿಪನಂಗಚಕ್ರೇಶ್ವರಂ ತನ್ನಂಗನೆಯಾದ ರತಿದೇವಿಯೊಡನೊಡ್ಡೋಲಗಂಗೊ ಟ್ಟಿರ್ಪ್ಪವೇಳೆಯರಿದು ಘೋಂಕಸ್ಸೈದಿ ಸಾದರಂ ಮಿಗೆರತಿಕಾಮರ್ಗ್ಗೆ ಮಣಿದು ಚಿತಸ್ಥಾನದೊಳ್ಕುಳ್ಳಿರ್ದ್ದಾಪಿಕನಿಂ ಮಾರವೀರನ ಬರೆದಬಿರುದಾವಳಿಯಂ ಪಾಡಿ ಸುತ್ತುಮಾರಾಜಶುಕನಿಂ ತಾನುಸಿರ್ದಮದನವಿಜಯಮೆಂಬಸರಸಕಾವ್ಯಮಂ ಸಭೆ ಕೇಳ್ದುತಲೆದೂಗಲೋದಿಸುತ್ತುಮನೆರಡಂ ಕಾಣ್ಕೆಗೊಟ್ಟಿಚ್ಚೆಗಾತ್ತಿರ್ಪಚ್ಚೆವಿ ಣ್ಣರಿಂ ಮಚ್ಚುವಡೆದಚ್ಚರಿಮಿಗೆ ತಳವೊರ್ಚ್ಚೇರೆಗೆಣ್ಣಪೆಚ್ಚಿರ್ನಚ್ಚರಿಯರಿಂ

ಮತ್ತಮೊಂದೆಡೆಯೊಳ್ಸೋಗೆನವಿಲಂತೆಸೆವ ಸೋರ್ಮುಡಿಗೆ ಪೊಲ್ಲೆಯಮುಗುಳಂ ತುರುಂಬಿ, ಅರೆವೆರೆಯಂತೆ ಮೆರೆವಪಣೆಗೆ ಕಳಂಕನಮುಚ್ಚುರ್ವಂತೆ ಕತ್ತುರಿಯ ಬಟ್ಟ ಬೊಟ್ಟನಿಟ್ಟು, ಮದನಂ ವದನಲಕ್ಷ್ಮಿಯನೋಜೆಯಿಂ ಪೂಜಿಸಿದಸಂಪಗೆಯೆನೆ ಸೊಂಪುಗರೆವನಾಸಿಕಕ್ಕೆ ನರುಸುಯ್ಗಂ ಪಂಪಡೆದು ರತಿಯ ಮುಡಿಗೆ ಮುಡಿಯಲ್ಯೋಗ್ಯಮಕ್ಕೆಂದು ಮಲ್ಲಿಗೆಮುಗುಳಂ ಸೇರಿಪಂತಾಣಿಮುತ್ತಿನ ಮೂಕುತಿಯಂ ಸಾರ್ಚಿ, ಮದನಮದಗಜದ ಕುಂಭದಂತಿಂಬುವಡೆದ ಬಟ್ಟಮೊಲೆಗೆ ತಲೆಮಾಲೆಯನಲಂಕರಿಪಂತೆ ಕಂಠಮಾಲೆಯಂ ನೆಲೆಗೊಳಿಸಿ, ಕಂಜದಂತೆ ರಂಜಿಪ ಕರಯುಗಳಕ್ಕೆ ರವಿಕಿರಣಮಂ ತುಡಿಸುವಂತೆಸುವರ್ಣಮಣಿವಲಯಮಂ ಕೈಗೊಳಿಸಿ, ರೋಹಣಾಚಲಮೆಂಬೂಹೆಗೊಳಗಪ್ಪ ಘನಸಿತಂಬಮಂಡಳಕ್ಕೆ ಮಾಲೆಗೊಂಡ ಮಣಿಗಣಮಂ ಸೇರಿಪಂತೆ ನೂತ್ನರತ್ನಕಾಂಚಿಯನಮರ್ಚ್ಚಿ, ಯನಂಗನಿಷಂಗಮೆನೆ ಕಂಗೊಳಿಪ ಜಂಘೆಗಳ್ಗಣಸಂಬಂಧಿಪಂತಂದುಗೆಯ ನಂದಂಗೊಳಿಸಿ, ನುಣ್ದೊಡೆಗಳೆಂಬರಂಭಾಸ್ತಂಭಂಗಳ್ಕಂದದಂತೆ ಬೆಳ್ದಿಂಗಳಿಂ ಬಾಸಣಿಸುವಂತೆ ಬೆಳ್ವಟ್ಟೆಯನುಟ್ಟು ಸಿಂಗರಂಗೈದು, ಕಡೆಗಣ್ಣಕದಿರ್ದುರುಗಲ್ಕುಡಿಮಿಂಚಂ* ಕೆದರೆ ಬಿಂಬಾಧರದ ಕೆಂಬೆಳಗಿನೊಡನೆಸುಲಿಪಲ್ಲ ನುಣ್ಬೆಳಗು ಮೊಗಸಿರಿಯ ಮೈಸಿರಿಯಂ ಪಸರಿಸುವಂತೆ ಮಿಸುಪಂಗಲತೆಯ ಪೊಸಕಂಪು ದೆಸೆದೀವೆ, ಮದವೇಳ್ದ ಮದನಗಜದ ಮದಲಕ್ಷ್ಮಿಯಂತೆ ಸೊಕ್ಕುರ್ಗಂಜೌವನೆ ಸೊಗಯಿಪ ವಿಮಳಕಮಳಾಕರದ ತೀರದ ವಿಶದಶಶಿಮಣಿಭಿತ್ತಿಯಂ ನೆಮ್ಮಿರ್ಜೆನ್ನೆಸೆಯ ಸಿಂಗರಂಗೈದು, ಕಾದಂಬಿನಿಯ ಬರವಂ ಬಯಸುವ ಮಯೂರನಂತೆ ತನ್ನ ಬರವಂ ಬಯಸುತ್ತೆ ಕುಳ್ಳಿರ್ದ್ದ ಮನದನ್ನನೆಡೆಗೆ ತಷೆಯ ದೈತರ್ಪ್ಪಲ್ಲಿ ನಿಜಪ್ರತಿಬಿಂಬಮುವಂ ನೆಮ್ಮಿರ್ದ್ದಚಂದ್ರಕಾಂತಭಿತ್ತಿಯೊಳ್ಕಾಪ್ಪೊರ್ಳೆಯಲ್ಪ್ರತಿಯುವತಿಯೆಂದು ಬಗೆದು ಕನಲ್ಕೆ ಕೈಮೀರೆ ಮುಳಿದು ಮುಗಿಲ್ವಟ್ಟೆಗೆ ಗಳಲನೆ ನೆಗೆಯೆ ತನ್ನ ನೆಳಲ್ಸಿಸಿಗಲ್ಲ ನೆಲಗಟ್ಟಿನೊಳ್ತೊಟ್ಟನೆ ತೋರೆ ಮೋಹೋದ್ರೇಕದಿಂ ಮುಂದುಗಾಣದೆ ಧರೆಗಿಳಿದಳ್ಗೆತ್ತು ಮೂರ್ಛೆವೋದ ಮನದನ್ನನಂ ಕಂಡು ಕರುಣಾರಬ್ಜುವೆಳೆದಂತೆ ತಳ್ವದಿಳಿತಂದು ತೆಗೆದುಬಿಗಿದಪ್ಪುತ್ತೆ ಸುರತರ-

ತಳ್ವವಿಳಸಿತವಿಕಚವಿಚಕಿಲನಿಚಯನಿಚಿತರುಚಿರತರ ಮಲ್ಲಿಕಾಮಂಟಪಕ್ಕೊಡಗೊಂ
ಡು ಪೋಗಿ ನಳನಳಿಪೆಳದಳಿರ ಪೂವಸೆಯೊಳಿರ್ವ್ವರುಂ ಕುಳ್ಳಿರ್ದ್ದು ಬಳ್ಳಿವರಿವ
ಕಟಾಕ್ಷದಿಂದಡರೆ ನೋಡಿ ಮದನಾನುರಾಗಂ ಕೈಗಣ್ಮೆ ಮನಂಬಂದಬಂಧದಿಂ
ಸವಿಸವೆಯದಸುಸಿಲಸೊಗಮನನುಭವಿಸಿ ತದ್ದಂಪತಿಗಳ್ಪೋಗೆ, ಪಾಸಿನೊಳ್ಪತ್ತಿದ
ಕಜ್ಜಳಮುಂ ಸೂಸಿದನರುದಂಬಲಮನುದಿರ್ದಂಗರಾಗಮುಂ ಕೆದರ್ದಮೃಗಮದ
ರಜಮುಂ ಜಗುಳ್ದಪೂಮಾಲೆಯುಂ ಮಗುಳ್ದು ಮುಸುರ್ವಳಿಗಳಂ ಕಂಡು ಕಾದ
ಲನ್ನೆರೆದು ತಳರ್ದತಾಣಮಿದೆಂದು ಜಾಣಿಂ ಕೆಳದಿಯರಂ ಕರೆದು ತೋರಿ ಮು
ಗುಳ್ನಗೆನಗುತ್ತನಂಗನಿಂಗಿತದಂಗಮಂಪಿಂಗದೆ ಪೊಗಳ್ವದೇವಾಂಗನೆಯರಿಂ|ಮತ್ತ
ಮೊಂದೆಡೆಯೊಳಜಗರಮುಗುಳ್ದ ಗರಳದುರಿಯು ಪೆರ್ಬ್ಬುಗೆಪೊಯ್ಯೆ ಗಗನದಿಂ ಜ
ಗುಳ್ದುರುಳ್ದವಿಧುರವಿಗಳಂತೆಸೆವ ರವಿಮಣಿಚಂದ್ರಕಾಂತಂಗಳಿಂ ರವಿಶಶಿಗಳ್ಗೆ
ರಾಹುಭ್ರಾಂತಿಗುಡುವಿಂದ್ರನೀಲದ ಕೋಡುಂಗಲ್ಗಳಿಂ, ಸಪ್ತಾಶ್ವನಶ್ವಂಗಳ್ಗೆ ಶಶ್ವಂ
ದ್ದೂರ್ವಾಂಕುರಶಂಕೆಯುಂ ಭೋಂಕನೊಡಚ್ಚುವ ಪಚ್ಚೆಗಲ್ಗಳಿಂ,ಹರಿಯೊಳ್ಪು ರು
ಡಿಸಿ ಗಿರಿವರಂ ವಜ್ರಮನಾಂತ ಬೆಡಂಗನಾಗಿಪ ವಜ್ರಶೃಂಗದಿಂ, ಹರನೋಲಗಕ್ಕೆ
ಹರಿಸದಿಂ ಪೋಗಿ ಬರ್ಪ್ಪಸುರಖಚರಕಿನ್ನರಗರ್ಗ್ಗವಾಸಮಾದ ರನ್ನಗವಿಗಳಿಂ,ತಾಪ
ಸರೇಪೊಳ್ತುಂ ನೆಲೆಗೊಂಡ ತಪೋವನಂಗಳಿಂ, ಪಾರ್ವಪಕ್ಕಿಗಳಿಂ ನೆಗೆವ ಮೃಗೇಂ
ದ್ರಂಗಳಿಂ, ಚಲ್ಲವರಿವ ಪುಲ್ಲೆಗಳಿಂ, ಸಮ್ಮದಂಬಡೆವ ಪೊಂಮರಿಗಳಿಂ, ಪರಿವ ಪುರು
ಷಾಮೃಗಂಗಳಿಂ ನೆರೆದುಪರಿವ ಕರಿಗಳಿಂ ಸಾರಿಬರ್ಪ್ಪ ಭೇರುಂಡಂಗಳಿಂ ನಲಿವ ಪುಲಿ
ಗಳಿಂ, ನಿಲುಂಬಿದಮೊಲಂಗಳಿಂ, ಪೆಡೆಯೆತ್ತುವ ಗಡಣದಹಿಗಳಿಂ, ಕೋಡಿಡುವ
ಕೋಳ್ಮಿಗಂಗಳಿಂ, ಸರಿವಮರೆಗಳಿಂ, ಮೆಲ್ಲನೆಬರ್ಪ್ಪಜಲ್ಲಿಮಿಗಂಗಳಿಂ, ಬಹುವಿಧದ
ವಿಹಗಂಗಳಿಂ, ನೂತನಂಬಡೆದಜ್ಯೋತಿರ್ಲತೆಗಳಿಂ, ರಮಣೀಯಮಾದಮರತರುಗ
ಳಿಂ, ಸುರಚಿರಮಾದ ಸುರಧೇನುಗಳಿಂ, ಸಂತತಮೆಸೆವಚಿಂತಾಮಣಿಯುಕಣಿಯಿಂ,
ಪರುಷದರೆಯಿಂ, ಪರಿವಸಿದ್ಧರಸದಿಂ, ಫಣಿಪತಿಗಮೂದೊಡಂ ಗಣಿಸಲರಿದಾದ ಘ

ನಮಹಿಮೆಯಾಂತ ಶಿವಲೋಕಮಂ ತನ್ನ ನೆತ್ತಿಯೊಳ್ಪೊತ್ತುಲಂಪಿನ ಪೆಂಪಿಂಗೆ ಪಕ್ಕಾದ ಸರ್ವಪರ್ವತಸಾರ್ವಭೌಮನಖರ್ವಸಂಪದಂಮಿಗೆ ಮೆರೆವುತ್ತಿರ್ದುದಂತು ಮಲ್ಲದೆಯುಂ.

ವೃ|| ನಮದಮರವಧೂಟೀಕುಂತಳಸ್ರಸ್ತಮಾಲಾ |
ಸಮುದಿತಮಕರಂದೋತ್ಸಿಕ್ತಪಾದಾಂಬುಜಾತೆ ||
ಕಮನಕಮಳಜಸ್ತ್ರೀಗೀಯಮಾನಾಂಕಮಾಲಾ |
ಸಮುದಯೆ ದಯೆಯಿಂದಂ ದೇವಿರಕ್ಷಿಪ್ಪುದೆನ್ನಂ || ೧೩೭

ಗದ್ಯ|| ಇದುವಿನಮದಮರವರ ಮಕುಟತಟಘಟಿತ ಮಣಿಗಣ ಮಹಾಪ್ರಭಾ
ಪಟಲ ಪರಿವೃತಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿತೋ
ಭಯಕವಿತಾವಿಶಾರದ ಶ್ರೀಷಡಕ್ಷರದೇವವಿರಚಿತಮಪ್ಪ
ರಾಜಶೇಖರವಿಳಾಸವಿಪುಳಪ್ರಬಂಧದೊಳ್ ಪೀಠಿಕಾ
ರಚನಾಸಮುದ್ರಮೇರುಗಿರಿವರ್ಣನಂ,
ಪ್ರಥಮಾಶ್ವಾಸಂ ಸಂಪೂರ್ಣಂ.



# ದ್ವಿತೀಯಾಶ್ವಾಸಂ



ಕಂ|| ಶ್ರೀಪಾರ್ವತೀಪಯೋಧರ |
ಲೇಪಿತಮೃಗಮದವಿಲಿಪ್ತವಕ್ಷಸ್ಸ್ಥಳಸು ||
ರ್ವೀಪಾಲನಶೀಲಂ ಕರು |
ಣಾಪಾಂಗಂ ಪಾಲಿಕೆಮ್ಮನುರೆ ಶಿವಲಿಂಗಂ || ೧

ಅಂತೆಸೆವಮೇರುಗಿರಿಗೆ ಸ |
ಮಂತೊಪ್ಪುವದಕ್ಷಿಣಾಶೆಯೊಳ್ವಸಧರಣೀ ||
ಕಾಂತೆಯ ಸೀಮಂತದ ರ |
ತ್ನಂ ತಾನೆನೆ ಚೋಳಮಂಡಳಂ ಸೊಗಯಿಸುಗುಂ || ೨

ವೃ|| ದಳಿತಾಂಭೋಜಾಳಿತಳ್ತೊಪ್ಪುವಕೆರೆಕುಮುದಂತೀವಿತೋರ್ಪಬ್ಜಷಂಡಂ |
ಕಳಹಂಸಶ್ರೇಣಿಯಿಂ ರಂಜಿಪಪೊಳೆ ಬೆಳೆಯಿಂ ಬಾಳ್ವಕೈ ಪೂಗಳಿಂ ಕಂ ||
ಗೊಳಿಪುದ್ಯತ್ಪುಷ್ಪವಾಟೀಕುಳಮಲರ್ದಲರಿಂ ಕಾಯ್ಗಳಿಂ ಪಣ್ಗಳಿಂ ಮಂ ||
ಜುಳಮಾಡುದ್ಯಾನಮಾನಾಡೊಳೆ ಪಿರಿದೆಸೆಯುತ್ತಿರ್ಪ್ಪುದಲ್ಲಲ್ಲಿ ನಿಚ್ಚಂ|| ೩

ತರುಸಂತಾನಮದೊಪ್ಪೆ ತನ್ನತಟದೊಳ್ನೀರಾಟಕೆಂದೆಯ್ದಿ ಸಾ |
ರ್ದ್ದಿರೆ ದಿವ್ಯದ್ವಿಪಮಿಂಬುಗೊಂಡು ಜಳಮಂ ರಂಭಾದಿಗಳ್ನೀವಿಸು ||
ತ್ತಿರೆ ಕೂರ್ಪಿಂದವಗಾಹಿಸುತ್ತನಿಮಿಷವ್ರಾತಂ ಕರಂ ತೋರೆ ನಿ |
ರ್ಜರಗಂಗಾನದಿ ತಾನಿದೆಂಬತೆರದಿಂ ಕಾವೇರಿ ಕಣ್ಗೊಪ್ಪುಗುಂ || ೪

ಕಂ|| ಶರನಿಧಿಯೊಳೊಗೆದವಿಷಮಂ |
ಧರಿಯಿಸಿ ಸುರರಂ ಸಮಂತು ಪೊರೆದಭವಂಗೀ ||
ಧರೆ ಪಾಸಿದನಡೆಮುಡಿಯೆನೆ |
ಕರಮೆಸೆದುದು ವಿಮಳಗುಣದಿನಾನದಿ ಪದಪಿಂ || ೫

ವೃ|| ದರದಳಿತಾಂಬುಜಾನನದೊಳೊಪ್ಪುವಕಸ್ತುರಿಬೊಟ್ಟಿನಂತೆ ಸಾ |
ದ್ರಿರಲಳಿ ತೊಟ್ಟಮುತ್ತುಗಳಿವೆಂಬಿನವೊಪ್ಪಿರೆ ಶೀಕರಾಳಿ ಬೆ ||
ಳ್ಪೊರೆ ಸಿರಿಕಂಡದಣ್ಪಿನೆ ವಿರಾಜಿಸೆ ಪದ್ಮಪರಾಗವಾಸೆ ವಾ |
ಙ್ಘರಜಪಲಾಕ್ಷಿ ಪೊಚ್ಚಪೊಸವೆಣ್ಣಲೆ ಸಿಂಗರವಾಂತು ತೋರಿದಳ್ || ೬

ಪರಿಗತಕೃಷ್ಣವೇಣಿಯುರರೀಕೃತಪುಷ್ಕರೆ ಸಿಂಧುರಾಗಬಂ |
ಧುರೆ ಧೃತತುಂಗಭದ್ರೆ ಜಿತಭಾನುಜೆ ಗೋಮತಿ ಧೂತಪಾಪೆ ಭಾ ||
ಸುರತರಲೋಕಪಾವನೆ ನತಾಘಲತಾಸಿ ಸಮಸ್ತದೇವತಾ |
ವರಣೆ ಕವೇರಕನ್ಯೆ ಕೆಳೆಗೊಂಡಳನೇಕನದೀವಿಳಾಸಮಂ || ೭

ಕಂ|| ಚಾರುಪಯೋಧರೆ ಮಹಿಮಾ |
ಧಾರೆ ಸದಾನಿಮಿಷಸೇವ್ಯರಸಯುತೆ ವರಶ್ರೃಂ ||
ಗಾರಾಜಿತೆಯೆನಿಸುವ ಕಾ |
ವೇರಿ ಧರಾಕಾಮಧೇನುವೆನಿಪ್ಪುದು ಪುಸಿಯೇ || ೮

ವಚನ|| ಎಂಬನೆಗಳ್ತೆವಡೆದಾತರಂಗಿಣಿ ತಡಿಗೊಂಡು ಬಳೆದರೆವಿರಿದ ಸರಸಿಜದಳ ಸರಸಪರಿಮಳಕೆ ಮೊರೆದೆರಗುವಪರಮೆವರಿದುರುಗಲಿಂ ತೊರೆಯೊರೆಯುನೊಳ್ಪುರುಡಿಸಿ ನೀಲರತ್ನಮಂ ಧವಳನಳಿನಶುಕ್ತಿಯೊಳ್ಪಡೆದಪಳೆಂಬಂತಿಂಬುವಡೆದು, ಪಾಳಿಯಿಂ ಜಳಕೇಳಿಗೈದು ತಳರ್ದತುಂಬುಜೌವನದ ನಿತಂಬಿನಿಯರ ಕುಂಭಕುಚದಿರುಂಬಿನೊಳಿಂಬುವಡೆದು ತುಂಬಿದಮಿಗಸೊಕ್ಕುಗೆಸರಿಂ ಮೈಗಚ್ಚಿಕೊಳ್ವಮದಗಜಂಗಳ ಕಟತಟದ ಮದಕರ್ದಮದಿನೊಡವೆರೆದುಕಲಂಕಿ ಕಲಸಿ ಕಡುಗರ್ಪ್ಪನಾಳ್ದ ಕಾಳಿಂದಿಯಂತೆ ಕಣ್ಗೆವಂದು, ತೀರದೇಶದಪುಳಿನತಳದೊಳೋರಣದಿನಡಿಯಿಡುವರಸಂಚೆವರಿಗಳ ಮೆಲ್ನಡೆಗೆ ನಿಟ್ಟೆಪಬಟ್ಟಜೌವನೆಯರ ದಿಟ್ಟಿ ತಾಗದಂತೆ ಕಟ್ಟಳ್ಕರಿಂ ತೂಪಿರಿದಪಳೆನೆ ತುರುಗಿ ತೂರಿ ಸಿಡಿವಸೀಪ್ಪನಿ ಕಡುಬೆಡಂಗುವಡೆಯೆ ಸುಸಿಲೆಸಗಿ ಬಳಲ್ದು ಬಸವಳಿದು ಪಸಿದಜಕ್ಕವಕ್ಕಿ ಮೆಲಲೆಂದು ಸಾರ್ತಂದು ಮೃದುಮೃಣಾಳಮಂ ಮುರಿದೆತ್ತೆ ನೊಂದೆನೆಂದಳಿರವವ್ಯಾಜದಿನಳ್ವನಳಿನಿಯುಂ ನೆರೆನೆಗೆವನಿಡುಮೀಂಗಣ್ಗಳಿಂ ಸಿಕ್ಕಿನೋಡಿ ಘುಳುಘುಳಿಸಿ ಮೊರೆವನೆವದಿಂ ಪಲ್ಮೊರೆ

ನು ತೆರೆದೋಳನೆತ್ತಿ ಕಳೆಗೊಂಡು ಪೊಱೆವಂತೆ ತಳ್ತು ಪಾಯ್ದುಸಿಡುವಾಸಿಯಿಂ ರಂಜಿಸಿ ನೀರಾಟಕೆಳಸಿ, ತೀರದೇಶದೊಳ್ನಿಂದ ವಾರನಾರಿಯರ ನಿಡುಜಡೆಯ ಪಡಿನೆಳಲನೊಳಕೊಂಡು ನಿಜಸಲಿಲನಿರ್ಮಲತೆಯಿಂ ನಾಗಲೋಕದ ನಾಗಿಣಿಯರಂ ತೋರ್ಪಂತೆ ತೋರ್ಕೆವಡೆದು, ನೀರ್ವೊಗೆಯಲೆಂದು ನಿಲುಂಬಿನಿಂದ ಪೌರನಿತಂಬಿನಿಯರ ಕರಘಟಿತಘಟಪಟಳಮುಂ ಕಂಡಗಸ್ತ್ಯಜನಕಂಗಳನೇಕಂಗಳೀಂಟಲೆಳ್ತಂದುವೆಂದಳ್ಕಿ ನಡುಂಗುವಂತೆ ಪವನಪ್ರಪಾತಚಲಿತಕಲ್ಲೋಲಮಾಲೆಯಿಂ ಕಂಪಿಸಿ, ಕುಡಿಗೊಂಡ ಬೆಳ್ನೊರೆಯಿಂ ಕರೆಕತ್ತರಿಸಿದಂಬರದಂತೆಂಬುವಡೆದು, ಮತ್ತಮಿತ್ತೆರಂಬಿಡಿದು ಬಿತ್ತರಂಬಡೆದು ಒಳೆದ ಚೂತಚಂಪಕ ಕುಟಜ ಕುರವಕ ತಿಲಕ ಬಕವಕುಳ ಲಿಕುಚ ತಮಾಲ ತಾಲಹಿಂತಾಲ ಪೂಗಪುನ್ನಾಗ ಕದಳೀಕಂಕೇಳಿ ನಾರಂಗ ನಾಳಿಕೇರ ಪನಸ ಪಾಟಲೀ ಜಂಬು ಜಂಬೀರ ಕದಂಬ ಕಪಿತ್ಥ ಲವಂಗ ದಾಡಿಮ ದ್ರಾಕ್ಷಾ ಮಾಲತೀ ಮಲ್ಲಿಕಾ ಜಾತಿ ಯೂಥಿಕಾ ಮುಖಲಲಿತ ಲತಾವಿತಾನವನದಿಂ ಪರಿಶೋಭೆವಡೆದು, ಜಪತಪೋನುಷ್ಠಾನಪರಾಯಣಪರಮತಪೋಧನನಿವಹಸ್ನಾನಪಾನಾನುಕೂಲೆಯೆನಿಸಿ, ತನ್ನ ನೆಸೆದರಂ ನಿರ್ಮಲರಂ ಮಾಡುತ್ತೆ, ಕಂಡರಂ ಕಲುಷರಹಿತರೆನಿಸುತ್ತೆ, ಮುೞುಂಗಿದರ ಮೋಹಮುಂ ಪರಿಯುತ್ತೆ, ಸೇವಿಸಿದರ್ಗೆ ಸುಕೃತಮಂ ಸಾರ್ಚುತ್ತೆ, ಮನಕ್ಕೆ ಮನೋಹರಮೆನಿಸಿ ನುತಿವೊಡೆತರ್ಕ್ಕೆಮಾಗಿ ಪರಮಪವಿತ್ರರೂಪಿಣಿ ಪರಿದೊಪ್ಪುತ್ತುಮಿರ್ಪಳಂತು ಮಲ್ಲದಿಯುಂ||

ವೃ|| ಇಳೆಯುಂ ಪಾಲಿಪನ್ನೈಸಿನೆ ಬಂದು ಬೆಳೆಯುಂ ಜಂಪ್ರಾತ್ರಸದ್ರತ್ರಿನಿ |
ರ್ಮಳೆಯುಂ ನಿರ್ಮಿತಶರ್ಮ್ಮಧವಳಫಳೆಯುಂ ಪದ್ಮೋತ್ಪಲೋತ್ಫುಲ್ಲಸಂ |
ಕುಳೆಯುಂ ಕೋಕಬಳಾಕಹಂಸಬಳೆಯುಂ ಡಿಂಡೀರಪಿಂಡಾಘಮುಂ |
ಜುಳೆಯುಂ ಪೆಂಪಿನಲಂಪನಾಳ್ದಪೊಳೆಯುಂ ಪೆರ್ಬ್ಬಣ್ಣಿ ನಲ್ಬಕ್ಕ್ಕ್ರಮೋ || ೯

ವ|| ಎನಿಸಿರಂಜಿಸಿದ್ದುದದರತಟನಿಕಟಪ್ರದೇಶದಲ್ಲಿ

ವೃ|| ಒಳಸಿರೆ ನೀಲನೀರಜವನಂ ಕರೆಯುಂಕಿನಪೊಲ್ಪೊಡರ್ಪ್ಪಿಸಿಂ |
ಬೆಳೆದೆಳಗೆಂಪನಾಂತ ಕಡೆಗದ್ದೆಗಳಂತರವರ್ಣಧಂತೆ ಕಂ ||
ಗೊಳಿಸೆ ಶುಕಾಳಿ ಚಿತ್ರಮೆನೆ ರಂಜಿಸೆ ಪಚ್ಚೆಯ ಸೇಲೆಯುಂ ಧರಾ |
ಲಲನೆ ವಿಳಾಸದಿಂ ತಳೆದಳೆಂದೆನೆ ಶಾಲಿಯ ಗದ್ದೆ ತೋರುಗುಂ || ೧೦

ವೃ|| ದರದಳಿತಾಂಬುಜಾನನದೊಳೊಪ್ಪುವಕತ್ತುರಿಬೊಟ್ಟಿನಂತೆ ಸಾ |
ರ್ದ್ದಿರಲಳಿ ತೊಟ್ಟಮುತ್ತುಗಳಿವೆಂಬಿನಮೊಪ್ಪಿರೆ ಶೀಕರಾಳಿ ಬೆ ||
ಳ್ನೊರೆ ಸಿರಿಕಂಡದಣ್ಪಿನೆ ವಿರಾಜಿಸೆ ಪದ್ಮಪರಾಗವಾಸೆ ವಾ |
ಶ್ಚರಜಪಲಾಕ್ಷಿ ಪೊಚ್ಚಪೊಸವೆಣ್ಸಲೆ ಸಿಂಗರವಾಂತು ತೋರಿದಳ್ || ೬

ಪರಿಗತಕೃಷ್ಣವೇಣಿಯುರರೀಕೃತಪುಷ್ಕರೆ ಸಿಂಧುರಾಗಬಂ |
ಧುರೆ ಧೃತತುಂಗಭದ್ರೆ ಜಿತಭಾನುಜೆ ಗೋಮತಿ ಧೂತಪಾಪೆ ಭಾ ||
ಸುರತರಲೋಕಪಾವನೆ ನತಾಘಲತಾಸಿ ಸಮಸ್ತದೇವತಾ |
ವರಣೆ ಕವೇರಕನ್ಯೆ ಕೆಳೆಗೊಂಡಳನೇಕನದೀವಿಳಾಸಮಂ || ೭

ಕಂ|| ಚಾರುಪಯೋಧರೆ ಮಹಿಮಾ |
ಧಾರೆ ಸದಾನಿಮಿಷಸೇವ್ಯರಸಯುತೆ ವರಶ್ರೃಂ ||
ಗಾರಾಜಿತೆಯೆನಿಸುವ ಕಾ |
ವೇರಿ ಧರಾಕಾಮಧೇನುವೆನಿಪುದು ಪುಸಿಯೇ || ೮

ವಚನ|| ಎಂಬನೆಗಳ್ತೆವಡೆದಾತರಂಗಿಣಿ ತಡಿಗೊಂಡು ಬಳೆದರೆವಿರಿದ ಸರಸಿಜದ ರಲ ಸರಸಪರಿಮಳಕೆ ಮೊರೆದೆರಗುವಪರಮೆವರಿದುರುಗಲಿಂ ತೊರೆಯೊರೆಯನೊಳ್ಪುರುಡಿಸಿ ನೀಲರತ್ನಮಂ ಧವಳನಳಿನಶುಕ್ತಿಯೊಳ್ಪಡೆದಪಳೆಂಬಂತಿಂಬುವಡೆದು, ಪಾಳಿಯಿಂ ಜಳಕೇಳಿಗೈದು ತಳರ್ದತುಂಬುಜೌವನದ ನಿತಂಬಿನಿಯರ ಕುಂಭಕುಚದಿರುಂಬಿನೊಳಿಂಬುವಡೆದು ತುಂಬಿದಮಿಗಸೊರ್ಕ್ಕಿಗೆಸರಿಂ ಮೈಗರ್ಚ್ಚಿಕೊಳ್ವಮದಗಜಂಗಳ ಕಟತಟದ ಮದಕರ್ದಮದಿನೊಡವೆರೆದು ಕಲಂಕಿ ಕಲಸಿ ಕಡುಗರ್ಪ್ಪನಾಳ್ದ ಕಾಳಿಂದಿಯಂತೆ ಕಣ್ಗೆವಂದು, ತೀರದೇಶದಪುಳಿನತಳದೊಳೋರಣದಿನಡಿಯಿಡುವರಸಂಚೆವರಿಗಳ ಮೆಲ್ನಡೆಗೆ ಸಿಟ್ಟಿಪಬಟ್ಟಜೌವನೆಯರ ದಿಟ್ಟಿ ತಾಗದಂತೆ ಕಟ್ಟಳ್ಕರಿಂ ತೂಸಿರಿದಪಳೆನೆ ತುರುಗಿ ತೂರಿ ಸಿಡಿವಸೀರ್ಪ್ಪನಿ ಕಡುಬೆಡಂಗುವಡೆಯೆ ಸುಸಿಲೆಸಗಿ ಬಳಲ್ದು ಬಸವಳಿದು ಪಸಿದಜಕ್ಕವಕ್ಕಿ ಮೆಲಲೆಂದು ಸಾರ್ತ್ತಂದು ಮೃದುಮೃಣಾಳಮಂ ಮುರಿದೆತ್ತೆ ನೊಂದೆನೆಂದಳಿರವವ್ಯಾಜದಿನಳ್ಪನಳಿನಿಯಂ ನೆರೆನೆಗೆವನಿಡುಮೀಂಗಣ್ಗಳಿಂ ಸಿಕ್ಕಿನೋಡಿ ಘುಳುಘುಳಿಸಿ ಮೊರೆವನೆವದಿಂ ಪಲ್ಮೊರೆ

ದು ತೆರೆದೋಳನೆತ್ತಿ ಕಶೆಗೊಂಡು ಪೋದವಂತೆ ತಳ್ತು ಪಾಯ್ದುಸಿಡುವಾಸಿಂಪಿಂ ರಂಜಿಸಿ ನೀರಾಟಕೆಳಸಿ, ತೀರದೇಶದೊಳ್ನಿಂದ ವಾರನಾರಿಯರ ಸಿಡುಜಡೆಯ ಪಡಿನೆಳಲನೊಳಕೊಂಡು ನಿಜಸಲಿಲನಿರ್ಮಲತೆಯಿಂ ನಾಗಲೋಕದ ನಾಗಿಣಿಯರಂ ತೋರ್ಪಂತೆ ತೋರ್ಕೆವಡೆದು, ನೀರ್ಮೊಗೆಯುತೆಂದು ಸಿಲುಂಬಿನಿಂದ ಪೌರನಿತಂಬಿನಿಯರ ಕರಘಟಿತಘಟಪಟಳಮುಂ ಕಂಡಗಸ್ತ್ಯಜನಕಂಗಳನೇಕಂಗಳೀಂಟಲೇಳ್ತಂದುವೆಂದಳ್ಕಿ ನಡುಂಗುವಂತೆ ಪವನಪ್ರಪಾತಚಲಿತಕಲ್ಲೋಲಮಾಲೆಯಿಂ ಕಂಪಿಸಿ, ಕುಡಿಗೊಂಡ ಬೆಳ್ನೊರೆಯಿಂ ಕರೆಕತ್ತರಿಸಿದಂಬರದಂತಿಂಬುವಡೆದು, ಮತ್ತಮಿತ್ತರಂಬಿಡಿದು ಬಿತ್ತರಂಬಡೆದು ಬಳೆದ ಚೂತಚಂಪಕ ಕುಟಜ ಕುರವಕ ತಿಲಕ ಬಕವಕುಳ ಲಿಕುಚ ತಮಾಲ ತಾಲಹಿಂತಾಲ ಪೂಗಪುನ್ನಾಗ ಕದಳೀಕಂಕೇಳಿ ನಾರಂಗ ನಾಳಿಕೇರ ಪನಸ ಪಾಟಲೀ ಜಂಬು ಜಂಬೀರ ಕದಂಬ ಕಪಿತ್ಥ ಲವಂಗ ದಾಡಿಮ ದ್ರಾಕ್ಷಾ ಮಾಲತೀ ಮಲ್ಲಿಕಾ ಜಾತಿ ಯೂಥಿಕಾ ಮುಖಲಲಿತ ಲತಾವಿತಾನವನದಿಂ ಪರಿಶೋಭೆವಡೆದು, ಜಪತಪೋನುಷ್ಠಾನಪರಾಯಣಪರಮತಪೋಧನನಿವಹಸ್ನಾನಪಾನಾನುಕೂಲೆಯೆನಿಸಿ, ತನ್ನ ನೆಸೆದರಂ ನಿರ್ಮಲರಂ ಮಾಡುತ್ತೆ, ಕಂಡರಂ ಕಲುಷರಹಿತರೆನಿಸುತ್ತೆ, ಮುಳುಂಗಿದರ ಮೋಹಮಂ ಪಱಯುತ್ತೆ, ಸೇವಿಸಿದರ್ಗೆ ಸುಕೃತಮಂ ಸಾರ್ಚುತ್ತೆ, ಮನಕ್ಕೆ ಮನೋಹರಮೆನಿಸಿ ನುತಿಪೊಡತರ್ಕ್ಕೆಮಾಗಿ ಪರಮಪವಿತ್ರರೂಪಿನ ಪರಿದೊಪ್ಪುತ್ತುಮಿರ್ಪಳಂತು ಮಲ್ಲನದಿಯುಂ||

ವೃ|| ಇಳೆಯುಂ ಪಾಲಿಪನೈಪಿನಿಂದುಬೆಳೆಯುಂ ಚಂದ್ರಾರ್ಕಸದ್ರತ್ನನಿ |
ರ್ಮಳೆಯುಂ ನಿರ್ಮಿತಶರ್ಮಧರ್ಮಫಳೆಯುಂ ಪದ್ಮೋತ್ಪಲೋತ್ಫುಲ್ಲಸಂ |
ಕುಳೆಯುಂ ಕೋಕಬಕಾಕಹಂಸಬಳೆಯುಂ ಡಿಂಡೀರಪಿಂಡಾಘಮುಂ |
ಜುಳೆಯುಂ ಪೆಂಪಿನಲಂಪನಾಳ್ದಪೊಳೆಯುಂ ಪೇಳ್ಪನ್ನೆಸಲ್ಪಕ್ಕುಮೋ || ೯

ವ|| ಎನಿಸಿರಂಜಿಸಿರ್ದ್ದುದದರತಟನಿಕಟಪ್ರದೇಶದಲ್ಲಿ

ವೃ|| ಒಳಸಿರೆ ನೀಲನೀರಜವನಂ ಕರೆಯುಂಕಿನವೊಲ್ಪೊಡರ್ಪ್ಪಿನಿಂ |
ಬೆಳೆದೆಳಗೆಂಪನಾಂತ ಕಡೆಗರ್ದ್ದೆಗಳಂತರವರ್ಣ್ಣಘಂತೆ ಕಂ ||
ಗೊಳಿಸೆ ಶುಕಾಳಿ ಚಿತ್ರಮೆನೆ ರಂಜಿಸೆ ಪಚ್ಚೆಯಸೀರೆಯುಂ ಧರಾ |
ಲಲನೆ ವಿಳಾಸದಿಂ ತಳೆದಳೆಂದೆನೆ ಶಾಲಿಯಗರ್ದ್ದೆ ತೋರುಗುಂ || ೧೦

ವ|| ಅಂತುಮಲ್ಲದೆಯುಂ

ಕಂ|| ತೂಗುತೆ ತೊನೆಯುತೆ ಬಳ್ಕುತೆ |
ಬಾಗುತೆ ಕಂಪಿಡುತೆ ಕನರುಚಿದಾಳುತ್ತುಂ ||
ರಾಗಿಸುತೆ ರಂಜಿಸುತೆ ಸೊಂ |
ಪಾಗಿರ್ದ್ದುವು ಕಣ್ಗೆ ಗಂಧಶಾಲಿವನಂಗಳ್ || ೧೧

ಗಿಳಿಗಳ ಬಳಗಂ ಗಳಗಳ |
ಸಿಳಿದೊಳಪೊಕ್ಕೆಳಸಿ ಬಳಸಿ ಖರಚಂಚುಪುಟಂ ||
ಗಳಿನುಡಿವುದೆಂದಗಿದು ನೀ |
ರ್ಗ್ಗಳನೊಳಪೊಕ್ಕಂತೆ ನೆಲ್ಲಗರ್ದ್ದೆಗಳೆಸೆಗುಂ || ೧೨

ಪಾಲ್ದುಂಬಿದ ಸಾಲ್ದೆನೆಗಳ |
ನೆಲ್ದುರುಗಲನೊಲ್ದು ಸೀಳೆ ಗಿಳಿ ಭಯಭರದಿಂ ||
ಜೋಲ್ದಿಳಿಗಿಳಿಪಂತಿರೆ ಬಂ |
ಬಲ್ದೆರೆಯೊಳ್ಪೊಳೆದು ಮಡಿಯನೀರೊಳ್ತೋರ್ಕ್ಕಂ || ೧೩

ಅರಗಿಳಿ ಸೀಳ್ದೊಡೆ ಮಡಿಯೊ |
ಳ್ಸುರಿದಿರೆ ನೆಲ್ವಾಲ್ತುದಂಬುವಂ ಹಂಸಂ ಬೇ ||
ರಿರಿಸುತಮರ್ದೀಂಟಿ ಕಾಣುತೆ |
ಸಿರವೊಲೆವಂತೊಲೆವಕಳಮೆಗಳ್ಕಣ್ಗೆಸೆಗುಂ || ೧೪

ಎಳಗಿಳಿಗಳ ಬಳಗಂ ಗಳ |
ಗಳಸಿಳಿತಂಡೆಳಸಿ ಬಳಸಿ ಸುಳಿದೊಳಪುಗುತುಂ ||
ಸಳನಳಿಸಿ ಜೆಳೆದು ಕಳಿಯದ |
ಕಳಮೆಯ ಕಣಿಶಂಗಳಂ ಕರಂಖಂಡಿಸುಗುಂ || ೧೫

ಸ್ರ|| ಬಡನಡು ಬಳ್ಕೆ ಬಟ್ಟವೊಲೆ ಮೇಲುದನೆತ್ತೆ ನಿತಂಬಮುಂಡಳಂ |
ಪೊಡರೆ ಕಪೋಲರಂಗದೊಳೆ ನರ್ತಿಸೆ ಕನ್ನವುರಂಸರಾಗವಿ ||
ರ್ಕ್ಕಡೆಗೆಡೆಯಾಡೆ ನೋಟಮಳಿಯುತ್ತಿರೆ ಸೋವುರ್ಮ್ಮಡಿ ಬಂದು ನಿಂದು ಪೆ |
ರ್ಗ್ಗಡಣಾಪುದಲ್ಲಿ ಪಾಱಿಪುದು ಕೈರವದಿಂದಿಡುತುಂ ಶುಕಾಳಿಯುಂ || ೧೬

ವ|| ಮತ್ತಂ

ವೃ|| ತಾವರೆಗಾವೊಳಾಗಿಸಿದಬಿಲ್ಗದಿರೀರೆಳೆಯೇರಿಸುತ್ತೆ ಪೆ|
ಲ್ವಾವರಿಸಿದ್ದರ್ತದ್ವಳದಪಟ್ಟೆಯ ಮಧ್ಯದೊಳಿಟ್ಟು ಕಟ್ಟಿ ಭೃಂ ||
ಗಾವಳಿಯೆಂಬವಿಂಟೆವಿಡಿದಂಟಿಸಿ ಗೆಂಟಿನೊಳಿಟ್ಟು ಪಾರಿಪ |
ತ್ತಿರ್ಗೀವಿದಕೀರಮಂಡಳಿಯನಲ್ಲಿಯ ಪಾಮರಿಯರ್ನಿರಂತರಂ|| ೧೭

ವ|| ಅವರೊಳೊರ್ವಪಾಮರಿ

ಕಂ|| ಆರಗಿಳಿಯಂ ಸೋವಲ್ಸರ |
ಸಿರುಹೇಕ್ಷಣೆ ಸಿಂದು ಕುಮುದಮಂ ಕೀಳ್ತಿಡೆ ಶಂ ||
ಬರರಿಪುವಿಸೆ ಘೀಂಕೃತಿಯೊಡೆ |
ವೆರೆದತದಸ್ತ್ರಮನೆ ಸಾಳಿರವಮದು ಪೋಲ್ಗುಂ || ೧೮

ವ|| ಮತ್ತವೊಂದೆಡೆಯೊಳೊರ್ವ್ವಮತ್ತಕಾಶಿನಿ ಗಿಳಿಯಂ ಪಾರಿಪಲ್ಲಿ

ಕಂ|| ಎಳೆಯಳ ಕಣ್ಗದಿರೋಡುವ |
ಗಿಳಿಗಳ ಬೆಂಬತ್ತಿ ಸುತ್ತಿ ಮುತ್ತಿರೆ ತೋಕ್ಕುರ್ಂ ||
ಪೊಳೆವಿಡುವಲೆಯಿಡೆಯುವಳವ |
ನೊಳಗಾಗಿಸಿದಂತೆ ಸೋಳ್ಪಪಥಿಕರ್ಗ್ಗಳ್ || ೧೯

ವ|| ಮತ್ತವೊಂದೆಡೆಯೊಳೊರ್ವಳ್ ವೃತ್ತಕುಚದ ಮತ್ತಗಜಗಮನೆ

ಕಂ|| ಪರುಂಜೌವನೆ ಮೇಲುದು |
ಜಾರೆ ಕೆಲಂದೋರೆ ತೋರವೊಲೆಗಳ್ಮೊದಲೊ ||
ಳ್ವಾರಿಸಿದಳ್ಯುವಧೃತಿಯಂ |
ಪಾರಿಸಿದಳ್ಬಳಿಕೆ ಗಿಳಿಯ ಕರತಳರವದಿಂ || ೨೦

ವ|| ಇಂತಸಂತಜನಮನಸ್ಸೂಚೀಸೂತ್ರಮಾದ ಕಳಮಕ್ಷೇತ್ರದನತಿದೂರದ ಭೂರಮೆಯ ಸಿಂದೂರ ಸೀಮಂತರೇಖೆಯಂತೆ ಪೆಂಬುಡಿ ತಳ್ತುಕಂಗೊಳಿಪಘಂಟಾಪಥದ ಪರಿಸರದಲ್ಲಿ

ವೃ|| ಎಳಗೌಂಗೊಳ್ಗುಂಬದಿಂ ಬಾಳೆಯು ತೊಲೆಯಿನಳಿಸ್ಫಾರಕಲ್ಹಾರಪುಷ್ಪಂ |
ಗಳ ಘಂಟಾಶ್ರೇಣಿಯಿಂ ಕೇತಕಿಯ ದಳದ ಕಿಳ್ಗಂತಿಯಿಂಬಾಳವೆತ್ತೂರ್ವ್ಗ ||
ಗಳ ಕೇರಿಂ ಬಾಲಸತ್ಪಲ್ಲವದ ಪೊದಕೆಯಿಂದಿಕ್ಷುದಂಡಗಳಿಂ ಕ |
ಣ್ಗೊಳಿಕುಂ ನಾನಾಲತಾಂತಪ್ರಸರಯುತಂಗಳ್ಪ್ರಪಾಮಂಟಪಂಗಳ್|| ೨೧

ವ|| ಅಲ್ಲಿ

ಕಂ|| ಪಚ್ಚಪಸಿವರೆಯದಲರ್ಗಳ |
ಪಚ್ಚದ ಶತಪತ್ರಸೂತ್ರದಿಂಬರದ ತೊಳ |
ಪ್ಪಚ್ಚಸಿಮೊಗದ ಸೊಗಯಿ |
ಪ್ಪಚ್ಚರಸಿಯರಂತೆ ಮೆರೆವತರುಣಿಯರೆಸೆದರ್ || ೨೨

ವ|| ಅಂತೊಪ್ಪುವಶ್ರಾಂತಪಥಶ್ರಾಂತಪಾಂಥಸಂತಾನನಯನಪಾಂಥಪ್ರತಾನಲಾವಣ್ಯರಸ ಪ್ರಪಾಶಾಲೆಯರಪ್ಪ ಬಾಲೆಯರೊಳೊರ್ವ್ವಳ್‌ಲೀಲೆವಡೆದು

ವೃ|| ತೊಳಗುವಚಂದ್ರಕಾಂತಕಲಶಂಬಿದಿದಂಬುಜನೇತ್ರೆ ನೀರನಂ |
ಜಳಿಪುಟದಲ್ಲಿ ಸಿಂದೆರೆಯ ತನ್ಮಧುರಾಧರ ರಾಗಮಿಶ್ರತ |
ಜ್ಜಳಮರುಣಾಂಬುವೆಂದುಸಿಕಸಿಪ್ಪುದನೀಕ್ಷಿಸಿ ಸಕ್ಕೊಡಾಕೆಯ |
ಜ್ಜ್ವಳದಶನಾಂಶುಮಿಶ್ರಮದು ಶಂಕೆಯನೋಡಿಸೆ ಪಾಂಥನೀಂಟಿದಂ || ೨೩

ಕಂ|| ಕರತಳಗತಜಳಬಿಂಬತ |
ತರುಣೀನೇತ್ರಮನೆ ನೋಡಿ ಪೆರನೊರ್ವ್ವಂ ತ ||
ತ್ಪರಿಮಳಕೆಂಟಟ್ಟಸಿತಾಂ |
ಬುರುಹಮಿದೆಂದೀಂಟಲೊಲ್ಲದೀಕ್ಷಿಸುತಿರ್ದ್ದಂ || ೨೪

ವೃ|| ಉಗುರ್ಗಳನುಣ್ಗದಿತ್ತೂರ್ಗಳಪಾಂಗಶಶಿಪ್ರಭೆ ಸಾರಸೌರಭಂ |
ಸೊಗಯಿಪಸುಯ್ಯೆಲರ್ಕ್ಕರಕವಾರಿಯೊಳಾಗಿಸೆ ನಿರ್ಮಳತ್ವಮಂ |
ನೆಗಳ್ದತಿಶೈತ್ಯಮಂ ಮೃದುಸುಗಂಧಮನಿಂದುನಿಭಾಸ್ಯೆ ನೂನೆಮಾ |
ರ್ಗಗನೆರ್ದತಣ್ಪಾನಾನೆ ತನು ರೋಮಾಂಚಿಸಿಕಂಪಿಸೆ ನೀರನೀಂಟಿದಂ || ೨೫

ವ|| ಮತ್ತಮಲ್ಲಿಪೆರತೊಂದರವಟ್ಟಿಗೆಯೊಳೊರ್ವ್ವಳ್ ||

ವೃ|| ನೀರೆರೆವಚ್ಚ ಜೌವನೆಯ ಮೇಲುದು ಮೆಲ್ಲನೆ ಜಾರೆ ಗೌರರು |
ಚ್ಚಾರುಕುಚಂಗಳೆಂಬ ಕಳಶಂಗಳ ಕಾಂತಿಪಯಃಪ್ರವಾಹಮಂ ||
ಪೀರುತೆ ಕಣ್ಗಳಿಂ ಮರೆದು ನೀರ್ಗುಡಿವಂದಮನಾಂದು ನಿಂದು ನಿ |
ಸ್ಸಾರಮುಖಂ ಮನೋಭವನ ಬಾಣದ ಬಾರಿಗೆ ಬಂದನಧ್ವಗಂ || ೨೬

ವ|| ಅಂತುಮಲ್ಲದೆಯುಂ

ವೃ|| ಅರಲಿಂ ಪಣ್ಣಿಂ ಪುರಂ ಪೆಣ್ಗಳಿಯಿನಳಿಯಿನುದ್ಯಾನಮುಂ ಭೂಜದಿಂದೀ|
ವರದಿಂ ಕಾಸಾರಮಾಸೇವದೆ ಪೊಸಬೆಳೆಯಿಂ ಭೂಮಿ ಭೂಮೀಜದಿಂ ತ ||
ಣ್ಣೆರಲಿಂ ಮಾರ್ಗಂ ಮರಾಳೋತ್ಕರದೆ ಸರೆವಚಕ್ರೌಘದಿಂ ಸಿಂಧು ಸಿಂಹೋ|
ತ್ಕರದಿಂ ಪೇರಾನೆಯಿಂ ಕಾನನಮಿಡಿದೆಸೆಗುಂ ದೇಶದೊಳ್ನಿಂದಜಸ್ರಂ|| ೨೭ ||

ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ|
ಪುದಿದೆತ್ತಂ ನವಸೌರಭಂಬಡೆದನಶ್ಛೃಂಗಾಳಿಯಿಂ ಗಾಳಿಯಿಂ ||
ಮದವತ್ತಾಮ್ರಮುಖಪ್ರತರ್ಜನಕರಸ್ತ್ರೀಶಾಳಿಯಿಂ ಶಾಳಿಯಿಂ|
ತದಿಳಾಮಂಡಳಮೊಪ್ಪುಗುಂ ಕ್ರಮುಕದೊಳ್ಪೊಂಬಾಳೆಯಿಂ ಬಾಳೆಯಿಂ|| ೨೮

ವ|| ಮತ್ತಮಾ ಜನಪದಂ ಸಮುದ್ರಂತೆ ಸದಾರಘನೋಪೇತಮುಮನಂತಾತಿಶಯಾನ್ವಿತಮುಂ ನಾಕಲೋಕದಂತೆ ಸುರಾಗನಂದನಾಶ್ರಿತಮುಂ ದಿರೌಘಮುಂ ವಿಮಳಾಪ್ಸರೋಗಣ ವಿರಾಜಿತಮುಂ ಅಳಕಾನಗರದಂತೆ ಗಣ್ಯಪುಣ್ಯಜನಮಿಳಿತಮುಂ ಧನಸನಾಢ್ಯೈಲಬಿಲೋಪಯುಕ್ತಮುಂ ಅಂತಪುರದಂತೆ ಮಹಾಮಹಿಷೀಮಂಡಿತಮುಂ ಗೋರಾಜಿತಾಂತಸ್ಥಿತಿಘೋಷಾಂಚಿತಮುಂ ಕಾರ್ಗಾಲದಂತೆ ವಿತತಕಾಸಾರಘನವನೋರ್ಜಿತಮುಂ ಮಿಳಿತಶಿಳೀಮುಖಕದಂಬಸುಮನೋಗಂಧವಹ ವಿಜೃಂಭಿತಮುಂ ತಪೋವನದಂತೆ ಪ್ರೋಲ್ಲಸತ್ಪಾವನಪಟಬರಮುಮನೇಕಶಾಖಾಶ್ರಿತದ್ವಿಜಧ್ವನಿಮನೋಜ್ಞಮುಂ ಭೈಷಜ್ಯಸಂಗ್ರಹದಂತೆ ಬಹುಧಾನ್ಯಕಧಾತ್ರೀ ಸಂಯುಕ್ತಮುಂ ಸಾರರಸೌಷಧಿಸಮೇತಮುಂ ಸರೋವರದಂತೆ ಕಳಮಹಿತಧ್ವನಿಹಂಸಯಾನಕಾಂತಮುಂ ಕಮಳಾಭಿರಾಮಮುಮೆನಿ ರಮಣೀಯಮಾಗಿಪ್ಪುದಂತುಮಲ್ಲದೆ

ಕಂ|| ದ್ವಿಜಹತಿ ವಸಿತಾಧರದೊ |
ಳ್ಪ್ರಜಾತಿಪಾತಂ ಮದಾಳಿಕುಳದೊಳ್ಬನದೊ ||
ಳ್ಕುಜನಾಳೀಕಾಕರಸಂ |
ಭಜನಂ ತಲೆದೋರ್ಕ್ಕುಮಲ್ಲದಿಲ್ಲಾನಾಡೊಳ್ || ೨೯

ಬಡತನಮುಂ ಮಾಂದ್ಯಮುಮಿ |
ಟ್ಟೆಡೆಯುಂ ಚಪಲತೆಯುಮಧಿಕತರ ಕುಟಿಲತೆಯುಂ ||
ಮಡದಿಯ ನಡು ನಡೆ ಮೊಲೆ ಕಂ|
ಣ್ಗಡೆಕುರುಳೊಳ್ತೋರ್ಕ್ಕುಮಲ್ಲಿ ತಲೆದೋರುಗುಮೇ || ೩೦

ಎನಗೆ ಪಗೆ ಧರ್ಮಮದನಿದು |
ವಿನಯದೆ ತಳೆದಿರ್ಪ್ಪುದೆಂದು ಮುಳಿದಂತೆವೊಲಾ ||
ಜನಪದಮನಧರ್ಮಂ ತೊರೆ |
ದನಿಶಂ ತದ್ರಿಪುಧರಿತ್ರಿಯೊಳ್ನೆಲಸಿರ್ಕ್ಕುಂ || ೩೧

ವ|| ಇಂತ ಖರ್ವವಿಭವಾವಾಸಮಾದ ಚೋಳದೇಶದ ಮಧ್ಯದೇಶದಲ್ಲಿ

ವೃ|| ಕ್ಷಿತಿವಧು ತಾಳ್ದಲಂಕೃತಿಯಿದೆಂದೆಸೆಸಿರ್ಪ್ಪುದುಸಾರವಸ್ತುಸಂ |
ಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರನಿ ||
ರ್ವೃತಿಕರ ರಾಜಪದ್ಧತಿ ಸದಾಶ್ರಿತಸಂತತಿ ದತ್ತನಿರ್ಜರ |
ಸ್ಥಿತಿ ನುತಿವೆತ್ತಧರ್ಮವತಿಯೆಂಬಪುರಂ ವಿತತಪ್ರಭಾವದಿಂ || ೩೨

ವ|| ವಿಳಾಸೈಕದೇಶಮಾದಾಪುರದಬಹಿಃಪ್ರದೇಶದಲ್ಲಿ

ಕಂ|| ಇರುಳೊಸರ್ವಚಂದ್ರಮಣಿಬಂ|
ಧುರತತ್ಪುರಸಾಲದಂಬು ಬಳಯಿಸೆ ಬೆಳೆದಾ ||
ಪುರಸಂದನಮಂ ಹರಹರ |
ಸುರನಂದನಮೆಂದು ಬಣ್ಣಿಸಲ್ಬಗೆವುಗದೇ || ೩೩

ವ|| ಎಂಬಪಿರಿಯಸಿರಿಯನಪ್ಪುಗೈದು

ಕಂ|| ಪರಿಗತರಂಭಾಸುಮನ |
ಸ್ಸ್ಫುರಿತಪ್ರಮದಾಳಿಮಂಜುಘೋಷಾಂಚಿತಮ ||
ಜ್ಝರಿವಡೆದುಪೋಲ್ತು ಮೆರೆದುದು |
ಪುರನಂದನಮುಮದುರ್ ಮಿಸುಪಸುರನಂದನಮಂ || ೩೬

ವೃ|| ಕಳರವಮಿಲ್ಲದಿರ್ಪಪಿಕನಂಚೆಗಳಾಡದಪೂಗೊಳಂ ಘಳಾ |
ವಳಿ ಬಳಸಿಲ್ಲದಿರ್ಪಪೊಸಮಾವಿಸಿವಾತುಗಳಾಡದಿರ್ಪಪೆ ||
ಣ್ಗಿಳಿಯುಳಿರಾಜಿ ರಾಜಿಸದತಾವರೆ ಪೂಗುಡಿ ಮೂಡಿ ತೋರದಿ|
ರ್ಪ್ಪೆಳಲತೆ ಮೆಲ್ಲಿತಲ್ಲದೆಲರಿಲ್ಲೆನೆ ತದ್ವನಮೇಂ ಮನೋಜ್ಞಮೋ || ೩೭

ವ|| ಮತ್ತಮಲ್ಲಿ||

ವೃ|| ಅರನೇರಿಲ್ನಿಂಬೆ ಕಂಕೆಲ್ಲಿ ಪಲಸು ಒಕುಳಂ ಬಾಳೆ ಪೇರೀಳೆ ತಾಳೀ |
ತರು ತೆಂಗುಂಕೌಂಗು ಸಪ್ತಚ್ಛದಕದಳಿ ತಮಾಲಂ ಲಸಚ್ಚಂಪಕಂ ಪಾ ||
ದರಿ ಪುನ್ನಾಗಂ ರಸಾಲಂ ತಿಲಕಕುರವಕಂ ಕರ್ಣಿಕಾರಂ ಕದಂಬಂ |
ಸಿರಿಸಂಶ್ರೀಪರ್ಣಿದಾಳಿಂಬನುರಮುಮದುರ್ಸಾಲ್ಗೊಂಡುಕಣ್ಗೊಪ್ಪುತಿರ್ಕ್ಕುಂ

ಎಳನನೆತೀವಿತೋರ್ಪ ಮೊನೆಮಲ್ಲಿಗೆ ತಾವರೆ ತೀವಿತೋರ್ಪತಂ |
ಗೊಳಮಳಿ ತೀವಿ ತೋರ್ಪಮಧುದೂತಿಯುಲರ್ತನೆತೀವಿತೋರ್ಪಪಾ ||
ಟಳಿ ಗಿಳಿತೀವಿತೋರ್ಪಪೊಸಮಾವ್ರತಳಿರ್ಬ್ಬಿಡೆ ತೀವಿತೋರ್ಪಮಂ |
ಜುಳತರಮಾದಶೋಕೆ ಮೆರೆದಿರ್ಪುದು ತದ್ವನಮಧ್ಯದೇಶದೊಳ್ || ೩೮

ವ|| ಮತ್ತಮಲ್ಲಿ||

ಕಂ|| ಬಲಪಪ್ಪಾರಡಿ ಬಗ್ಗಿಪ |
ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿ |
ರ್ಪ್ಪಲಜೊಂಪಂ ಕಾತೊರಗುವಘ |
ಲಾಳಿ ತಳ್ತಿರೆ ರಸಾಲಭೂರುಹಮೆಸೆಗುಂ ||

ವೃ|| ಅಲರ್ಗಂಪಿಂಗೆರೆಗಿರ್ದ್ದತುಂಬಿಗಳ ಬಂಬಲ್ಕಾರ್ಮ್ಮುಗಿಲ್ವಲ್ಲವಾ |
ವಲಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ ನಿರಾ ||
ಕುಲವೊಂದಿರ್ಪ್ಪಶುಕಾಳಿ ಶಕ್ರಧನುವೆಂಬಂತಾಗೆ ಮೇಘಾಗಮಂ |
ಬೋಲದೇಂ ಸೂಸಿದುದೋ ಮರಂದರಸವೃಷ್ಟಿವ್ರಾತಮಂ ಮಾಮರಂ ||

ಕಂ|| ಸ್ಮರನಲ್ಲಿ ಸೆಲಸಿ ನೆಲೆಗೊಂ |
ಡಿರೆ ಮಾಮರದತ್ತ ಗಿರಿಶನುರಿಗಣ್ಣುರಿ ಬಂ |
ದಿರದೆಱರ್ದು ಸುತ್ತಿ ಮುತ್ತಿದ |
ಪರಿಯಂ ಪಸರಿಪುದು ಚೆಲ್ವಚೆಂದಳಿರ್ದುರುಗಲ್ || ೪೦

ಮಲ್ಲಿಗೆ ಮಾಮರದೊಳದಳಿ |
ರಲ್ಲಿ ಮುಗುಳ್ತಡರೆ ಮುಗುಳ್ಗೆಳಿಸದುವು ಸಂಧ್ಯಾ ||
ಸಲ್ಲಲಿತ ತಾರಕಾಳಿವೊ |
ಲುಲ್ಲಳಿಪಾರಡಿಗಳಿಳಿವತಮಮೆಸಿಸಿಕ್ಕರ್ಕಂ || ೪೧

ಅಳಿಗಳ ಗಿಳಿಗಳ ತಳಿರ್ಗಳ |
ಫಳಂಗಳಲರ್ಗಳ ವಿಶೇಷವರ್ಣದಿನೆಸೆಗುಂ ||
ತಳತಳಿಸಪಂಚವರ್ಣದ |
ನಿಳಯುಮಿದೆನೆ ಮದನನೃಪತಿಗದು ಮಧುರಚಿತಂ || ೪೨

ತರುಣಾಮ್ರತರುಯುಗಳಮದ |
ಕರಿಗಳ್ಕದಳ್ಕೆ ನಿಲೆ ಮನೋಜನ ಬಿನದ ||
ಕ್ಕಿರದಪರ್ದವನಾದರ್ದರ್ |
ಬ್ಬರಿಪರ ಸರಿಗೈವಪರಭೃತಂಗಳ್ಪೋಲ್ಗಂ || ೪೩

ವೃ|| ತುದಿಗೇರಿರ್ದ್ದೊಂದು ಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ |
ರ್ಬ್ಬಿದಮಲ್ಲೀವಲ್ಲಿಯೋ ಒಲ್ವೊರಜಿ ಸಿಚಿತಭೃಂಗವ್ರಜಂ ನೀಲಶೋಭಾ ||
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ರಾ |
ತದ ನಾದಂ ವಾದ್ಯಮಾಗಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ||

ಕಂ|| ಎಲರಲೆಯೆ ಕೆಲಕೆ ತೊಲಗಿದ |
ಜಲಶಾಖೆಯ ತಳಿರ ತುಡುಕಲಾತುರಿಸಪಿಕಂ ||
ಗೆಲೆವಂದುದು ಮುಳಿದು ಕೆಲ |
ಕ್ಕೊಲೆದಳ ಚೆಂದುಟಿಯ ಚುಂಬಿಸಲ್ತ್ವವಕಿಪನಂ || ೪೫

ವ|| ಮತ್ತಮಲ್ಲಿ ||

ಕಂ|| ಚೆಂದಳಿರದು ಮಾಂದಳಿರೆಸೆ |
ಸಂದಣಿಸಿದಪಣ್ಗಳಿಗಳೆನೆ ತಾನುಂ ಮಾ ||
ಕಂದಮೆನಿಸಲ್ಕೆಗಳ್ಚಿದ |
ಚಂದಮನಾಂತಂತೆ ನೇರಿಲಲ್ಲೆಸದಿರ್ಕ್ಕುಂ || ೪೬

ಮಿಡಿ ಪಚ್ಚೆಯುಪರಲೆನೆ ಕೆಂ |
ಪಿಡಿಗರೆವಣ್ಪದ್ಮರಾಗವೆನೆ ತನಿವಣ್ಕಾ ||
ರ್ಪ್ಪಿಡಿದಿಂದ್ರನೀಲಮನೆ ಮಣಿ |
ಗಡಣಮನಾಂತಂತೆ ನೇರಿಲೆಸೆದುದು ಬನದೊಳ್ || ೪೭

ಅಮರ್ದಿನಿದನಿದರಿನಿದನೆಲೆ |
ಯುಮರರೆ ಸಂಸೋಳ್ಪುದೆಂದು ನಿಜರಸಮನಿಳಾ ||
ರಮೆ ಮರಕತಕಳಶದೆ ತುಂ |
ಬ ಮೇಲೆಸೇಡಿದಪಳೆಂಬವೊಲ್ತೆಂಗೆಸೆಗುಂ || ೪೮

ಬಡದಾಲವಾಲಜಲದೊ |
ಳ್ಕಡುಗೆಂಪಿಡಿದಿಡಿದಬೀಜರದನದ ಚೆಲ್ವಂ ||
ನಡೆನೋಳ್ಪರತಿರೆ ತೋರ್ಕ್ಕುಂ |
ಪಡಿಸೆಳಲಿಂಬಾಗೆ ಬಾಗಿ ರಸದಾಳಿಂಬಂ || ೪೯

ಬಲದಜಲದಕ್ಕೆ ಬಲವ |
ತ್ಫಲಮೀವುದು ತೆಂಗಿದರ್ಕ್ಕೆ ಕುಡದಾಯ್ತೇಸಂ ||
ಸಲಪಿದಿಳೆಗೆಂದೆರಗಿ ಸವ |
ಫಲಂಗಳೀವಂತೆ ಬಾಗಿ ಬಾಳೆಗಳೆಸೆಗುಂ || ೫೦

ಕಂ|| ಘನತರಫಳಮುಂ ಬೇರಿಂ |
ಕೊನೆವರೆಗಂ ತಾಳ್ದಬಕ್ಕೆವಲಸಿನ ಪಣ್ಗ ||
ಳ್ಮನಸಿಜನ ಮಲಗುಮೂಜೆಯು |
ನಸುಕರಿಪುವು ಸೋಳ್ಪಮನುಜನಿಕರಕಜಸ್ರಂ || ೩೧

ಗಗನೇಚರಿಯುಗ್ಗ್ರಗನದೆ |
ನೆಗೆತರುತುಂ ಬನದ ಕೌಂಗಿನೆಳಱಡಕೆಗಳಂ ||
ಮಿಗೆ ಪಚ್ಚೆವರಲಿನೆಂದು |
ಜ್ಜುಗಿಪತ್ತುೞಡಲೆಂದು ಬಂದು ನಿಂದದರೆಡೆಯೊಳ್ || ೩೨

ಅಲರಂಬಂ ಕುಸುಮಸಮು |
ಜ್ಜ್ವಲಲಿಂಗಮನರ್ಚಿಸಲ್ಕೆ ನಿಲಿಸಿದದೀವಾ ||
ವಳಿಯು ಘನಸ್ತಂಭಂಗಳ |
ವೊಲದೇಸೆಸೆದುವ್ತೊ ಸಪುಷ್ಪಚಂಪಕತರುಗಳ್ || ೩೩

ಬನಗಳ್ತಲೆಯುಂ ಕಮುಳಾ |
ಪ್ತನ ಕದಿರುಂ ಕಾದಿ ಮಡಿಯುತಳಿಯುಂ ಚಾಂಪೇ ||
ಯನಿಕಾಯಮಾದುವಲ್ಲದೊ |
ಡೆನಸುಂ ತದ್ದ್ವಯಕೆ ಪಗೆತನಂ ಸಮನಿಪುದೇ || ೩೪

ಕೆಂಬಟ್ಟೆಯ ಗೂಡಾರಮ |
ನಿಂಬರಿದು ಬಸಂತನೆಯ್ದೆ ಪೊಯ್ದನೊ ಮದನಂ ||
ಗೆಂಬಂತೆ ಮುಸುಕಿ ತಳಿರ್ಗಳಿ |
ನೇಂ ಬಂದುದೊ ಕಣ್ಗನೇಕಶಾಖಮಶೋಕಂ || ೩೫

ತಳಿರ್ಗಳೆ ದಳ್ಪುರಿ ಮುಸುಕಿ |
ದ್ದೞಳಿಗಳೆ ಪೊಸಮಸಿಗಳಾಗೆ ಮದನನ ಬಾಣಾ ||
ವಳಿಯುಂ ಕಾಸಲ್ಚೈತ್ರೋ |
ಜ್ಜ್ವಳಕಾರುಕನಿಟ್ಟಕುಂಮಟಂಬೊಲದೆಸೆಗುಂ || ೩೬

ವೃ॥ ಅಲರ್ವ್ವಿಲ್ಲಂಗಜವೀರ ನಿನ್ನ ಪಗೆಯಾವಂ ಕಾಯ್ದುವಂ ಬೈದು ಮೇ |
ಣ್ಕಲುಷಂಗೂಡಿದೆಯೆಂದು ವರ್ಜ್ಜಿಸಿದನೆನ್ನಂ ಬಂದೆನಿಂದಾಂ ನಿರಾ ॥
ಕುಲಮೆನ್ನೊಂದೆಸಳಂ ತೊಡರ್ಚ್ಚಿ ಬಿಡು ನಿನ್ನೀಬಿಲ್ಲೊಳಾಂ ಗೆಲ್ವೆನೆಂ |
ದುಲಿಪಂತುದ್ಭ್ರಮರಸ್ವನಂ ಸೊಗಯಿಸಿತ್ತಾ ತಾಣದೊಳ್ಕೈತಕಂ ॥ ೫೭

ಕಂ॥ ಹರನೊಳ್ಪುಸಿನುಡಿದಘಮಂ |
ಪರಿಹರಿಸಲ್ಕಿಜರಜೋವಿಭೂತಿಯಿನಂಗಂ ॥
ಬೊರೆದಕ್ಷಮಾಲೆಯಂ ಮೇ |
ಣ್ತಿರುಪುವವೊಲ್ಭೃಂಗಮಾಲೆಯಿಂದದು ಮೆರೆಗುಂ ॥ ೫೮

ವೃ॥ ಕೊಳನೊಂದಿರ್ದ್ದುದು ಕಣ್ಗೆ ಕೌತುಕಮನೀಯುತ್ತಲ್ಲಿಯತ್ಯುದ್ಭಸಿ |
ರ್ಮ್ಮಳಪಾನೀಯದಿನುರ್ವ್ವಿಬರ್ಪ್ಪತೆರೆಯಿಂ ಕನ್ನೈದಿಲಿಂ ಸೈದಿಲಿಂ ॥
ದಳಿಯಿಂದಂ ಕಳಹಂಸೆಯಿಂ ಕಮಳದಿಂ ಕೋಕಂಗಳಿಂ ಮೀಂಗಳಿಂ |
ಚಳಶೈವಾಳದಿನಿತ್ತರಂಬಿಡಿದಭೂಜಾತಾಳಿಯಿಂ ಪಾಳಿಯಿಂ ॥ ೫೯

ಕಂ॥ ಅಲರಂಬನಂಬುಗಳ ಜೆಳೆ |
ವೊಲಮಲರ್*ಕ್ಕಿಗಳ ಗೀತಶಾಲೆ ಸರೋಜೋ ॥
ತ್ಪಲಸಖರ ರಾಣಿವಾಸದ |
ನೆಲೆ ಮಂದಾನಿಲನ ಕೋಶಮಾಕಾಸಾರಂ ॥ ೬೦

ವೃ॥ ಪರಿಗತರಾಜಹಂಸರುಚಿರಂ ಜಿತಮಾನಸಮುನ್ನತಾಳಿಬೃಂ |
ದರುಚಿವಿಕೀರ್ಣಸಾರಸರಜೋಮರುದನ್ವಿತ ಪುಷ್ಪಕಂ ಪಯೋ ॥
ಧರವರಚಕ್ರಮಂಡಿತ ಸುಮಂಗಳಸೌಮ್ಯಕವಿಪ್ರಯುಕ್ತಮುಂ |
ಬರದವೊಲೇಂ ಮನಂಗೊಳಿಸಿತೋ ಪೊಸಮೀಂಗಳಿನಂಬುಜಾಕರಂ ॥ ೬೧

ವ॥ ಅಂತುಮಲ್ಲದೆಯುಂ

ವೃ॥ ಕಳಹಂಸೀಚಾರುಚಂಚೂದಳಿತಗಳಿತ ಬಾಲಾಬ್ಜಬೀಜಾಳಿಮುಕ್ತಾ |
ಕಳಿತಂ ಷಟ್ಪಾದಪಕ್ಷಾಹತಿಪತಿತಪಯೋರುಟ್ಪರಾಗಾರುಣಶ್ರೀ ॥
ಮಿಳದುದ್ಯದ್ವರ್ಣಕಂ ಕಂದಳಿತಕಮಳಚಿತ್ರಂ ಪ್ರವಿಷ್ಟಾರ್ಕರೋಚಿ |
ರ್ಜ್ವಳಿತಂ ಕಾಸಾರಮೊಂದಾರತಿ ರತಿರಚಿತಂ ಕಂತುಗೆಂಬಂತೆ ತೋರ್ಕ್ಕುಂ ॥ ೬೨

ವೃ|| ಸರದೊಳ್ಮಾರ್ಪ್ಪೊಳೆವರ್ಕಮಂಡಳಮುಮಲ್ಲೊಕ್ಕಿರ್ದ್ದತೀರಕ್ಷ್ಮಾ |
ಜರಜಃಪೂರಿತಪುಷ್ಪಬೃಂದಮುಮದೇಂ ಚೆಲ್ವಾಯ್ತೊ ತತ್ಪಂಕಜಾ ||
ಕರಚಾರುತ್ವಕೆ ಮೆಚ್ಚಿ ತೂಗೆ ಶಿರಮಂ ಮೇಲಂಬರಶ್ರೀಯು ಸುಂ |
ದರಸೀಮಂತದ ರತ್ನಮುಂ ಮುಡಿಯ ಪುಷ್ಪವ್ರಾತಮೊಕ್ಕಂದದಿಂ || ೭೩

ರತಿಕಾಮುರ್ಮ್ಮಲ್ಲಿಕಾಮಾಲತಿಗಳ ಲತಿಕಾಗೇಹದೊಳ್ತಾಳ್ದಮೋಘಂ |
ರತಿಕೇಳಿಶ್ರಾಂತಿಯಂ ತತ್ಸರದೊಳೆ ಜಳಕಂಬೊಕ್ಕವರ್ಪ್ಪೋಗೆ ಸೂಸಿ ||
ತ್ತು ತದೀಯಸಾಂಗಾಂಗರಾಗಂ ಪಿರಿದೆನೆ ಕರಮೊಪ್ಪಿತ್ತು ಕಂಜಾತಕಲ್ಹಾ |
ರತಟಕ್ಷ್ಮಾಜಾತ ಪುಷ್ಪಪ್ರಜರಜಮಳಿಪಕ್ಷಾನಿಲೋದ್ಧೂತಮೆತ್ತಂ || ೭೪

ಕಂ|| ನಿಜಪತಿಯಭಿಧಾನಮೆಸೀ |
ದ್ವಿಜನಾಂತುದು ಮಾಣದೆಂದು ಹಂಸಂಗಾಸೀ ||
ರಜಸಿ ಪದೆದಿತ್ತಮುಕ್ತಾ |
ಸ್ರಜಮೆನೆ ತತ್ತನುವೊಳಿಡಿದಜಳಕಣಮೆಸೆಗುಂ || ೭೫

ನೀರಕ್ಷೀರಪರೀಕ್ಷಾ |
ಧೀರತೆಗಾನಲ್ಲದಿಲ್ಲೆನುತೆ ಮುಡಿಗಿಕ್ಕಿ ||
ತ್ತಾರಾಜಹಂಸನೆನೆ ಖಗ |
ವಾರದೆ ಗರಿಗೆದರೆ ಜರಿದಗರಿ ನೆರೆ ಮೆರೆಗುಂ || ೭೬

ಮೊರೆವಳಿನಿಯು ರವಮಿಷದಿಂ |
ದರವಿಂದದಿ ಪಾಡೆ ಮೆಚ್ಚಿ ಮುತ್ತಿನ ಸರಮಂ ||
ಸರಸಿ ತೆರೆಗೈಯೊಳೀವಂ |
ತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ || ೭೭

ಅಂಬುಪ್ರತಿಬಿಂಬಿತರವಿ |
ಬಿಂಬದೊಳೊಡವೆರೆಯಲೆಂದು ಕಮಳಿಸಿ ಘನಮೋ ||
ಹಂಬಲಿದು ಮುಳುಗಿದಂತೆ ನಿ |
ಲುಂಬಿದತೆರೆ ಪೊಯ್ಯೆ ಮುಳುಗುತುಂ ಮೋಹಿಸುಗುಂ || ೭೮

ಕಂ|| ಆರಡಿಯೆರಗಿದೊಡೆ ಕೆಲಂ |
ಜಾರುತೆ ತರುಣಾಂಬುಜಂ ತರಂಗಾಹತಿಯಿಂ ||
ತೋರಿದುದಿನಿಯಂ ಚುಂಬಿಸೆ |
ನೀರೆ ಮೊಗಂದಿರುಪುವಂದಮಂ ಮುಳಿಸಿಂದಂ || ೧೯

ಅಲರ್ದಮೊಗದಿಂದೆ ನರುದಂ |
ಬಾಲಮುಗುಳ್ದಳ್ಕಳಿಸಿ ಪಚ್ಚೆವಡಿಗದೊಳೆಂಬಂ ||
ತಲರ್ದಲರಿಂದುಗುತುಂ ಕೀ |
ಳಿಲೆಯೊಳ್ಮಧುಮಿಶ್ರಿತದ್ರುಜಂ ರಂಜಿಸುಗುಂ || ೨೦

ದಳಿತಾಬ್ಜದಿಂದಮೊಂದೊಂ |
ದಳಿಗಳ್ಕೆಗೆನೆಗೆದು ಮತ್ತಮೆರಗುತ್ತಿರೆ ತ ||
ನ್ನಳಿನಿ ಹರಸೀಲದಿಂ ಕಂ |
ದಳದೊಳ್ತಿರಿಕಲ್ಲನಾಡುವಂತೆನ್ಸೋಱಿಸೆಗುಂ || ೨೧

ಮತ್ತಮಾಕಾಸಾರದಲ್ಲಿ,

ವೃ|| ಕುವಳಯಕುಟ್ಮಳಾವಳಿಯು ಪೆಗ್ಗರ್ಳಿಯುಂ ನೆಗೆನೇರಿಲಾಗಿಸು |
ತ್ತೆ ವನಜವಲ್ಲರೀನಿಬಿಡಕಂಟಕಸೂಚಿಪಿಬದ್ಧಯಂತ್ರಮೋ ||
ಳ್ತವೆ ಸುಸುಳ್ದೀರಿ ಪಾಸವಿಳಿಯೊಳ್ಪಿರಿದಾಡಿ ತರಂಗಸಂಘಸಂ |
ಭವರವವಾದ್ಯಕಾಡಿದುದು.ಕೊಡೆ ಝುಷಂ ಪೊಸಜೊಂಬನೆಂಬಿನಂ || ೨೨

ತೊರೆದಪಯೋಧರಂ ನವಮರಂದರಸಾಮೃತಪೂರ್ಣಕುಟ್ಮಳಂ |
ಪರಿಯುದೆ ನಿಂದತುಂಬಿ ಸೊಡರ್ವಕ್ಕಿನ ಜೊಟ್ಟು ಪಲಾಶಪಾಸವಿ ||
ಸ್ಫುರಿತಮರಾಳನೊಂದುಶಿಶುವಾಗಿರೆ ಜಾಣತಿಯಂತೆ ಕಣ್ಗದೇಂ |
ಸುರುಚಿರಮಾಯ್ತೊ ನೀರಜನಿ ಸೈಂಚರಜೋರಜನೀಪರಾಜಿತಂ || ೨೩

ಜಗಮಂ ಪುಟ್ಟಿಪನೆಸ್ನ ಸೂನು ಬುಧರಂತಲ್ತೆನ್ನದಿಕ್ಕೆರ್ನ್ನಪೋ |
ಲ್ಜಗದೊಳ್ಪೂರ್ಣರಜೋಗುಣಾನ್ವಿತನದಂತಿಕ್ರಾರ್ಕತನಂ ಶೂಲಿ ಸುಂ ||
ಮಗೆ ಕೊಂದಂಗಡ ನೋಡಿಮೆಂದಜಕಪಾಲಂಬೊತ್ತು ಪೇಳ್ವಂತೆ ಪಂ |
ಸಗತಾಂಭೋಜಮುದೊಪ್ಪಿದತ್ತು ಮಧುಬಾಷ್ಪಾಳಿಸ್ವನಾರ್ತಸ್ವರಂ || ೨೪

ಕಂ|| ತೀರಮಹೀರುಹನಿಕರಂ |
ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾ ||
ಸಾರಂ ಬೃಂದಾರಕತರು |
ವಾರಮನೊಳಕೊಂಡು ಪೆಂಪುವಡೆದಂಬುಧಿಯುಂ || ೭೫

ವೃ|| ನಳಿನೀನಾಳಮದೆಂಬ ಕಂಬಮನೆ ಕಟ್ಟುತ್ತಲ್ಲಿ ಚಕ್ರಂಗಳೆಂ |
ಬಲಸತ್ಸಂಗ್ರಹಣಂಗಳಂ ಪಿಡಿದು ಮೇಲೆತ್ತುತ್ತೆ ತತ್ಸೀಕರಾ ||
ವಳಿಪಪೂರ್ಣಂಬುವನಾಂತು ಪಂಕಜರಜೋವ್ಯುದ್ಧೂಳಿಯುಕ್ತಂ ಸರ ||
ಸ್ಥಳದೊಳ್ಮಾರನಮಲ್ಲನಂತೆ ಸುಳಿದಂ ಮೈದೋರಿ ಮಂದಾನಿಲಂ || ೭೬

ವ|| ಮತ್ತಮಾಪುರದ ಬಹಿರ್ವನಂ ದರದಳಿತಕುಸುಮವಿಸರವಿಳಸಿತಪರಾಗಪಟಲಸುರಭಿಲಲಿತಲತಾಲಿಂಗಿತ ತರುಣರಸಾಲತರುನಿಕರದೆಳಗೊಂಬಿನೊಳ್ಕುಳ್ಳಿರ್ದ್ದಂಕುರಮನವಲೋಕಿಸಿ ಭೋಂಕನೆತುಡುಂಕಿ ನಿಜಚಂಚುವಿಂದುಡಿದು ಕರ್ದುಂಕಿ ಜಗುಳ್ವರಸಧಾರೆಯಂ ಮಗುಳ್ದು ಸೇವಿಸಿ ಚಂಚತ್ಪಂಚಶರನ ಬಂಚದರಂತೆ ಮುಂಚಿ ಪಂಚಮದಿಂಚರಮಂ ಪಂಚಮೆನೆ ನೆಗಳ್ದು ಸಂಗಡಿಸಿದ ಕೆಂಗಣ್ಣಕ್ಕಿಗಳಿಂ | ಮತ್ತಮಲ್ಲಿ ಸಲ್ಲೀಲೆಯಿಂ ನಲ್ಲಳೊಡನೆ ಸುಸಿಲೆಸಗಿ ಬಳಲ್ದು ಬಾಯೂರಿ ಕಟ್ಟಿದಿರೊಳ್ಪೊಟ್ಟನೆಲರಲೆಯೆ ಸಾರೆವಂದ್ದು ಸೆಳೆಗೊಂಬಿನೊಳಿಂಬುವಡೆದ ತನಿವಣ್ಣಂ ಮನವಾರೆ ನೋಡಿ ಸಂತಸಂಮಿಕ್ಕು ಪೊಕ್ಕು ಪಕ್ಕದಿಂದಪ್ಪಿಮಿಂಚುವಚಂಚುವಿಂ ಸೆಳೆದು ಸೀಳ್ದು ಗಳಿಲನೆ ಗಳಿಯಿಪರಸಾಸಾರಮಂ ಮನೋರಮಣನಿಸಿಯುಳಬಿಂಬಾಧರರಸಮಂ ಸವಿವಂತೆ ಸವಿದು ಚೀತ್ಕಾರಂ ಪೊಣ್ಮೆ ಕಣ್ಮುಚ್ಚಿ ತನ್ನ ನಚ್ಚಿನನಲ್ಲಳಂ ಗರಿಸನ್ನೆಯಿಂ ಕೆಲಕ್ಕೆ ಕರೆದಳ್ಕರಿಂ ಮುಕ್ಕುಳಿಸಿ ಚಂಚುಗೂಡಿ ಗಾಡಿಯಿಂಪೆರೆದವಳ್ಗೂಡಿ ಕುಸುಮಪರಾಗಮೆಂಬಂಗರಾಗಮಂ ತಳೆದು ಮುಂದೆ ಮಂದಾನಿಲನಿನೊಗೆತಂದಚೆಂದಳಿದ್ದುರುಗಲ್ಸೀಗುರಿಯಾಗೆ ಕೆಲದೊಳಲರ್ವಕ್ಕಿಗಳಿನೊಲೆವರಸಾಲಲತಾಸರೆಲ ಶಾಖಾಗ್ರದೊಳ್ತೂಗುವ ಪೂಗುಡಿ ಧವಳ ಚಾಮರಮೆ

ಸಿಸೆ ಪಾಡುವಪರಮೆದುರುಗಲ ಸರಸರವಸಂಗೀತಮಿಂಬುವಡೆಯೆ ಕಳಕಂಠನ ಕಂಠನಿನದಂ ವಂದಿಧ್ವನಿಯಂತೆಸೆಯೆ ನಟ್ಟಗೊಂಬಿನ ತುತ್ತತುದಿಯೊಳಲರ್ವಡಿಸೆಗೆದು ಮಂಡೈಸಿ ಮಂಡಳಿಸಿ ಧವಳಾತಪತ್ರಲಕ್ಷ್ಮಿಯಂ ತಳೆಯೆ ರಾಜಶುಕಸಾಮುಕ್ಕಿದುಚಿತಮೆಂಬಂತೆ ಮೆರೆದು ಸೋಜಿಗಮನೆ ರಾಜಿಸುವ ರಾಜಶುಕಸಮಾಜದಿಂ | ಮತ್ತಮಲ್ಲಿ ಸಲ್ಲೀಲೆಯಿಂ ಮೆಲ್ಲಸಲೆವಮೆಲ್ಲೆಲರಿಂದುಳ್ಳಲರ್ದ ಮಲ್ಲಿಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ಪತ್ತೆ ಕರ್ಚ್ಚಿ ಕಳೆಯಲೆಂದು ಸಂದಣಿಸಿ ಗೊಂದಣಿಗೊಂಡೈದುತರವಿಂದಾಕರದರವಿಂದಬೃಂದ ಮರಂದರಸದೊಳ್ಮುಳುಂಗಿ ಪಿಂಗದೆ ಪಸಿವಿನೆಸಕದಿಂದೆಸಳಕುಸುಂಕರೊಳ್ಮುಸುಂಬಿಟ್ಟುಮುಸುಪಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ಕೆಲದ ಪುಂಡರೀಕದೊಳ್ಮಂಡಿಸಿದ ಮರಾಳಮಂಡಳಿಗಕಾಂಡಜಳದಮಂಡಳಶಂಕೆಯಂ ಘೋಂಕನಾಗಿಸಿಸೋಗಣ್ಗೆ ಪಾರಿಸಿ ಪರಕಲಿಸಿ ಪಾಡುವ ಪರಮೆವರಿಗಳಿಂ | ಮತ್ತಂ ಜಾತಿಯೂಥಿಕಾಮಲ್ಲಿಕಾಮಾಲತೀಲತಾಮಂಟಪಂಗಳೊಳ್ಕೆರೆದು ಸೆದೆವಟ್ಟಕಾದಲರ ಸುಯ್ಯೆಲರ ನರುಗಂಪಿನೊಡವೆರೆದು ಸೊಂಪುಗರೆವ ಚಂಪಕಮುಕುಳದೀಪಂಗಳನಲೆದು ಫಲಭಾರಮಂ ಪೊರಲಾರದೆ ನಿಂದು ಬಳ್ಕಿ ಒಸವಳಿವ ಬಾಲರಸಾಲಂಗಳ ಮಕರಂದಘರ್ಮಜಲಕಣಮನುದಿರ್ಚ್ಚಿ ಮೈಸಾರ್ಚ್ಚಿ ಸರಳಶಾಖೆಗಳಂ ಪೊತ್ತೆತ್ತಿ ಕುಸುಮವಿಸರಸುರಭಿರಜಮಂ ಕೊರಲ್ಕುಸಿಪಿಸಂ ಪೊತ್ತುಪಿಂದುಗೊಂಡು ಬರ್ಪ್ಪಿಂದಿಂದಿರಬೃಂದದ ಝುಂಕಾರರವವ್ಯಾಜದಿಂ ಪೊರಲಾರದೆ ನರಳ್ದು ನಿಂದುನಿಂದು ಬರ್ಪ್ಪಮಂದಾನಿಲಂಗೆ ಕರುಣಿಸಿ ಕೈಗೊಟ್ಟಪುವೆಂಬಂತೆ ಕೆಂದಳಿರಂಗಂಬೆತ್ತಿತ್ತಗೊಂಬಿಂಪೆತ್ತಮಾದನೇಕಾಶೋಕಾನೋಕಹಂಗಳಿಂ | ಮತ್ತಂ ವಸಂತರಾಜಂ ವನಲಕ್ಷ್ಮಿಯೊಡನೆ ಸುಳಿಲೆಸಗಲೊಡನವಳ ನಿಡುಮುಡಿಯಿಂ ಕುಚಕುಂಭದಿಂ ತನುಲತೆಯಿಂಸುರಿದು ಪಸರಿಸಿದ ಕುಸುಮವಿಸರಕುಂಕುಮರೇಣುಘರ್ಮಜಳಕಣಂಗಳೆಂಬಂತೆ ತರುತರುಗಳ ಸೆಳೆಗೊಂಬುಗಳೊಂದೊಂದನೊರಸೆ ಸುತ್ತಂ ಸೂಸಿ ಬಿಡದೆಲ್ಲೆಡೆಯೊಳ್ಪಲ್ವಿದ ಲಲಿತಲತಾಂತ ಪರಾಗಮಕರಂದಸಂದೋಹದಿಂ ದಳಿತಧವಳಕುಸುಮವಿಸರದಿಂ ಕಳಕಂಠನ ಕಳಕಳಧ್ವನಿಯಿಂ ನಾಕಲೋಕದ ನಂದನಮಂ ನಗುವಂತೆ ನಳಿನಬಾಣನ ಕೇಳೀನಿಳಯಮೆಂಬಂತೆ ಬನಸಿರಿಯ ಬಸದಡೆಯಂತೆ ಚೈತ್ರ

ರಾಜನ ಚಿತ್ರಶಾಲೆಯಂತಲರಂಬನ ಬಲದ ಗರುಡಿಯೆಂಬಂತೆ ಲತಾನರ್ತಕಿಯ ನರ್ತನಶಾಲೆಯಂತೆ ಕಲಕಂಠನ ಸಂಗೀತ ಭವನದಂತೆ ರಾಜಶುಕಂಗಳ ಭೋಜನ ಶಾಲೆಯಂತೆ ಮಧುಪಪಾಂಥಪ್ರಪಾಶಾಲೆಯಂತೆ ರಥಾಂಗಕಾಮುಕರ ರತಿಶಾಲೆ ಯಂತೆ ಮನೋಹರಮಾಗಿರ್ಪುದಂತುಮಲ್ಲದೆಯುಂ

ಕಂ|| ಸುರತರುಯುತನಂದನಮಂ ।
ಸುರತರುಣಿಯರೆಳಸದಿಸಿಯರೊಡನೇಳ್ತರುತುಂ ||
ಸುರತರುಚಿದಾಳ್ದುಘನಭಾ |
ಸುರತರುತಳದಲ್ಲಿ ನೆರೆವರಾವುಪವನದೊಳ್ || ೭೭

ಇಂತೊಪ್ಪುವಾಪುರೋಪವನವನಮಧ್ಯದಲ್ಲಿ

ವೃ|| ನಳಿನಪರಾಗರಂಗಮನೊಡರ್ಚಿ ಪುರಂದರಸಾಭಿಷಿಕ್ತಭೂ |
ತಳದೊಳೆ ಸಾರ್ಚಿ ಚಂಪಕದ ಕುಟ್ಮಳದೀಪಮನೊಕ್ಕ ಪುಷ್ಪಸಂ ||
ಕುಳಮನೆ ಪಾಸಿ ತೋರಣಮನಾಗಿಸೆ ಚಂದಳಿರಿಂದೆಲರ್ಪ್ಪಿಕೀ |
ಕಳರುತಿ ವಾದ್ಯಮಾಗೆ ಭಜಿಪಂ ಸಲೆ ಕುಂತು ಲತಾಂತಲಿಂಗಮಂ || ೭೮

ವ|| ಮತ್ತಮಾವನಂ ವನಧಿಯಂತೆ ವಲ್ಲಕಿಯಂತೆ ವರಪ್ರವಾಳ ಮಂಮಾಡಿ ತಮುಂ ಸುತ್ರಾಮನಂತೆ ಸುಜನನಂತೆ ಸುಮನೋಮನೋಜ್ಞಮುಂ ಕಮಳದಂತೆ ಕಳಹಂಸನಂತೆ ಕಮಳಾಕರಾಭಿರಾಮಮುಂ ಸೀರದಂತೆ ನಿಷಂಗದಂತೆ ನಿಬಿಡಶಿಳೀ ಮುಖಮುಂ ರಾಜಚಿತ್ತದಂತೆ ರಮಣೀಹೃದಯದಂತೆ ರಸಾಲಸಮುದಂಚಿತ ಮುಂ ವಿರಹಿಯಂತೆ ವಿಧಿವಾಹನದಂತೆ ವಿಕಳಧ್ವನಿವಿಳಸಿತಮುಂ ಬಗೆಯಂತೆ ಬಾ ನಂತೆ ಬಹುಲತಾರಾರಾಜಿತಮುಂ ಸಗ್ಗದಂತೆ ಸಮರದಂತೆ ಸಂರಂಭಾನ್ವಿತಮು ಮೆನಿಪಿದುದಂತುಮಲ್ಲದೆ,

ಕಂ|| ಅಲಕಾಳಿರುಚಿರಮಾವನ |
ವಲಯಂ ತಿಲಕೋಪಶೋಭಿ ಸರದಚ್ಛಪಮಂ ||
ಜುಲಮಿಂದುಕಾಂತರುಚಿರೋ |
ಜ್ಜ್ವಲಾಧರಸ್ಥಾನಮಾಸ್ಯಮೆನೆ ನೆಲಸಿರಿಯಾ|| ೭೯

ವೃ|| ಮೊರೆದೆತ್ತಂ ದಾನಧಾರಾಸುರಭಿಗೆರಗುವಿಂದಿಂದಿರಶ್ರೇಣಿಯುಂ ಪೊ |
ಯ್ದು ರಟತ್ಕರ್ಣಾಗ್ರದಿಂದಂ ತಗುಳೆ ಮಗುಳೆ ತತ್ಪುಷ್ಕರಂಗಂಡು ರಕ್ತಾಂ||
ಬುರುಹಂಗೆತ್ತಾದ್ದುರ್ ಸಾತ್ರ್ವಂದೆರಗೆ ಬಿಡಿದುರ್ ದಂತಾಗ್ರಕುಂತಾಗ್ರಕಾಂತಿ
ಸ್ಫುರಣಂ ಕೈಗಣ್ಮೆ ತನ್ನಂದನದೆಡೆಯೊಳ್ ರಾಜಿಪ್ಪುವಾಗಳ್ಗಜಂಗಳ್ || ೮೨

ವ|| ಮತ್ತಮಲ್ಲಿ

ವೃ|| ಕರಿವರಗಂಡಮಂಡಳಗಳಸ್ರದಕರ್ದಮಮಗ್ನಮತ್ತಷ |
ಟ್ಪದಗಣಂ ವಿರಾಜಿಪುದು ತದ್ರದನದ್ಯುತಿಚಂದನಚ್ಛಟಾ ||
ಪರಿಚಿತಂ ಸಿತಂ ಪ್ರಕಟಕುಂಭತಟಸ್ಫುಟಮೌಕ್ತಿಕಸ್ರಜಂ |
ಸುರಿವಮದಾಂಬುಧಾರೆಯೊಡಗೂಡಿ ಕರಂ ಪೊರಪೊಣ್ಮೆ ತೇಜಸಂ || ೮೩

ಕಂ|| ಭಯರಹಿತಜ್ವರಯಸಹಿತ |
ನ್ಸ್ವರಯುವಿಹಿತಹರ್ಯಮನೇರಿ ಬಹುವಿಧಗತಿಯಿಂ ||
ರಯದಿಂ ಪರಿಯಿಪನ್ಯಾಸಾ |
ಳಿಯ ಬಯಲಿಂ ತಳ್ತು ತದ್ವಸಂ ರಂಜಿಸುಗುಂ ||

ವ|| ಇಂತನಂತಜನ ವಿಲೋಚನರಮಣೀಯಮಪ್ಪ ವನವಳಯದಿಂದ
ಮೊಳಗೆ

ವೃ|| ಘನಸತ್ಸೌಧಸನಂತರತ್ನರುಚಿ ಲಾವಣ್ಯಪ್ರಭಾವಸ್ಥಿತಂ |
ವಿನತಾನಂದನವಾಹಸಂಶ್ರಯಸುದಾತ್ತಾಭಂಗವಿಕ್ರಾಂತಸಾ ||
ಜಿನಿ ತಾನೀನರನಾಥನೆನ್ನ ಪೊಳೆಸುತ್ತಂಭೋಧಿ ತಾಂ ಬಂದು ನಂ |
ದನೆಯುತ್ತಲ್ಲಿಯೆ ನಿಂದಪೋಲ್ಪರಿಖೆ ಚೆಲ್ವಂ ಬೀರಿ ಕಣ್ಗೊಪ್ಪುಗುಂ || ೮೪

ಕಂ|| ಮಣಿದೆನೆಗಳ ಮಾಪ್ರ್ವಳವಂ |
ಫಣಿವಸ್ಫುಟಿಗೆತ್ತು ನೋಳ್ಪ ಖೇಚರಿಯರ ಕ ||
ಣ್ಬೊಣಗ*ಳ್ಮಾಪೊರ್ಳೆವಂದಮ ||
ನಣಕಿಪುವಗಳಮುಳಜಳದೊಳಂಬುಚರಂಗಳ್ || ೮೫

ಅಂತಳೆದಿಳೆಯುಂ ಭುಜದೊ |
ಳ್ತಾಂ ತಳೆದಂ ನೃಪತಿಯೆಂದು ವೇಲಾಚಲವೋ ||
ರಂತೈದಿ ನೋಡಿ ಕುತುಕ |
ಸ್ವಾಂತಂ ನಿಂದಂತೆ ಸಾಲವೇಂ ಸೊಗಯಿಸಿತೋ || ೮೫

ಖರಕರತುರಗೋತ್ಕರಖರ |
ತರಖುರಘಟ್ಟನದಿನಾದಕುರುಪೆಸೆ ಮೊರೆಗುಂ ||
ಸುರುಚಿರ ಕೋಟಾಚಕ್ರದ |
ತರವಿಡಿದಿಡಿದೆಸೆವಬಟ್ಟದೆನೆಯೆಡೆಯೆಡೆಗಳ್ || ೮೬

ಘನಕೇತನಪಟದಗ್ರದೊ |
ಳಿನಬಿಂಬಂ ಬಂದು ನಿಂದು ಮಧ್ಯಂದಿನದೊ |
ಳ್ಕನಕಮಯದರ್ಪಣಂ ತಾ |
ನೆನೆ ಪೊಳೆನೃಗದೆಂದೊಡದನದೇಂ ಪಣ್ಣಿಪುದೋ || ೮೭

ಪೋಂದೆನೆಗಳ್ಖರಕರಕರ |
ದಿಂದಂ ಕರಗುಗುಮೆಂದು ಪುರರಾಜಂ ನೀ ||
ರೊಂದಿದಸಿತಪಟತತಿಯುಂ |
ಕುಂದದೆ ಮುಸುಕಿದವೊಲಬ್ಧಜಯುಮಲ್ಲಿಕ್ಕುರ್ಗಂ || ೮೮

ಮತ್ತಂ

ವೃ|| ಆಪುರಭರ್ಮಹರ್ಮ್ಯರುಚಿ ಪೊಂಬಿಸಿಲಂತಿರೆ ರಾತ್ರಿಯೊಳ್ನಪ |
ವಾರ್ಪಗೆಯೊಳ್ವಿರಾಜಿಪರಥಾಂಗಯುಗಂ ಸೆರೆದಿಪ್ಪುರ್ದಂಬುಜ ||
ಶ್ರೀ ಪರಿದತ್ತವೋಸರಿಸಳಲ್ಲಿ ವಿಳಾಸದೆ ನಿಂದು ನಿರ್ಜರ |
ಸ್ತ್ರೀ ಪದೆದೊತ್ತಿ ಮೇಲುದನಭೀಕ್ಷಿಪಳುತ್ಕಜದೊಳ್ನಖಾಂಕಮಂ || ೮೯

ವ|| ಅಂತುಮಲ್ಲದೆಯುಂ

ಕಂ|| ತಳರ್ವೆಳವೆಣ್ಗಳ ನಯನಾಂ |
ಜಳರುಚಿಚಂದ್ರಿಕೆಯನಾಂತು ಪೊಂದು ದಿಗೆಗಳು || (ದೊ)
ಜ್ಜ್ವಳಕಿರಣಮೆಂಬಬಿಸಿಲಂ |
ತಳೆದಲ್ಲಿಯ ಸೋಮಸೂರ್ಯವೀಥಿಗಳೆಸೆಗುಂ || ೯೦

ಲಯಗ್ರಾಹಿವೃತ್ತಂ

ಧೀರಜನರಿಂಶ್ರುತಿವಿಚಾರಪರರಿಂಲಸದುದಾರಗುಣರಿಂದುರಿತದೂರಶಿವಭಕ್ತ್ಯ|
ಚಾರಯುತರಿಂಸಿಗಮಸಾರಮತರಿಂ ಸುಭಗದಾರರತರಿಂಸರಿಕುಮಾರವರಮಾರಾ
ಕಾರಮಹರಿಂ ವಿವಿಧವೀರಭಟರಿಂ ವಿಜಿತಸೂರಪರರಿಂ ತುರಗವಾರಗಜಶಿಕ್ಷಾ |
ಭಾರವಹರಿಂನಿಖಿಳದಾರಧನರಿಂ ಮೆರೆಗುಮಾರುಚಿರಪಟ್ಟಣಮುದಾರಮಣಿ
|ಯುಕ್ತಂ|| ೯೧

ಕಂ|| ಅಧರ್ಮಪತಿಯುಪ್ಪುರದ ಮ|
ಹಾಧರ್ಮಯುತಾಗ್ರ್ಯ ಸುರಗೆ* ಸ್ವೈಪೆತ್ತುದು ತಾಂ ||
ಸಾಧರ್ಮ್ಯಮೆಂದು ಬದಿ ಮಿಗೆ !
ವೈಧರ್ಮ್ಯಮನ್ನುಮತಿಯನವರೊಳ್ಳಿಗಳ್ದಂ || ೯೨

ವೃ|| ಶಿವಸಗಸ್ತ್ರಮುಂ ಪಡೆದು ಪೂಜಿಪ ಶೈವಪುರಾಣಮಂ ಮಹೋ |
ತ್ಸವದಿನೊರಲ್ದು ಕೇಳ್ದು ಶಿವಭಕ್ತಸಮರ್ಚನೆಗೈವ ಸಂತತಂ |
ಶಿವಸದನಂಗಳಂ ರಚಿಪ ಸಾಂತಿಸಾಗಮಪೂಗದರ್ಥಮಂ |
ವಿವರಿಪ ಶೈವಧರ್ಮಪರರಿಂ ಮೆರೆದತ್ತು ಪುರಂ ನಿರಂತರಂ || ೯೩

ವ|| ಆ ನಗರಾಂತರಾಳದಲ್ಲಿ

ವೃ|| ಮನೆಮನೆದಪ್ಪದೊಪ್ಪಿದುದು ವೀಣೆಯ ಮೆಲ್ಲುಲಿ ರಾಜಕೀರನಿಂ |
ಪಿನನುಡಿ ಸಾಸಪಂಜರಮುದಾರಮೃದಂಗರವಂ ಶಿವಸ್ತುತಿ |
ಸ್ವನಮುರುಘಂಟಿಕಾರುತಿಯು ಜೇಯುಜಯಧ್ವನಿ ಸಾಮಗಾನನಿ |
ಸ್ವನಿತಮಶೇಷಶಾಸ್ತ್ರನಿನದಂ ಘನಶಂಖದ ನಾದಮಾವಗಂ || ೯೪

ವ|| ಮತ್ತಮಲ್ಲಿ

ಕಂ॥ ಧನದಂ ಭಿಕ್ಷುಸಖಂಗೆ |
ಕ್ಷಸಿತಂ ಧನಮೀಯದಾದನಾತನಾಮುಂ ಸುಂ |
ಮನೆ ಬಂದುದೆಂದು ನಗುತಂ |
ಧನದಾಪ್ತನನಲ್ಲಿ ಮನ್ನಿಪರ್ಸಧನದರ್ ॥ ೯೫

ಪುಲಿದೊವಲಂ ಗಜದಜಿನಮು |
ನೆಲೆಸೀಸುಡದಿರ್ಬ್ಬನೆಂದು ಬಡಿಸುತೆ ವೃಡಸಂ |
ಸುಲಲಿತದಿವ್ಯಾಂಬರಮುಂ |
ನಲಿದುಡಿಸುವದೂಸಿಗರ್ಕ್ಕರಂ ನೆಲಸಿರ್ಪ್ಪರ್ ॥ ೯೬

ಸುರರೆಲ್ಲಂ ಸುತ್ತಲ್ಕಂ |
ಬರವೊಂದದು ಪಳಿಯುದೆಂದು ಪಳಿದಪನೆಸೆಗುಂ |
ಪುರಜನರೆಲ್ಲಂ ಕೊಳಲಾ |
ಪುರದೊಳ್ಪುಹುಸೂತನಾಂಬರಂಗಳ ಪಸರಂ ॥ ೯೭

ಶರಧಿ ನಿಜಾತ್ಮಜೆಯೆನಿಸುವ |
ಪುರಲಕ್ಷ್ಮಿಗೆ ಕಳಿಪಿದಮಳರತ್ನಪಾತ್ರಂ |
ತರವಿಡಿದೆಸೆದಪುದೆನೆ ಸುಂ |
ದರಮಾದುದು ರತ್ನವಸರದೊಳ್ಮಣಿಪಸರಂ ॥ ೯೮

ವ॥ ಮತ್ತಂ

ಕಂ॥ ಅರಸನ ತೋಳೊಳ್ಸಲೆ ನೆಲ |
ಸಿರುತುಂಮಣಿಗರ್ಭೆ ಪಡೆದಮಣಿಗಣಮದು ತ |
ತ್ಪುರದೆಡೆಯೊಳ್ನೆಲಸಿದುದೆನೆ |
ಸುರುಚಿರನವರತ್ನರಾಶಿ ಪಸರದೊಳೆಸೆಗುಂ ॥ ೯೯

ವೃ॥ ಅಳಿಕುಲ ನೀಲಜೇಲಮದು ಮೌಕ್ತಿಕವೃಂದಮನಾಂತು ಕಣ್ಗದೇಂ |
ತೊಳಗಿದುದೋ ಪಳಚ್ಚನೆಸೆವಂಗಡಿವೀಧಿಯೊಳಲ್ಲಿ ಕೇತನಂ |
ಗಳ ಗಳೆ ತಾಗಿ ತಟ್ಟುಗಿಯೆ ತಾರೆಗಳೊಬ್ಬುಳಿಗೂಡಿ ತದ್ಧರಾ |
ವಳಯದ ಮೇಲೆ ತಾಂ ಪರಿದು ಬಿಳ್ದನಭಸ್ಥಳಖಂಡದಂತೆವೋಲ್ ॥ ೧೦೦

ಕಂ|| ಅನುದಿನಮಿನಘನರುಚಿಯುಂ |
ಜನಿತೋತ್ಸವದಿಂದೆ ಸೇವಿಸಿದವನಜಂಗಳ್ ||
ಜನಪದ ಪುರಸರದೆ ಪಳ |
ಪ್ಪನೆ ಪೊಱೆದಲ್ದರ್ಗಂತೆ ಕಂಚುವಸರಂ ತೋರ್ಕ್ಕುಂ || ೧೦೧

ಗಗನಶ್ರೀ ರವಿಯೊಂದಂ |
ಮಿಗೆ ತಳೆದೊಪೆ ಪುರುಟಸುತ್ತೆ ಪುರದಮ ತಿೞಿದ |
ಕ್ಕಗಜಂಜಿಶತಮನಂದದೆನೆ |
ಸೊಗಯಿಸುದುದು ತೊಳಪಕಂಚುಗಾರರ ಪಸರಂ || ೧೦೨

ವನಿತಾಮಧುರಾಧರದಿಂ |
ವನೆ ಬಯಸಿ ಬೇಕತ್ತ್ರ್ದೆಸಿವಬೆಕ್ಕೆಲೆ ಬಡದೇಂ |
ಸೆನೆಯಿಸಿದುದೊ ತರುಣೀಜನ |
ಘನಪುರಪಾಂಡುಗಂಡಮಂಡಳದಿರವಂ || ೧೦೩

ವೃ|| ಸುರಯಿಸು ದುಂತದಂತ ಪೊಸಮಲ್ಲಿಗೆಯ್ಯರಸಮುನ್ನ ದಾಳಿಜಂ |
ಧುರಸವಮಾಲತೀತ್ರಿಸರವೊಪ್ಪುವಸಂಪಗೆವೂಪನೊಜ್ಜರಂ |
ಸುರಚಿರಕುಂದಬೃಂದದತಿಮಾಸ್ರುಜನೊಂಜವನಬ್ಜಸೂತ್ರದಿಂ |
ವಿರಚಿಸಮಾಲೆಗಾತ್ತ್ರಿಯರ ಮುಂತಣವೊಪ್ಪುಗುಮಲ್ಲಿ ಸಂತತಂ || ೧೦೪

ಪರಿಮಳಸಂಭ್ರಮಭ್ರಮರವಿಭ್ರಮಭೃಷ್ಣಿಜದೃಷ್ಟಿಸೃಷ್ಟಭಾ|
ಸುರಸುಮಮಾಲೆಯಿಂ ಸಮಧು ತದ್ರಜನೊಕ್ಕರೆ ಪದ್ಮಪತ್ರದೊಳ್ ||
ತರುಣಿಪಟಸ್ನಿರೀಕ್ಷಿಸಿ ಕದಂಬಕದಂಬಮಿದೆಂದು ಬಂದು ಸುಂ |
ದರಿಯರ ಮುಂದೆ ಸಿಂದು ಬೆಲೆಯಿತ್ತದನೊಯ್ಯರತೀವರಾಗದಿಂ || ೧೦೫

ಕಂ|| ನೀಲಪಟಾಂಚಿತಕಂಚುಕ |
ಜಾಲಬಾಹಾಲತಾಗ್ರದೊಳ್ಮೆರೆದುದು ಪೂ |
ಮಾಲೆ ವಿಧುಂತುದಮುಖದಿಂ |
ಸಾಲಿಟ್ಟೆಳಿಪಂದುಪಮೃತಕಣಮಂಜರಿಪೊಲ್ || ೧೦೬

ತಾರಗೆಗಳನೋರಂತಿರೆ !
ವಾರಿಜಮುದು ತೆಗೆದು ಕಟ್ಟಿ ಸೆರೆಯೊಪ್ಪಿಸುವಂ |
ತಾರವಿಗೆಸೆದುದು ರಮಣೀ |
ಚಾರುಕರಂ ನೆಗಪಿ ಮಾಲೆಯಂ ಮಲ್ಲಿಗೆಯಾ || ೧೦೭

ವ|| ಇಂತೆಸೆವ ಮಾಲೆಗಾತ್ರಿಯರಂಗಡಿಯ ಮುಂಗಡೆಯಲ್ಲಿ

ವೃ|| ಮೊದಲೊಳ್ಕುಂಕುಮಮಿಟ್ಟು ಮತ್ತೆ ನವಕಸ್ತೂರೀರಜಂಬೊಯ್ದು ಮೇ|
ಣ್ಪೆದುವಂ ಸಾರ್ಚಿ ವರಾಂಗಿ ಗಂಧಮನೊಡರ್ಚಲ್ತೀಯೆ ಕಣ್ಗೊಪ್ಪಿದ |
ತ್ತದು ಚಂದ್ರಾಶ್ಮದ ಸಾಣೆಗಳ್ಕ್ರಮದೆ ಮೂವಣ್ಣಂಗಳಂ ತಾಳ್ದು ತ |
ತ್ಪದತೀಪಾಣಿಪಯೋಜಮರ್ದನಕೆ ಪಕ್ಕಾದಿಂದುವೆಂಬಂತೆವೋಲ್ || ೧೦೮

ವೃ|| ಚಂದ್ರಕಾಂತಶಿಲೆಯಲ್ಲಿ ಸವತ್ರೀಖಂಡಮನಿಟ್ಟು ಕರಾಬ್ಜದಿಂ |
ಚಂದ್ರಿಕಾಲಸದಪಾಂಗೆಯರುದ್ಯತ್ಸೌರಭಸಿಕ್ತಸಿತಾಂಗಿಯರ್ |
ಸಾಂದ್ರಚಂದನದ ಘಟ್ಟಿಗೆ ನೀರಂ ಪಾರಪೆ ಮಾಳ್ಪುದನೀಕ್ಷಿಸು |
ತ್ತಿಂದ್ರನಂದನನ ಪೋಲ್ವಭುಜಂಗಕ್ಕೌತುಕದಿಂ ತಲೆದೂಗುವರ್ || ೧೦೯

ಹಾರಂ ಕುಂತಳಮುಯ್ಯಲಾಡೆ ಜಘನಾಭೋಗಂ ಪಯೋಭೃದ್ದ್ವಯಂ |
ಸಾರಂ ನರ್ತನಮಾಡೆ ಚಿಟ್ಟುಮುರಿಯಂ ಪೆಣ್ಬುಂಜೆಯುಂ ಘ್ರಾಣಸಂ |
ಚಾರಂ ಮಾರುತನಾಡೆ ಪಾಯ್ವಳಿಗಳಿಂ ಕರ್ಣೋತ್ಪಲಂ ವೇಣಿಯುಂ |
ಸೇರುತ್ತುಂತಿರಿಕಲ್ಲನಾಡೆ ತೆಗೆವಶ್ರೀಖಂಡಮಂ ಬಾಲೆಯರ್ || ೧೧೦

ವ|| ಮತ್ತಮಾಸುಗಂಧವಿಪಣಿಯಲ್ಲಿ

ವೃ|| ತುರುಬಿದಯಾಧಿಕಾಕುಸುಮಮಂಜರಿಯೊಳ್ನರುಗಂಪನುಂಡು ಪಾ |
ರ್ದ್ದೆರಗಲೊಡರ್ಚೆ ಮುಂಡಳಿಸಿ ಮಲ್ಲಳಿಗೊಲ್ವಳಿವಿಂಡು ಕಾಮುರ್ಕಗಿಲ್ |
ಗರಿಗಳ ಸಾಲ್ಗಳಿಂ ಸುರಿವತನ್ಮಧು ವೃಷ್ಟಿಯುದಾಗೆ ಗಂಧಮಂ |
ನೆರೆ ತೆಗೆವಚ್ಚ ಜವ್ವನೆಯ ಸೋಮ್ಮುಗಿಡಿ ತಾಂ ನವಿಲಂತೆ ನರ್ತಿಕುಂ || ೧೧೧

ನೃಪಸೇವಾಯಾತಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾ |
ನಪರವ್ಯಾಯಾತಗಂಧದ್ವಿಪಗಣಘನಘಂಟಾಪ್ರಘೋಷಂ ಪಣಸ್ತ್ರೀ |
ವಿಪುಳಾಗಾರಸ್ಥಳೀನಿರ್ಗಮಿತವಿಟವಪುಸ್ಸೌರಭವ್ಯಾಪ್ತಭೃಂಗೀ |
ಚಪಲಧ್ವಾನಂ ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ||೧೧೩

ವ|| ಅದಲ್ಲದೆಯುಂ

ವೃ|| ನಡೆವೆಳವೆಣ್ಗಳುನ್ನತಕುಚಂಗಳ ಕುಂಕುಮರೇಣು ಸೂಸೆ ಸೋ |
ರ್ಮ್ಮುಡಿಯೊಡೆಯಲ್ಲಿ ತಾಳ್ದಮೃಗನಾಭಜಪುಷ್ಪರಜಃಪ್ರತಾನದೊ |
ರ್ಗ್ಗುಡಿಸಿರೆ ಬೀದಿಯಲ್ಲಿ ಬಿದುಪ್ಪೊಳ್ಬಿಡದೊಟ್ಟಿಕೊಳುತ್ತೆ ಗಂಧಮುಂ |
ಪಡೆದೆಡೆಯಾಡುತಿರ್ಪ್ಪಕರಿ ತಾಳ್ದುದು ಗಂಧಗಜಾಭಧಾನಮುಂ || ೧೧೪

ಕಂ|| ಲೋಲಾಕ್ಷಿಯರ್ಕೈದುತ್ತಿರೆ |
ಸಾಲಿಟ್ಟವರಳಕಗಂಧಕೊಡನೈತರುತುಂ |
ರೋಲಂಬಮಾಲೆಮೇಲಿದು |
ನೀಲದ ನಪೆತೋರಣಂ ಜೊಲೆಸೊಪ್ಪಿದುದೋ || ೧೧೫

ಕಿಳಿರ್ವಕ್ಷಂಗಳ ಸಿನದಂ |
ತಳರ್ವಗಜಂಗಳ ಸಿಬಗ್ಧಸಿಗಳ್ಧ್ವನಿ ಕಂ |
ದಳರ್ವಣ್ಣದ ಕೇತನದೊ |
ಳ್ಕಿಳಿರ್ವುರುಘಂಟಾನಿನಾದಮುಳ್ಳಿಡಿದಿರ್ಕ್ಕುಂ || ೧೧೬

ವೃ|| ಪಚ್ಚೆಯತೋರಣಂ ಕನಕದುಯ್ಯಲಪೂರ್ವಸುರೇಂದ್ರರತ್ನದಿಂ |
ದಚ್ಚಿರಿದಿರ್ದ್ದವೇದಿಕೆ ಸುಧಾಕರಕಾಂತದ ಸೆಜ್ಜೆ ಕಾಂತಿಯುಂ |
ಬಿಚ್ಚಳಿಪಚ್ಚಬಜ್ಜರಗದಂ ನವಮೌಕ್ತಿಕಸೌಧಮಾಲೆ ಕ |
ಣ್ಗಚ್ಚರಿಯಾದರನ್ನವಸೆ ರಯ್ಯಮದಲ್ಲಿಯ ಸೂಳೆಗೇರಿಯೊಳ್ || ೧೧೭

ಕಾಮಶಾಸ್ತ್ರಮನೋದುಗುಂ ಗಿಳಿ ಪೇಳ್ಗುಮಂತದರರ್ಥಮುಂ |
ಪ್ರೇಮದಿಂ ಬಳಿಸಾರ್ದ್ದಸಾರಿಕೆ ಬೀಣೆಯುಂ ನೆರೆ ಬಾಜಿಕುಂ|
ಸೋಮರತ್ನಸಜೀವಪುತ್ರಿಕೆ ಪಾಡುಗುಂ ಕಳಕಂಠಿಗಳ್ |
ಕಾಮನುದ್ಗಮಚಾಪನೋಲಗಿಸಿರ್ಪ್ಪನಚ್ಚರಿಯೆಂಬಿನಂ || ೧೧೮

ಲಲಿತತರಗಳೆ|| ಅಲ್ಲಿ ಮಣಿಭವನದೊಳ್ಸಲ್ಲಲಿತಸೌಧದೊಳ್ | ಪೊಸತಪ್ಪಸೆಜ್ಜೆಯೊಳ್ಮಿಸುಪನೆಲೆವನೆಗಳೊಳ್ |ಪನ್ನೀರ್ಗಳಂ ಮಿಂದು ಚೆನ್ನೆಸೆಯಲ್ಪೈತಂದು| ಬಿಳಿಯಸವುರಮನುಟ್ಟುಪೊಳೆವಂದುಗೆಯನಿಟ್ಟು | ಮುಂಜುತುಂಸಡಗರಿಸಿ ಕಾಂಚಿಯನಲಂಕರಿಸಿ | ಘುಸೃಣರಸದಣ್ಪಿಟ್ಟುಮಿನುಪಿರವಕೆಯತೊಟ್ಟು | ತೊಳತೊಳಪಕೋರವಾಣಿಕದವಾಲೆಯನಾಂತು | ತಳತಳಿಪ ಪಂಚರತ್ನದ ಪದಕಮುಮನಾಂತು | ಭುಜಮಕುಳಿಕೆಯ ಬಾಹುಪೂರಕಟಕಂಗಳಂ | ನಿಜರುಚಿಯನುಗುಳ್ವನವರತ್ನದುಂಗುರಗಳಂ | ತಳೆದಾಣಿಮುತ್ತುಗಳ ಪತ್ತುಸರಮಂ ಧರಿಸಿ | ಕನೆವೆತ್ತಪೊಸರತ್ನದೋಲೆಯನಲಂಕರಿಸಿ| ತೋರೆಮುತ್ತಿನ ಮೂಕುತಿಯನಾಂತು ಕಂಪೆಸೆವ | ಸಾರಮೃಗಮದದ ತಿಲಕಮನಾಂತು ನುಣ್ಪೆಸೆವ | ತೆಳ್ಪದಂಪಿಂಗೆ ಮಕರಿಕೆಯನಂದಂಗೊಳಿಸಿ | ಯೊಳ್ಪುರುಳ್ಪ* ಮುತ್ತಿನಬಲೆಯನೊಲ್ಪು ಕೈಗೊಳಿಸಿ | ಮಾಲತಿಯ ಮಾಲೆಯಂ ನಿಡುಜಡೆಯೊಳಳವಡಿಸಿ | ಲೀಲೆಯಿಂ ಕರ್ಣದೊಳ್ಕರ್ಣಪೂರಮನಿರಿಸಿ | ಕಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಕರೆಯುತಿರೆ| ಕುಡುವುರ್ಬ್ಬು ಕುಡುವಿಲ್ಲಚೆಲ್ವ್ಸೈಗರೆಯುತಿರೆ| ಕೆಂಬಲ್ಲನುಣ್ಬೆಳಗು ದೆಸೆದೆಸೆಗೆ ಪಸರಿಸಿರೆ | ಬಿಂಬಾಧರದ ಕಾಂತಿ ಕೆಂಬರಲಿಸಿಳಿಪುತಿರೆ| ತೊಡವೆಳಗು ತಳತಳಿಸೆ ನಿಡುಮುಡಿಯ ನಳಿ ಬಳಸೆ | ಮುಖರಸಂ ತುಳ್ಕುತಿರೆ ನಟಿಪ ರುಚಿ ಸಿಕ್ಕುತಿರೆ | ನಡೆಗಂಜೆ ತೊಡರುತಿರೆ ನುಡಿಗೆ ಗಿಳಿಯೊಡನೆ ಬರೆ | ಮೊಲೆ ಮೇಲುದೊತ್ತರಿಸೆ ಸಲೆ ಪೆಲ್ಪು ಬತ್ತರಿಸೆ| ಘನನಿತಂಬಂ ಜಡಿಯೆ ತನುಮಧ್ಯಮದು ನೆಡೆಯೆ | ನೋಡೆ ನಡೆಗೆಡಿಸುತುಂ ಕೂಡೆ ಕೆಳೆಗೊಳಿಸುತುಂ | ಬೇಟಮಂ ನೆಚ್ಚಿರ್ಸುತೆ ಕೂಟಮಂಮಚ್ಚಿರ್ಸುತೆ| ಕಳಗಳದ ಕಳರವದ ಜಳದಳಕಮಿಳದಳಿಕ | ದೆಳನಗೆಯ ಕಳೆಯಗೆಯ ಸರಸಿಜದ ಸಿರಿವೊಗದ | ಗುರುಕುಚದ ವರಕಚದ ಚದುರಿಡಿದ ಮೃದುವಡೆದ | ಸವಿನುಡಿಯ ತಳಿರಡಿಯ| ಪುರವಾರನಾರಿಯರ್ಪರಮಸುಕುಮಾರಿಯರ್| ಸುರತರಣಧೀರೆಯನ್ಸರಸಗುಣಸಾರೆಯರ್| ಪೊಸಪೇಸಿನೆತ್ತು ಸಂತತಮಿಂತು ರಾಜಿಸರ್ಕುಸುಮಶರನಂ ರತಿಯನನುದಿನಂ ಪೂಜಿಸರ್ ||

ವೃ|| ಆವಾರಾಂಗನೆಯಕ್ಕರ್ಳಾಸ್ಯಕಮಳಂ ಮಂದಸ್ಮಿತಜ್ಯೋತ್ಸ್ನೆಯಿಂ |
ತೀವಿರ್ದ್ದಂ ನಯನೋತ್ಪಳಂ ಕನಕತಾಟಂಕಾರ್ಕಬಿಂಬಪ್ರಭಾ |
ಶ್ರೀವಿನ್ಯಾಸಕವಾಗಿಯುಂ ಮುಗಿದುವಿಲ್ಲೇಕೆಂಬೊಡೀತಾಣದೊ |
ಳ್ಕಾವಂ ಕಿತ್ತಡಿಯಿರ್ಪ್ಪನಾತನ ಮಹತ್ತ್ವಂ ತಾನಿದೆಂಬರ್ಬ್ಬುಧರ್ || ೧೧೮

ಕೆಂಬವಳಂಬೊಲೊಪ್ಪುವರುಣಾಧರಮಂ ಗಿಳಿ ಬಿಂಬವೆಂದು ತಾಂ |
ಚುಂಬಿಸಲಾಟಿಸುತ್ತಿರೆ ಕರಾಗ್ರದೊಳೊಯ್ಯನೆ ನೋಡಿ ತಮ್ಮ ಬಾ |
ಯ್ದಂಬುಲಮಿಕ್ಕೆ ವಾರವಧುಗಳ್ವಿದಾಸ್ಯವೆ ಕೆಂಪನಾಂತುದ |
ಲ್ಲೆಂಬೊಡಗೆಂತು ಸಾರ್ದ್ದುದೊ ತದಂಚಿತಚಂಚುಗೆ ಕೆಂಬರಲ್ಗವರ್ ||೧೧೯

ಮತ್ತಂ|| ಉದಯಂಬೆತ್ತೊಪ್ಪುವರ್ಕಂ ಘನರುಚಿಕಲಶಂ ಕಾಂಚನೋದಂಚಿತಂಪ|
ಬ್ಬದಸಂಧ್ಯಾರಾಗನೊಪ್ಪಂಬಡೆದೆಸೆವಮಹಾಪದ್ಮರಾಗಾಂಶು ತಾನಾ |
ಗೆ ದಟಂ ಪೂರ್ವಾದ್ರಿಯೆಂಬಂತೆಸೆಗುಮವಿರತಂ ಭೂಮಿಕಾಧಾರಕಂ ಕಾಂ |
ತಿದನಪ್ರಾಪ್ತಾಯುಸಪ್ರಸ್ಫುರಿತಮುಮದುರ್ಗ್ಗಾಣಿಕ್ಯಮಾಣಿಕ್ಯಹರ್ಮ್ಯಂ|| ೧೨೦

ವ|| ಅಂತೆಸೆವಸುನಿರ್ಮ್ಮಿತಶರ್ಮ್ಮಭರ್ಮ್ಮಹರ್ಮ್ಯದೊಳೊಸ್ಮರ್ಯಿಂ ಪೆಸ್ಮರ್ವೆತ್ತು

ಕಂ|| ಪದಪದಮುರ್ದಿರೆ ಸುಧಾಸಾ |
ರದ ರದನಚ್ಛದದ ರದದ ರುಚಿ ಬೆರಸೆ ಲಸ |
ನ್ಮದಮದನಾಗಮಮಂ ತ |
ಪ್ಪದೆ ಪಡೆದುಪದೇಶಿಪರ್ಪ್ಪದಗ್ಧೆಯರದರೊಳ್ || ೧೨೧

ಮತ್ತಂ|| ನೆಲೆವಾಡದ ನೆಲೆನೆಲೆಯೊ |
ಳ್ನಲಿನೊಲೆಯೊಳ್ತಳೆದು ವೀಣೆಯಂ ಬಾಜಿಸುತುಂ |
ನೆಲೆಗೊಂಡಿರ್ಪ್ಪುದು ಸತತಂ |
ನೆಲೆಯಾವಲಿತಾಂಗದಂಗನಾಜನಮಾಗಳ್ || ೧೨೨

ವೃ|| ಇದು ಚಿತ್ರಂ ಬಾಳೆಮೀಸ್ಮಿಂಚನೆ ಕರೆದಪುದಂಭೋರುಹಂ ಚಂದ್ರಿಕಾಸಂ|
ಪದಮಂ ಬೀರುತ್ತುಮಿಲ್ಲಿರ್ದ್ದಪುದು ಮಧುಕರಶ್ರೇಣಿ ತಾರಾಳಿಯಂ ತಾ|
ಳ್ದುದು ಚಾಂಪೇಯಪ್ರಸೂನಂ ವಿಚಕಿಲಮುಕುಳಂಬೆತ್ತುದೆಂದಲ್ಲಿ ಹರ್ಮ್ಯ |
ಗ್ರದವಾರಸ್ತ್ರೀಯರಂ ಶಂಕಿಪರವಯವಮಂ ನೋಡಿದಭ್ರಾಂತಿಯಿಂದಂ|೧೨೩

ವ|| ಅಂತುಮಲ್ಲದೆಯುಂ

ವೃ|| ಪುರಸೌಧಾಗ್ರಸ್ಥಿತಾತ್ಮೇಶ್ವರವಿರಹಶಿಖಾವಹ್ನಿಖಾತಪ್ತಕಾಂತಾ |
ಕರಕಂಜಾತಾಸಿತಾಂಭೋರುಹನಿಹತತದುದ್ಯದ್ದ್ವಿಜಃಪುಂಜಮುಂಬು ||
ಸ್ಫುರದಂಕಾಂಕಂ ಮೃಗಾಂಕಂತದಧಿಕಮುಖರುಕ್ತಸ್ಕರಂ ಪೂರ್ಣಸಪ್ಪಂ|
ವರಯುಕ್ತದ್ಯೋಷಿದಾಸ್ಯಾವೃತಸಕಲಕಲಂಸಕ್ರಮುಂಕುಂದುತಿರ್ಪ್ಪಂ|| ೧೨೪

ವ|| ಮತ್ತಮಾಪುಟಭೇದನಸ್ಫುಟಪ್ರದೇಶದಲ್ಲಿ

ವೃ|| ವರವೇದಂವಾದ್ಯನಾದಂ ಸರೆದಿರೆ ಕುಸುಮಾಮೋದಮಾಹ್ಲಾದವಾದಂ|
ನರವಾರಂ ನರ್ತಕೀರಂಜಿತನಟನಮುದಾರಾಂಗನಾಗೀತಸಾರಂ |
ಸ್ಫುರದತ್ಯಂತಾಂಶುತತ್ಸ್ವಸ್ತಿತನವಮಣಿಭಿತ್ತ್ಯಂಚಿತಂ ದೇವಸುತ್ಯಂ |
ಸುರಕಾಂತಂತನ್ನಿಶಾಂತಂಕರಮೆಸೆಗುಮನಂತಪ್ರದೀಪಾಳ್ಯುಪಾಂತಂ೧೨೫

ವ|| ಮತ್ತಂ

ವೃ|| ತುಂಗಮೃದಂಗಮಂಗಳರವಂ ಕಹಳಾಧ್ವನಿ ತಾಳಸಿಸ್ವನಂ |
ರಂಗದಪಾಂಗಸಂಗತನಟೀನವನರ್ತನ ಮಾಗಮಪ್ರಘೋ ||
ಷಂಗಳಭಂಗಶಂಖನಿನದಂ ಜನದಂಬಡೆದಿರ್ದ್ದಭಕ್ತಲೋ |
ಕಂಗಳ ಕಂಗಳಂಗವಿಸ ಸಂಗಳಿಸಿರ್ಪ್ಪವು ಲಿಂಗಗೇಹದೊಳ್ || ೧೨೬

ಕಂ|| ಆಲಿಂಗಾಲಯಶಿಖರ|
ಸ್ಥೂಲೋನ್ನತಕನಕಕಳಶಮದು ಗಗನಶ್ರೀ ||
ಪಾಲಂಗೀವುದು ಕಾನಕ |
ಚೇಲದ ಚೆಲ್ವಂ ನಿರಂತರಂ ನಿಜರುಚಿಯಿಂ || ೧೨೭

ಮೃಡಸೇವೆಗೆ ಬಿಡುಗಣ್ಣಾ |
ನ್ನಡೆತರಲೆಂದಜನೊಡರ್ಚ್ಚಿ ನಿಚ್ಚಣಿಗೆಯನಿ ||
ರ್ಕ್ಕಡೆಯಿಟ್ಟನೆಂಬಪೆಂಪಂ |
ಬಡೆದಂಬರಚುಂಬಿ ಗೋಪುರಂ ಕರಮೆಸೆಗುಂ || ೧೨೮

ಅಮರಾಪಗೆಯೊಳ್ಮಿಂದಂ |
ದಮರಿಯರಾಗೋಪುರಾಗ್ರದೊಳ್ನಿಂದದರ ||
ಗ್ರಿಮಕನಕಕಲಶರುಚಿಯನ |
ಹಿಮಕರಕರಮೆಂದು ಕೇಶಮಂ ಪಸರಿಸುವರ್ || ೧೨೯

ಹರಗೃಹದಿಂ ನೆಗೆದು ನಭೋಂ |
ತರಕ್ಕೆಯ್ದುವ ಧೂಪಧೂಮದಾಮೋದಕ್ಕಂ ||
ಬರಲಕ್ಷ್ಮಿ ಸಿಜಶಿರೋಜೋ |
ತ್ಕರಮಂ ಬಿಚ್ಚಿದವೊಲಬ್ಬಮಗ್ರಗೊಳಿಸೆಗುಂ || ೧೩೦

ಅಲ್ಲಿ ಧರಾಸುರವಿಸರಂ |
ಮೆಲ್ಲನೆವಾಳ್ವತುಳಹೋಮಧೂಮಂ ಪುಗೆ ಕ ||
ಣ್ಣಲ್ಲಿ ಸಲೆ ಮೇಲೆ ನಡೆಯ |
ಲ್ಸಲ್ಲದೆ ರವಿ ದಕ್ಷಿಣೋತ್ತರಾಯಣನೆನಿಪಂ || ೧೩೧

ವ|| ಇಂತನಂತವಿಭವ ಸನಾಥಮಾಗಿ ಪೆರ್ಮೆವೆತ್ತಾ ಪುರಮಧ್ಯದಲ್ಲಿ

ವೃ|| ಕನಕಕವಾಟಕೋಟಿಘಟಿತಸ್ಫುಟರತ್ನಮರೀಚಿವೀಚಿ ಜಂ|
ದನಘನಸಾರಸೌರಭಸಮಾವೃತಭೃಂಗರಮಾಧಿವಾಸವಾ ||
ಸನಳಿನಮಿಂದುಕಾಂತಗೃಹಕಾಂತಿಜಳಂ ಲಲನಾಕ್ಷಿ ಕೈರವಂ |
ಘನತರ.ರಾಜಹಂಸನಿರೆ ರಾಜಗೃಹಂ ಕೊಳದಂತೆ ರಂಜಿಕುಂ || ೧೩೨

ವ|| ಅಂತೊಪ್ಪುವಂತಃಪುರದ ವಜ್ರಮಯಬಹಿಃ ಪ್ರಾಕಾರದಂತರಾಳದೊಳಗೆ

ಕಂ|| ಮರಕತರತ್ನದ ಪೊಸಮಂ |
ದುರದೊಳ್ಬಯರಾಜಿ ಮೆರೆದುದದರುದ್ಭ್ರಚಿತ||
ಕ್ಷ್ತಿತೆ ತತ್ರ ತಾಪಮುದುಭಾ |
ಸ್ಕರಾಶ್ವವೃಂದಮನೆ ತಂದು ಸೆರೆಯಿಕ್ಕಿದವೋಲ್ || ೧೩೩

ತಾರಾಜಲಘನಗುಹೆಯೊಳ |
ಗ್ಯೈರಾವತಮುರ್ಸ್ಫೂರ್ತೆರದೆ ಶಶಿಮಣಿಸೌಧಾ ||
ಗಾರದೆ ತದ್ರುಚಿಧವಳಾ |
ಕಾರಾಸ್ಥಿತಭದ್ರಗಜಮದೇನೊಪ್ಪಿದುದೋ || ೧೩೪
ತೊಳಸಸಿಜರುಚಿಸುಧೆಗೆ ಬಗೆ |
ಯೆಳಸಿ ಕರಂ ಸಿಂದಭೀಕರಾಹಿಗಳನಿದೇಂ ||
ತಳೆದುದೊ ಪೇಳೆನೆ ಶಸ್ತ್ರಾ |
ವಳಿಯಂ ತಳೆದಮಳಶಸ್ತ್ರಶಾಲೆಯದೆಸೆಗುಂ || ೧೩೫

|| ಅಲ್ಲದೆಯುಂ ||

ವೃ|| ವರಕರ್ಪೂರಪರಾಗರಂಗಮುರುಕಸ್ತೂರೀಪ್ರಲಿಪ್ತಂ ಸುಮೋ |
ತ್ಕರಮಾಲಾಕಲಿತಂ ಪ್ರದಿ ಪಪಟು ಧೂಪಾಮೋದಿ ಚಿತ್ರಾಂಬರಾ ||
ವರಣಂ ರತ್ನವಿತಾನರಂಜಿತಮುದಂಚತ್ಪಂಚವಾದ್ಯಂ ಸುಧಾ |
ಕರಕಾಂತೋಪಳನಿರ್ಮಿತಂ ಗಿರಿಶಪೂಜಾಮಂದಿರಂ ರಂಜಿಕುಂ || ೧೩೬

ವ|| ಮತ್ತಮಂತಃಪುರಮೆಂಬಸರೋವರದ ಸಿರಿಯ ಕರುಮಾಡಂಗಳಂತೆ ಸೆವಕರುಮಾಡಂಗಳುಂ ಕರುಮಾಡಂಗಳ ಸೊದೆವೆಳಗಂ ಸೊದೆಗೆತ್ತು ಸಾರೆವ ಪ್ರ್ರದೀಪದಂಡಿಗಳುಂ ದೀಪದಂಡಿಗಳ್ಗೆ ಕಾಮ್ಮುಗಿಲೆಂಬಶಂಕೆಗೊಟ್ಟದಿಚ್ಛೆ ವಿಂದ್ರನೀಲನಿಳಯಂಗಳು ಮಿಂದ್ರನೀಲನಿಲಯಂಗಳ ಕರ್ಬೊಳಪಂ ಕಳ್ತಲೆಗೆ ತ್ತಗಲ್ಪಗೃಹಸರೋವರಚಕ್ರಂಗಳುಂ ಗೃಹಸರೋವರಚಕ್ರಂಗಳ್ಗೆ ಪಾಸೆಯಂ ಬಾಸೆಗುಡುವಬಾಸೆದಳೆದು ನೀಮ್ಮುಗಳುಗುವನಿತಂಬನಿಯರುಂ ನೀಮ್ಮುಗಳುಗುವನಿತಂಬಿನಿಯರ ನಿಡುಜಡೆಯಂ ಜಳೋರಗಮೆಂದು ತಡಿವಿಡಿದು ನೋಳ್ಪನೃಪಕುಮಾರಿಯರುಂ ನೃಪಕುಮಾರಿಯರ ಕಟಾಕ್ಷರುಚಿಯಂ ವಿಚಕಿಲಮಾಲೆಯೆಂದೆರಗಲ್ಪಳಿಪಮದಮಧುಪಂಗಳುಂ ಮದಮಧುಪಂಗಳ್ಗೆ ಪುಷ್ಕರಭ್ರಾಂತಿಗುಡುವಪುಷ್ಕರದಿಂಮೆರೆವಮದಕಳಭಂಗಳುಮಾಮದಕಲಭಂಗಳಂ ಮೇಚಕಾಜಲಮೆಂದಾರೋಪಿಪಲೀಲಾಮಯೂರಂಗಳುಂ ಲೀಲಾಮಯೂರಂಗಳ್ಗೆ ಪೊಸಮಿಂ

ಜಂ ಪಸರಿಪಮಿಸುನಿವಸೆಗಳುಂ ಮಿಸುನಿವಸೆಗಳ ಮಿಸುಪ ಕಾಂತಿಯಂತೆ ಬಿಸಿಲೆಂದು ಪೆರದೆಗೆವಚಪಳಚಕೋರಂಗಳುಂ ಚಪಳಚಕೋರಂಗಳ್ಗೆ ಚಂದ್ರಿಕೆಯಂ ಪರಪುವ ಚಂದ್ರಮಣಿಕುಟ್ಟಿಮಂಗಳುಂ ಚಂದ್ರಮಣಿಕುಟ್ಟಿಮಂಗಳಂ ತಳಿಗೊಳಂಗಳೆಂದಡಿಯಿಡಲಂಜಿ ಪೆತಂಮೆಟ್ಟಿಪಕೆಯುನೆಂಟರುಂ ಕಿರುವೆಂಡಿರಲತಗೆಯಡಿವಜ್ಜೆಯುಂ ಕಂಡು ನಾಂದಳಿರೆಂದು ಕರ್ದುಂಕುವಕೇಳಿಕಳಕಂಠಗಳುಂ ಕೇಳಿಕಳಕಂಠಗಳಂ ಪುರುಳಿಗಳೆಸಿಸಿಪಾಳ್ಪಪಸುರ್ವರಲಪಂಜರಂಗಳುಂ ಪಸುರ್ವರಲ ಪಂಜರಂಗಳೊಳ್ಗಾಪ್ಪೊಳೆಪಳಜತುಂಡ ಪ್ರತಿಬಿಂಬಮುಂ ಬಿಂಬಫಳಂಗೆತ್ತು ತುಡುಂಕುವ ತಾಮ್ರತುಂಡಂಗಳುಂ ಸಂಗಳಿಸಿ ಮಂಗಳಮುಂ ಕಂಗೊಳಿಸಿದುರ್ವಂತುಮಲ್ಲದೆ ||

ವೃ|| ರಮಣೀಕಂಕಣಕಿಂಕಿಣೀಕ್ವಣಿತಮಂದಾನ್ದೋಳಿಕಾರಂ ಭೋರುಹ |
ಭ್ರಮಿತಾಂಸೋಂಜಮನಸ್ಕ ಗಂಧ ಮಧುಪಝುಂಕಾರಂ ಮಂದಬಾಧಾ |
ಸಮುದಂಚತ್ಸ್ವರಶಾರಿಕಾಶುಕರವಂ ಕೂಜತ್ಪಿಕಾಳಾವಳೀ |
ಕ್ರಮಸಂಪಾದಿತಸಾಧುನಾದವಹವೀಣಾರಾವಮುದ್ಯದ್ದೃಗಂ || ೧೩೭
ಕರುಮಾಡಂ ಕಣ್ಗೆವಂದತ್ತುವೃತಕರವಿಲಾಸಿನೀಹಸ್ತಂ ಭರ್ಮಬದ್ಧ |
ಸ್ಫುರದುದ್ಯತ್ಪದ್ಮರಾಗಾಂಚಿತಕಲಶಮನಗಾಗ್ರಸ್ಥಿತಸ್ವರ್ಣಕಂಠಾ |
ವರಣಂ ವೈಡೂರ್ಯವೇದೀವಿದಿತಮುರುಹರಿತ್ಕುಟ್ಟಿಮಂ ವಜ್ರಕುಡ್ಯಂ |
ಹರಿನೀಲಸ್ತಂಭಮುದ್ಯದ್ವಿದ್ರುಮಲಸದರರಂ ಮೌಕ್ತಿಕದ್ವಾರಬಂಧಂ || ೧೩೮

ಕಂ|| ಸೊಡೆವೆಳಗಂ ಸುಧೆಗೆತ್ತಾ |
ಬಿದಿಯ ಮರಾಳಂ ಸರಾಗಮುರುತರಸೌಧಾ |
ಗ್ರದೆಸಿಂದುದೆಂಬಭಾವಮ |
ನೊದವಿಪುದಿರುಳದರ ತುದಿಗೆ ಬಂದಮೃಗಾಂಕಂ || ೧೩೯
ಅದರಗ್ರದಲ್ಲಿ ಪಾಡುವ |
ಸುದತೀಗೀತಮನೆ ಕೇಳ್ದು ಸುರಪಶು ಸುರಿದ |
ಗ್ಗದಪಾಲ್ಸರಿ ಪಸರಿಸಿತೆನೆ |
ಬಿದುಗದಿರ್ಗಳನಿಳಿಪಸೊದೆಯದೇಂಸೊಗಯಿಸಿತೋ || ೧೪೦
ಅಮರಿಯರಾನೃಪಹರ್ಮ್ಯಾ |
ಗ್ರಮಹಾಧ್ವಜಪಟದ ಮರೆಯೊಳಡಗಿರೆ ಬಿನದ |
ಕ್ಕಮರರಸವಸದೆ ತನ್ಮಕುರ |
ರಮನವರ ಕಪೋಲಮೆಂದು ಚುಂಬಿಸುತಿರ್ಪರ್ || ೧೪೧

ವೃ|| ಕುಂಡೆಗಣ್ಣಿಂ ಕಾವನಂ ಬಂಕರೆಯುತೆ ಕುಡುವುವ್ವಿಂದೆಚ್ಚರ್ತ್ತಿಮಗ್ಗೆ|
ಯೆಡೆಯೊಳ್ಕ್ಕಳ್ದಿರ್ದ್ದ ಕೀರಂನುಡಿದನುಡಿಯನಾಕರ್ಣ್ಣಿಸುತ್ತೊನ್ಮ್ರ ಕೈಯೊಳ್
ಪಿಡಿದಂಭೋಜಾತದಿಂ ಸುಯ್ಗ್ಗರವಳಿಗಳಸೋವುತ್ತೆ ಮಂದಸ್ಮಿತಂ ಮುಂ |
ದಿಡೆ ಜಂಜಜ್ಯೋತ್ಸ್ನೆಯಂ ಸೌಧದೊಳೆಸೆವುದಳುಂಬಂ ನೃಪಸ್ತ್ರೀಕದಂಬಂ ||

ಮತ್ತಂ|| ಹಿಮಷಂಡಂ ಫೇನಖಂಡಂ ತುರಗತತಿ ತರಂಗಾಳಿ ಪೇರಾಸೆ ನೀರಾ|
ನೆ ಮಹಾಹರ್ಮ್ಯಾಳಿ ಭೀತಾಚಲಮಭವಗೃಹಂ ಭೈತ್ರಮುತ್ಕೇತು ತತ್ಕೇ |
ತುಮಣಿವ್ರಾತಂ ತದುದ್ಯನ್ಮಣಿಗಣಮುರುಸೌಧಾಂಶು ದುಗ್ಧಂ ಧರಿತ್ರೀ |
ರಮಣಾಗಾರಂ ಮಣಿದ್ವೀಪಮಿದೆನೆ ಪುರಿ ರತ್ನಾಕರಂಬೋಲ್ಮನೋಜ್ಞಂ|| ೧೪೩

ಕಂ|| ಆನಗರಿಯೊಳೆಸೆದಿರ್ಪ್ಪಂ |
ಶ್ರೀನಾಯಕವಿಭವನಭವಪದಭಕ್ತನಿಳಾ |
ಮಾನಿನಿಯರಸಂ ಸರಸಂ |
ಭೂನುತಸತ್ಯೇಂದ್ರಚೋಳರಾಜಾಹ್ವಯದಿಂ || ೧೪೪

ವ್ಯಾಪಸ್ತ್ರೀಮುಖಸುರವಧೂವಕ್ತ್ರಪದ್ಮಪ್ರಭಾಂಭ |
ಸ್ಸ್ನಾನೋನ್ಮೀಲತ್ಪದಕಮಳೆ ಕಲ್ಯಾಣಿ ಕಲ್ಯಾಣಶೈಲಾ |
ಸೂನಾಸ್ಥಾನಾಶ್ರಿತಸಿತಗಳಾಂಕಸ್ಥಳಾರೂಢೆ ಗೌರೀ |
ನೀನೆಮ್ಮಂ ರಕ್ಷಿಪುದು ಸತತಂ ಸತ್ಯವಾಣೀ ಮೃಡಾನೀ || ೧೪೫

ಗದ್ಯ|| ಇದು ಪಿನಮದಮರನರಮಕುಟತಟಘಟಿತ ಮಣಿಗಣಮಹಾ
ಪ್ರಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿ
ರುಂದ್ರಚಂದ್ರಿಕಾಜಂಚಜ್ಚಕೋರಾಯಮಾನ ಸರಸಜನ
ಮಾನಿತ ಶ್ರೀಮದುಭಯಕವಿತಾವಿಶಾರದ ಶ್ರೀಷಡ
ಕ್ಷರ ದೇವವಿರಚಿತಮಪ್ಪ ರಾಜಶೇಖರವಿ
ಳಾಸವಿಪುಳಪ್ರಬಂಧದೊಳ್ದ್ರಾವಿ
ಡದೇಶಾದಿವರ್ಣನಂ.

ದ್ವಿತೀಯಾಶ್ವಾಸಂ
ಸಂಪೂರ್ಣಂ.

# ತೃತೀಯಾಶ್ವಾಸಂ.

ಕಂ|| ಶ್ರೀತುಹಿನಗಿರಿಸುತಾಕರ |
ಜಾತಕ್ಷತಕಲಿತಕಂಧರಂ ನಿಜರುಚಿನಿ ||
ರ್ಧೂತಯುಷ್ಮದ್ಧೃದಯತಮಸಂ |
ಪ್ರೀತಿಯೊಳೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವೃ|| ಹರಚರಣಾರವಿಂದಮಕರಂದಮಧುವ್ರತನೀಶಭಕ್ತಿಭ |
ಕ್ತಿರಸಸುಧಾಬ್ಧಿಸೋಮನಭಿರಾಮುವಿಸ್ತುತಿಪೂರ್ಣಕರ್ಣನೀ ||
ಶ್ವರಯುಜನಾನುರಕ್ತನಭಿಯುಕ್ತಗುರೂಕ್ತಮತಾನುವರ್ತಿ ಶಂ |
ಕರಪರಮಂತ್ರತಂತ್ರನಿಪುಣಾಗ್ರಣಿ ಭೂವರಪಾರಶೀಲರಂ || ೨

ಅಕಳಂಕಾನನನಿಂದುವಂ ಗೆಲೆ ಧರಾಭಾರಾವಹಂ ಬಾಹುದಿ |
ಕ್ಕರಿಶ್ರೀಕರಮಂ ಕರಂ ಜಯಿಯೆ ಕಂಜದ್ರಶ್ಮಿವಿಸ್ಮೇರದೃ ||
ಷ್ಟಿಕಳಾಪೇಕ್ಷಣಮುಬ್ಬಮಂ ಪಳಿಯೆ ಸೌಂದರ್ಯಾಂಗನೀಶಾಂಘ್ರಿಸೇ |
ವಕನಾದರ್ಪಕನಂ ತಿರಸ್ಕರಿಸಿದಂ ಶ್ರೀಚೋಳಭೂಪಾಲಕಂ || ೩

ಕುಳಭೂಭೃತ್ಪರಿಪಂಥಿ ಪಾಪಕಮುಖಂ ಪಾಕಾಪಹಂ ಧ್ವಸ್ತದು |
ರ್ಗಳನುದ್ವೀತಕುಳೀನವೃತ್ತಿ ಸತತಂ ಸಂಕ್ರಂದನಂ ಸದ್ಗುಣೋ ||
ಜ್ಜ್ವಳಸತ್ಯೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದನಾ |
ಇಳೆಯಾಗಳ್ಗಡ ನಿದ್ರೆಗೈದಪನೆ ಪಕ್ಷಸ್ಪಂದಮಂ ಮಾಳ್ಪನೇ || ೪

ವ|| ಅಂತುಮಲ್ಲದೆ,

ವೃ|| ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನೈದೆ ಬಿಚ್ಚಿ ವಿ |
ಸ್ಫುರಿತತದುತ್ಪ್ರತಾಪತಪನಾತಪದಾರಿಸಿ ಸೂಡಿ ತಾರಕೋ ||
ತ್ಕರಕುಸುಮಂಗಳಂ ತಳೆದು ಚಂದ್ರಿಕೆಯೆಂಬ ವಿಶಾಲಚೇಲಮಂ |
ಗರಣೆಪಕೀರ್ತಿಕಾಂತೆ ವಿಧುದರ್ಪಣಮಂ ನೆರೆ ನಿಂದು ನಿಟ್ಟಿಪಳ್ || ೫

ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜಪತ್ರಪ್ರಭಂ |
ರದನಂ ವಜ್ರಸಮಂ ಪ್ರವಾಳಸದೃಶಂ ದಂತಚ್ಛದಂ ಮಂಗಳಾ ||
ಸ್ಪದನಾಸಾಮುಕುಳಂ ಸುಚಂಪಕಸುಮಪ್ರಖ್ಯಂ ಗಳಂ ಶಂಖಸಂ |
ಪದಮುದ್ಯದಬ್ಜಯುಗ್ಮಮೀ ಭುಜಗರಾಜಸ್ಪರ್ಧಿ ಭೂಪಾಳನಾ ||

ರೂಪದು ಪುಷ್ಪಚಾಪನನುದಗ್ರಯಶಂ ಸಸಿಯಂ ಸುಭಾಗ್ಯನಾ |
ಶ್ರೀಪತಿಯಂ ಪ್ರತಾಪಮಿನನಂ ಘನಧೈರ್ಯಗುಣಂ ಧರಾಧ್ರಮಂ ||
ಕೋಪಮುದಗ್ನಿಯಂ ಸುರತರಂಗಿಣಿಯಂ ದಯೆ ಗೆಲ್ದು ತೋರದಾ |
ಭೂಪನ ಖಡ್ಗಮೊಂದೆ ಸಲೆ ಗೆಲ್ದುದೆ ವೈರಿನರಾಧನಾಥರಾ || ೭

ತ್ವರಿತಗತಿಪ್ರಯುಕ್ತತುರಗೋತ್ಕರಸತ್ಖುರಘಟ್ಟನೋತ್ಥಿತೋ |
ದ್ಧುರರಜಮರ್ಕಮಂಡಲಮನಾವರಿಸುತ್ತಿರೆ ತತ್ಪ್ರತಾಪದಿಂ ||
ಪರಿಭವಮಾಂತಮಾಳ್ಕೆಯೊಳೆ ಮಾಸಿದದರ್ಪಣದಂತಗೊಪ್ಪೆ ಸಿ |
ರ್ದರಕರ ಪಾಂಸುಕೇಳಿಯನೊದಚ್ಚರಗುಮಲ್ಲಿ ಜಯಪ್ರಯಾಣದೊಳ್ || ೮

ಕೃತಶುಂಭದ್ವೇಷಿ ಚಂಚತ್ತ್ರಸುವಿಬುಧಪತಿಸ್ತುತ್ಯೆ ಕಲ್ಯಾಣಿ ತೇಜೋ |
ನ್ವಿತೆ ದೃಪ್ಯಚ್ಚಂಡಮುಂಡಪ್ರಹರಿಣಿ ರಿಪುದುರ್ಗಘ್ನೆ ಸೌವರ್ಣಕೋಶ ||
ಸ್ಥಿತೆ ರೌದ್ರಶ್ರೀಸಮಾಲಂಬಿತೆ ಶುಭಕರವಿಖ್ಯಾತೆ ರಕ್ತಾಂಗವಿಭ್ರಾ |
ಜಿತೆ ವಿದ್ಯುದ್ದ್ಯೋತಿ ತದ್ಭೂಭುಜನಸಿಲತಿಕಾಕಾಳಿ ಕಣ್ಗೊಪ್ಪುತಿರ್ಪ್ಪಳ್ || ೯

ವ|| ಮತ್ತಮಾನರೇಂದ್ರನುಪೇಂದ್ರನಂತೆ ಸದಾನಂದಕರಾಜಿತನುಂ ಕ
ಮಳಭವನಂತೆ ಸಕಳವಿಬುಧಸಂಸೇವಿತಸಾರಸೋನ್ನತಪೀಠಾಸೀನನುಂ ಸುರೇಂದ್ರ
ನಂತೆ ಸಹಸ್ರನೇತ್ರಾಶ್ರಿತವಿಪುಳವಿಗ್ರಹಪರಬಲಾಪಹನುಂ ವೀತಿಹೋತ್ರನಂತೆ ವಿತತ
ಕಾಂತಾತತಮೋಹನುಂ ದಂಡಧರನಂತೆ ಕುಜನತಾಪಕಾರಿಯುಂ ರಾಕ್ಷಸೇಶ್ವ
ರನಂತೆ ಸದಾನವವಿಭವನುಂ ಪಾಶಹಸ್ತನಂತೆ ಘನಸಿಂಧುರಾಜಿತಾಪ್ರಮೇಯ
ಬಲನುಂ ಸಮೀರಣನಂತೆ ನಿಜಸತ್ವಸಮುದ್ಧೃತಪರಭೂಪರಾಗನುಂ ಧನೇಶ್ವರ
ನಂತೆ ಮಹಾಪದ್ಮಾಶ್ರಿತಕೋಶನುಂ ಈಶಾನನಂತೆ ಚಂದ್ರೋಪಲಸಿತಾಂಗ ವೃ

ಷೇಂದ್ರಗಮನನುಂ, ಕೃತಪದ್ಮಾನಂದನನಾಗಿಯುಂ ಸಕಲಕಳಾನಿಧಿಯುಂ, ಕುವಲ ಯಾಧಿಪನಾಗಿಯುಮನಂತರತ್ನನುಂ, ಪ್ರಬಳತೇಜಸ್ವಿಯಾಗಿಯುಮಂಧಕಾರಾ ತಿರುಚಿಯುಂ, ಮಹಾಮಹಿಮರಾಶಿಯಾಗಿಯುಂ ಸುರಾಗನುಂ, ಸುಧರ್ಮಾಧಿ ಷ್ಠಿತನಾಗಿಯುಂ ಗೋತ್ರಪ್ರಿಯನುಂ, ಭೂಜನಕುಳಾಶ್ರಯನಾಗಿಯುಮುವನ ಸ್ವಭಾವನುಂ,ಮಹಿತನಯಯುಕ್ತನಾಗಿಯುಮನವಗ್ರಹಸ್ತುಂಅತನುವಿಭೂತಿವಿಳ ಸಿತನಾಗಿಯುಮಶೇಷಭರಣಕರನೆನಿಸಿದ್ದನಂತುಮಲ್ಲದೆ

ವೃ|| ವನದಂತಿಂದ್ರನ ಲೋಕದಂತೆ ಸುಮನೋವಾಸಂ ಸುಧಾಧಾಮನಂ |
ತಿನನಂತುತ್ಕಮಲಾಶ್ರಯಂ ಗಗನದಂತಜ್ಞಾಕ್ಷನಂತ್ಯೈದೆ ದಿ ||
ವ್ಯನವೀನದ್ವಿಜರಾಜರಂಜಿತಸಭಂ ಸತ್ಕಾವ್ಯದಂತಬ್ಧಿಯುಂ |
ತೆ ನಿತಾಂತಂ ಸರಸಂ ವಿರಾಜಿಸಿದನಾರಾಜೇಂದ್ರಪಂಚಾನನಂ || ೧೦

ಪತಿ ನಿದ್ರಾಸಕ್ತನಾದಂ ಜಡಧಿಯೊಳದರಿಂ ಜಾಡ್ಯನಾದಂತೆ ಭಂಗಾ |
ನ್ವಿತನಾದಂ ತಂದೆ ಕುಂಭೋದ್ಭವನಿನದು ವಲಂ ತಳ್ತುಪಾಂಗಿದೆ ಪುತ್ರಂ ||
ಕೃತಶಂಭುದ್ವೇಷದಿಂ ಮೆಯ್ಯಳಿದನದು ಮಧುಸ್ನೇಹದಿಂದಾದವೋಲೆಂ |
ದುತದುದ್ಯಾನ್ಮೋಹಮುಂತಾಂತೊರೆದುಸಿರಿಸರಾಧೀಶನಂ ಸಾದ್ದುಬಾಳ್ದಳ್

ವ|| ಇಂತೊಪ್ಪುವಿಳಾಕಾಂತಸಂತಃಪುರಕಮಳದೊಳ್ಕಮಳೆಯಂತೆ ಕಮ ನೀಯತೆಯನಪ್ಪುಗೈದು

ಕಂ|| ಅಮೃತಮಯವಾಣಿ ಪರಿಲಸ |
ದಮೃತಾಧರೆಯಮೃತಕಿರಣಮಂಡಳ ಮುಖಿ ತಾ ||
ನಮೃತಮತಿಯೆಂಬಪೆಸ್ರ್ಟೆನ |
ರಮರ್ದಿರೆ ತನ್ಮಹಿಪಮಹಿಳೆ ಕರಮೆಸೆದಿರ್ದಳ್ || ೧೨

ವೃ|| ಲೋಕಾಲೋಕನಚಿತ್ರಪುತ್ರಿಕೆ ಲಸಲ್ಲಾವಣ್ಯಲಕ್ಷ್ಮೀಮುಖ |
ಶ್ರೀ ಕಲ್ಯಾಣಯಶೋನಿಧಾನೆ ರತಿರತ್ನಜ್ಯೋತಿ ವಿಖ್ಯಾತಶ್ರೈ||
ವಾಕೂಪಾರಶಶಾಂಕಮಂಡಳಿ ಕಳಾಸಸ್ಯಾವಳೀಧಾತ್ರಿ ಸು |
ಶ್ಲೋಕಾನೇಕಗುಣಾಬ್ಜಪದ್ಮಿನಿ ವಿಳಾಸಂಬೆತ್ತು ಕಣ್ಗೊಪ್ಪಿದಳ್ || ೧೩

ಕಂ|| ಕಳರವಜಿತಕೋಕಿಳೆ ಕೋ |
ಮಱೆ ಮಲಯಜಗಂಧಿ ಗಂಧಗಜಪತಿಗತಿಮಂ ||
ಜುಳೆ ಮಧುಕರಕುಂತಳೆ ಮಂ |
ಗಳಮಯಿಮಾಧುರ್ಯ ಗುಣಗಣೋಜ್ಜ್ವಳೆ ಮೆರೆದಳ್ || ೧೪

ವೃ|| ಪಾರದತುಂಬಿಯುಂ ಕರೆಯೊಳೊಂದಿರದಿಂದುವ ನಿಂದುದರ್ಶನ |
ಕ್ಕಾರಡಿಗೊಳ್ಳದಂಬುರುಹಮುಂ ಬರಿಸಾಗದರನ್ನಮುಂ ಕೆಲಂ ||
ಜಾರದಚಕ್ರಮುಂ ಜರದು ಪೇಳದನುಣ್ಮಿಳಲೊಟ್ಟಿಲಂ ಫಲಂ |
ದೋರದಬಾಳೆಯುಂ ಒಲಿಯುದೊಪ್ಪುವಶೋಕನವಪ್ರವಾಳಮುಂ || ೧೫

ಕಂ|| ಪಡೆಯದುದಂ ಮುಂ ಪಡೆದಂ |
ಜಡಜಭವಂ ಜಡನೆನಿಪ್ಪನುದಿಯ ತೊಡಂಕಂ ||
ಬಡಿಗಲೊಡರ್ಚಿದನೆಂದೆನೆ |
ಮಡದಿಯ ದಿವ್ಯಾಂಗಮೇಂ ಮನಂಗೊಳಿಸಿದುದೋ || ೧೬

ವ|| ಅಂತುಮಲ್ಲದೆಯುಂ

ವೃ|| ಸುಲಿಪಲ್ಕೆಂಬವಳಂಬೊಲೊಪ್ಪುವಧರಂ ಭೃಂಗಾಳಕಂ ನುಣ್ಣೊಸ |
ಲ್ತಿಲಪುಷ್ಪೋಪಮನಾಸಿಕಂ ನಗೆಮೊಗಂ ನೀಳ್ದಕ್ಷಿಗಳ್ನಣ್ಗೊರ ||
ಲ್ವಿಲಸದ್ದೋರ್ಲತೆ ಕೆಂದಳಂ ಘನಕುಚಂ ಗಂಭೀರನಾಭೀಲಸ |
ದ್ವಲಯಂ ಪೂರ್ಣನಿತಂಬಮೊಳ್ತೊಡೆ ಪದಾಬ್ಜಂ ಮಂಜುಳಂ ಕಾಂತೆಯಾ ||

ಕುಮುದನಯನಂ ಕುಂದಸ್ಮೇರಂ ಲಸದ್ಬಿಸಜಾನನಂ |
ಸಮದಗಮನಂ ಸಾಮೋದಾಂಗಂ ಸುಧಾಮಧುರಾಧರಂ ||
ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ |
ಕಮಳಚರಣಂ ಕಣ್ಗೊಪ್ಪಿತ್ತು ಧರಾಧಿಪಕಾಂತೆಯಾ || ೧೮

ವ|| ಮತ್ತಂ

ವೃ|| ತನುಗಳವಟ್ಟರೂಪು ಘನರೂಪ ನಲಂಕರಿಪಜ್ಜ ಜೌವನಂ |
ಮನಕೆನಿದಾದಜೌವನಕೆ ತಕ್ಕವಿಳಾಸತೆ ಸದ್ವಿಳಾಸಮುಂ ||
ಘನಮನೆ ಮಾಳ್ಪಜಾಣ್ಮೆ ಪೊಸಜಾಣ್ಮೆಯನುರ್ವಿಪಸದ್ಗುಣಂ ನೃಪಾಂ |
ಗನೆಗೆಸೆದತ್ತು ಸದ್ಗುಣಮನೇಳ್ಗೆಯೊಳೊಂದಿಪಶೈವಸಂಪದಂ || ೧೯

ಕಲಹಂಸೀಯಾನೆ ಕಂಜಕ್ರಮೆ ಕುಮುದವಿಶಾಲಾಕ್ಷಿ ಸಚ್ಚಂದ್ರಿಕಾಮಂ|
ಜುಲಲೀಲಾಪಾಂಗೆ ಕುಂದಸ್ಮಿತೆ ಘನಕಬರೀಭಾರೆ ಭೂಷ್ಯನ್ನಿತಂಬೋ ||
ಜ್ಜ್ವಲೆ ಸಿಂಹೀಮಧ್ಯೆ ಬಿಂಬಾಧರೆ ಶುಕವಿಲಸದ್ವಾಣಿ ತಾನಾದಪಾಂಗಿಂ |
ದೆ ಲತಾತನ್ವಂಗಿ ಕಲ್ಪದ್ರುಮಸಮನೃಪನೊಳ್ಕೂಡಿ ಬಾಳುತ್ತುಮಿರ್ದಳ್ ||

ಕಂ|| ಗುಣಮನೊಳಕೈದು ತೋರ್ಕುಂ |
ಮಣಿ ಮಹಿಯೊಳದೆಂಬುದುಚಿತ ಮವನೀಶತಿರೋ |
ಮಣಿಯುಮನೊಳಕೈದುದಾಪೆ |
ಣ್ಮಣಿಯುಗುಣಂತಾಸಿದೆಂಬುದೇನಚ್ಚರಿಯೋ || ೨೧

ವ|| ಮತ್ತಮಾಸತ್ಯೇಂದ್ರನರೇಂದ್ರಂಗೆ

ವೃ|| ಶಿವಲಿಂಗಾರ್ಚಕನಾರ್ಘ್ಯಸಂಗತಿರತಂ ತೇಜೋಸ್ಥಿತಂ ರಾಜಸೀ |
ತ್ರಿವಿದಂ ವಿದ್ವದಮರ್ತ್ಯರತ್ನಸಮುಳಸ್ವಾಂತಂ ಪರಕ್ಷ್ಮಾಧವ ||
ಸ್ತವನೀಯಂ ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂ |
ಕವಹಸ್ತಂ ಪತಿವೋಪಿನಾಮದನಲಂಪಿಂ ಮಂತ್ರಿಪಂ ರಾಜಿಪಂ || ೨೨

ಅರಸನ ಧರ್ಮಕೋಶಮೆರಡಂ ಪರಿವರ್ಧಿಪನೀಶಭಕ್ತರ್ಗೆ |
ತರೆ ಪೊಡಮಟ್ಟು ಪೂಜಿಪನರಾತಿನರಾಧಿಪರೆಲ್ಲರಂ ನಿಜೇ ||
ಶ್ವರಚರಣಾಬ್ಜಕಾನತರನಾಗಿಪನುತ್ತಮಮಂತ್ರಿಭಕ್ತಿಪ |
ಸ್ಫುರಿತನಿಜಪ್ರತಾಪದಿನವಂ ಪತಿವೋಪಿಯೆನಿಪ್ಪಮಂತ್ರಿಪಂ || ೨೩

ಪರರಾಜಶ್ರೀಕರಾಕರ್ಷಣಕರಣಕರಂ ಸೂರ್ಯಸೂತಂಬೊಲಂಧೋ |
ಧರವಾಹಂಬೊಲ್ವಿಪಕ್ಷಕ್ಷಿತಿಭೃದುರುಬಲಧ್ವಂಸಿ ಪದ್ಮಂಬೊಲುದ್ಯ ||
ತ್ಪರಿಣದ್ಧಶ್ರೀಗುಣಾಂಕಂ ರಜನಿಕುವಲಯಂಬೊಲ್ಬಲಂ ಸೋಮಪಾದಾ |
ಬ್ಜರುಚಿಸ್ನಿಗ್ಧಂ ಸದಾವೋದರಸರಸನುದಂಚತ್ಸಮುದ್ರಂಬೊಲಾತಂ || ೨೪

ಕಂ|| ಆಮಂತ್ರಿಪಾಳಿಮಣಿಗೆ ಮ |
ಹಾಮಹಿಮಮಹೀಶಪಾಳಿಮಣಿ ಜೋಳಧರಾ |
ಭಾಮಾಧಿಪತಿ ಮನೋಜ್ಞ |
ಶ್ರೀಮಹಿತಂ ಪೃಥುಳಭಾಗ್ಯಮಂ ಪಡೆದಿತ್ತಂ || ೨೫

ವ|| ಅಂತಿತ್ತ ಸಂಪದಮನವನನವರತಮನುಭವಿಸುತುಮಿರ್ದ್ದು

ವೃ|| ತನಯರ್ಕ್ಕಳ್ತನಗಿಲ್ಲಮೆಂದು ಪಿರಿದಾಯಾಸಕ್ಕೆ ಪಕ್ಕಾದಕಾ |
ಮಿನಿಯುಂ ಸಂತಮಿಡುತ್ತೆ ಚಿದ್ಘನಶಿವಾಚಾರ್ಯಾಂಘ್ರಿಯಂ ಪೊರ್ದ್ದಿ ಸೇ ||
ವನೆಗೆಯ್ಯುತ್ತ ವರಿತ್ತ ಮಂತ್ರಬಲದಿಂ ಸತ್ಪುತ್ರನಂ ಪೆತ್ತು ತ |
ತ್ತನಯಾನಂದಿತನಿರ್ದ್ದನಾನೃಪಸಭಾವಾರಾಶಿಚಂದ್ರೋದಯಂ || ೨೬

ವ|| ಅಂತಾಪತಿಪೋಹಿಮಂತ್ರಿಪಂ ನಿಜಸುತಂಗೆ ಮಿತವಚನಾಭಿಧಾನ ಮನಿಟ್ಟು ಕಟ್ಟಳ್ಕರಿಂ ಸಲಪುತ್ತಮಿರ್ಪ್ಪನವೊಂದುದಿವಸಂ

ವೃ|| ಹರಿಪೀಠಾಸೀನನುದ್ಯತ್ಸಚಪನಿಚಯಸಂಯುಕ್ತನುದ್ದೀಪ್ತದಿವ್ಯಾ |
ಭರಣಾಂಚತ್ಕಾಯನುರ್ವೀಶ್ವರಸಿಕರಸಿಷೇವ್ಯಾಂಘ್ರಿಪದ್ಮಂ ಪಯೋಭೃ |
ದ್ಭರನಮ್ರಾಂಗಾಂಗನಾಚಾಲಿತಚಮರರುಚದ್ವಂದ್ವಪಾರ್ಶ್ವಂ ಜಯಸ್ವ |
ಸ್ವರಭಾಸ್ವದ್ವಂದಿವೃಂದಸ್ತುತನವನಿಪನೊಡ್ಡೋಲಗಂಗೊಟ್ಟನಾಗಳ್ || ೨೭

ವ|| ಅಂತೊಡ್ಡೋಲಗಂಗೊಟ್ಟಿರ್ದ್ದು ನಿಜಾಮಾತ್ಯನಪ್ಪಪತಿಪೋಹಿಯಂ ನಿರೀಕ್ಷಿಸಿ

ಕಂ|| ಲೀಲೆ ಮಿಗೆ ನುಡಿದನಾನರ |
ಪಾಲಂ ಪತಿಪೋಹಿಯೊಡನೆ ಪದಪಿಂ ಪರಪೋ ||
ಕ್ಷಾಲಂಬಮೆನಿಪಕಾಶಿಗೆ |
ಕಾಲಾರಿಗೆ ಪೋಗಿ ಜಹ್ನುಜಾಂಬುಗಳಿಂದಂ || ೨೮

ವೃ|| ತುಂಬಿ ಸಹಸ್ರಕುಂಭದಭಿಷೇಕಮನಾಗಿಪೆನಾಗಮೋಕ್ತಮಾ |
ರ್ಗಂಬಿಡಿದಂಬಿಕಾಪತಿಗೆ ಮನ್ಮನದಿಷ್ಟಮಿದಲ್ತೆ ತಳ್ವದೇ ||
ಳೆಂಬುದುಮಿಂಬುವೆತ್ತ ಪಣೆಗತ್ತುರಿಬೊಟ್ಟು ತದಂಘ್ರಿಪದ್ಮದೊ |
ಳ್ತುಂಬಿಯಿದೆಂಬವೋಲಮರ್ದ್ದೆ ಪತ್ತಿರೆ ತಾಂ ಪೊಡಮಟ್ಟು ಮಂತ್ರಿಪಂ|| ೨೯

ಕಂ|| ನುಡಿದನೆಲೆಜೀಯ ನಿಮ್ಮೊ |
ಳ್ಮೃಡನೆಂದುಂ ನೆಲಸಿ ನಿಂದನದರಿಂ ನೀಮಿ ||
ರ್ದ್ದೆಡೆ ಕಾಶಿಯಲ್ತೆ ಚೇರಿ |
ನ್ನಡೆಯಾಡಲದೇಕೆ ತರಿಪೆನಾನದಿಯುದಮಂ || ೩೦

ವೃ|| ಜವದಿಂದಿಲ್ಲಿಗೆನುತ್ತೆ ಧರ್ಮವತಿಗೇಳ್ಗೊಗರ್ವುದಂಬೆತ್ತಶಾಂ |
ಭವಲೀಲಾಗೃಹಮಾದಕಾಶಿಯನದೀತೋಯಂಗಳಂ ಮಂಗಳೋ ||
ತ್ಸವದಿಂ ಭೂವರವೃಂದಮುಂ ನಿಲಿಸಿ ಸಾಲ್ಗೊಂಬಂತುಟೋರೊರ್ವ್ವರಿಂ |
ದವನಂದ್ಯೈದಿಸಿದಂ ಸುವರ್ಣಘಟದಿಂ ತಾನೆಂದೊಡೇಂ ಪೆರ್ಮೆಯೋ|| ೩೧

ವ|| ಅಂತು ಘನಕನಕಘಟೀಸಹಸ್ರದಿಂ ಭಾಗೀರಥೀಭದ್ರಮಯಾಂ ಬುವನ್ನೈದಿಸಲೊಡನೆ ಸಂಭ್ರಮಂ ಮಿಗೆ

ವೃ|| ತಳೆದಾನಂದಮನಾನರೇಂದ್ರತಿಳಕಂ ಪೂಜಾಗೃಹಂಬೊಕ್ಕು ನಿ |
ರ್ಮಳಕಾಯಂ ಭಸಿತಾಕ್ಷಮಾಲಿಕೆಗಳಂ ತಾಳ್ದಂಗದೊಳ್ತನ್ನದೀ |
ಜಳದಿಂ ಮಂತ್ರಯುತಂ ಶಿವಾಗಮವಿದಂ ತೂರ್ಯ್ಯಸ್ವನಂ ಪೊಣ್ಮೆಮಂ |
ಗಳಲಿಂಗಕ್ಕಭಿಷೇಕಮಂ ರಚಿಸಿದಂ ಮಾಹೇಶ್ವರಪ್ರಾವೃತಂ || ೩೨

ಅನಂತರಂ ||

ಘನಘನಸಾರಕುಂಕುಮವಿಲೇಪನದಿಂ ಧವಳಾಕ್ಷತಂಗಳಿಂ |
ವನರುಹಕೈರವಪ್ರಸರದಿಂ ನವಸೌರಭ ದಿವ್ಯಧೂಪದಿಂ ||
ದಿನರುಚಿದೀಪದಿಂದಿನಿದನಪ್ಪಿದ ಸಾರಸುಧಾನ್ನದಿಂ ಪಿವಾಂ |
ಕನಿಯುತವೀಟಿಕಾವಿತತಿಯಿಂ ನೃಪನರ್ಚ್ಚಿಸಿದಂ ಕಪರ್ದಿಯಂ || ೩೩

ವ|| ಅಂತುಮಾರಾಜಮೌಳಿಮಣಿಗೆ ರಾಜದ್ರಾಜಮೌಳಿ ಮಣಿಮಣಿದು ರಾಜವದುಪಚಾರಮನೋಜೆಮಿಗೆ ರಚಿಸಿ ||

ವೃ|| ತನು ರೋಮಾಂಚಮನೊಂದೆ ಮುಂದೆಸಯನಾನಂದಾಶ್ರುಗಳ್ಜಾರೆತೋ|
ರೆ ನವಂ ಗದ್ಗದಮುಣ್ಮೆ ಪೊಣ್ಮೆ ನಡುಕಂ ಘುಮ್ಮೆಂಬು ಕೈಗಣ್ಮೆಜಾ ||
ಣ್ಮೆ ನಿತಾಂತಂ ದೃಢಯೋಗ ರಾಗರಸದಿಂ ಚಿತ್ತಾಬ್ಧಿ ನೀರೇರೆ ಮಾ |
ರೆ ನರೇಂದ್ರಂ ಶಿವಲಿಂಗಸಂಗರತಿಯಂ ತಳ್ತಪ್ಪಿದಂತೊಪ್ಪಿದಂ || ೩೪

ವ|| ಮತ್ತಮಾಗಳ್

ವೃ|| ನುತಿಗೈದಂ ನುತರಾಜರಾಜನಗಜಾತಾಕಾಂತನಂ ಕಾಂತನಂ|
ಶಿತಶೂಲಾಹತನಾಗನಾಗಭರಣಭ್ರಾಜಿಷ್ಣುವಂ ಜಿಷ್ಣುವಂ ||
ದಿತನಂ ವಿಶ್ರುತದೇವದೇವನನುದಾರ ಶ್ರೀದನಂ ಶ್ರೀದನಂ |
ದಿತನಂ ದರ್ಪಿತಭಾವಭಾವಜತಮಶ್ರೀಸೋಮನಂ ಸೋಮನಂ || ೩೫

ವ|| ಅದೆಂತೆನೆ

ವೃ|| ಶ್ರೀಮತ್ಪೂರ್ಣಸುಖಾಬ್ಧಿ ನಿತ್ಯ ನಿರುಪಾಧಿಜ್ಯೋತಿ ವಿಖ್ಯಾತಮಾ |
ಯಾಮೋಹಾಮಯದೂರಸಾರನಿಗಮಾಂತಾಭೇದ್ಯ ಸದ್ರೂಪ ಚಿ ||
ದ್ವ್ಯೋಮಾಕಾರ ಯಮೀಂದ್ರಮಾನಸಸಮುಲ್ಲಾಸಾಸ್ಪದಾವಾಸ ನಿ |
ಷ್ಕಾಮಪ್ರೇಮ ಮಹೇಶ ರಕ್ಷಿಸೊಲವಿಂ ಶ್ರೀಶೈಲಜಾವಲ್ಲಭಾ || ೩೬

ತಳೆದತ್ತಬ್ಜಭವಾಂಡನಾನುವ ಭವದ್ವಾಮಾಕ್ಷಿಸಂಜಾತಭೂ |
ವಳಯಂ ಮೋಣದನೋವಿ ಮಿತ್ರವೆಸರಂ ತಾಳ್ದಿರ್ದುದಾದಕ್ಷಿಣೋ ||
ಜ್ಜ್ವಳನೇತ್ರಂ ಪಣೆಗಣ್ಣದಂ ದಹಿಸುಗುಂ ಕಾಲಾಗ್ನಿರೂಪಂ ನಿರಾ |
ಕುಳಮಿಂತಾಗಿರೆ ನಿರ್ವಿಕಾರನೆನಿಪ್ಪೈ ಶ್ರೀಶೈಲಜಾವಲ್ಲಭಾ || ೩೭

ಪೆಡೆವಿಲ್ಗಳ್ತಳೆದಿಕ್ಕುರ್ವಿಮಾಧರಣಿಯುಂ ಸೂತಂ ಕರಂ ಪುಟ್ಟಿಪಂ |
ಪದಪಿಂದೀಭುವನಂಗಳಂ ಪೊರೆಗುಮಾಬಾಣಂ ರಥಾಂಗಂಗಳಂ ||
ತದನುದ್ಯದ್ದ್ಯುಚಿಯುಂ ವಲಂ ಬೆಳಗುಗುಂ ನಿನ್ನಶ್ವಮಾಕಮ್ಮ ಬೊ |
ಮ್ಮದ ಪಾಂಗಂ ಸಲೆ ಬೋಧಿಕುಂ ಬುಧರ್ಗೆ ಕೇಳ್ ಶ್ರೀಶೈಲಜಾವಲ್ಲಭಾ || ೩೮

ಹರಿಮುಖ್ಯಾಮರರಂ ಪಡಲ್ವಿಡಿಸಿ ಲೋಕಾನೀಕಮಂ ಪರ್ಬ್ಬ ನು |
ಬ್ಬಿರದೇಳ್ತರ್ಪ್ಪಪೊಲೊತ್ತಿ ಸುತ್ತಿ ಪರಿತರ್ಪ್ಪತ್ಯುಗ್ರಹಾಲಾಹಲೋ ||
ತ್ಕರಮಂ ತಾಳದೊಡೋವೊದೇವಸತಿಯರ್ಸ್ಸೀಮಂತಸಿಂದೂರರಾ |
ಗರಜಶ್ರೀಯನದೆಂತು ತಾಳ್ದಪರೊ ಪೇಳ್ ಶ್ರೀಶೈಲಜಾವಲ್ಲಭಾ || ೩೯

ಶಿವ ನಿನ್ನಂಘ್ರಿಯನಾವನೊರ್ಮ್ಮೆ ನೆನೆವಂ ಸದ್ಭಕ್ತಿಯಿಂದಾತನಂ |
ದಿವಿಜರ್ಕ್ಕಳ್ಕೆನೆವರ್ತ್ತದಂಘ್ರಿಗೆರಪಂ ತಾನಾವನಾತಂಗೆ ಯೋ ||
ಗಿವರತ್ತಾರ್ವೆರಪರ್ಭವನ್ನುತಿಯನಾಪಂ ಮಾಳ್ಪನಾಧನ್ಯನಂ |
ಸವಿವಾತಿಂ ನುತಿಗೈವುದಾಗಮಚಯಂ ಶ್ರೀಶೈಲಜಾವಲ್ಲಭಾ || ೪೦

ನಿಗಮಂಗಳ್ಮಿಗೆ ಕಾಣಲಾರ್ತ್ತವೆ ಭವತ್ಪಾದಾಬ್ಜಮಂ ನಿನ್ನನೇಂ |
ಪೊಗಳಲ್ಶಕ್ತರೆ ವಿಷ್ಣುಮುಖ್ಯವಿಬುಧರ್ಯೋಗೀಂದ್ರರುಂ ಭಾವದೃ ||
ಷ್ಟಿಗಳಿಂ ಲಕ್ಷಿಸಲೇಂಸಮರ್ಥರೆ ಭವದ್ಭಕ್ತರ್ಕ್ಕಳೇ ಕಾಣಲುಂ |
ಪೊಗಳಲ್ಲಕ್ಷಿಸಲುಂ ವಲಂ ನೆರೆದಪರ್ ಶ್ರೀಶೈಲಜಾವಲ್ಲಭಾ || ೪೧

ಭವದೊಳ್ಬರ್ಪ್ಪಮರರ್ಕ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೇ |
ನವರೇಸೀವರೆ ಮುಕ್ತಿಯುಂ ಭವಹರಂ ನೀನಲ್ಲದಿಷ್ಟಾರ್ಥಮುಂ ||
ಶವೆ ಮಾಡಲ್ಸುರಪಾದಪಂ ನೆಗೆಗುವಿಾಬರ್ಬೂರವೃಕ್ಷಂಗಳೀ |
ವುವೆ ಕೇಳಂತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾವಲ್ಲಭಾ || ೪೨

ಸುಲಭಂ ದೇವ ಭವತ್ಪದಾಬ್ಜಭಜನಾಸಕ್ತರ್ಗ್ಗೆ ಧರ್ಮಾರ್ಥಕಾ |
ಮಲಸನ್ಮುಕ್ತಿಗಳೆಂಬುದಂ ತಿಳಿದುಮೆನ್ನೀಮಾನಸಂ ನಿನ್ನನಿ ||
ಶ್ಚಳಭಕ್ತಿಸ್ಪೃಹೆಯೂನದಿರ್ಪ್ಪತೆರನೇಂ ಪೇಳ್ಪೋಹಮೋ ತನ್ನನುಂ |
ಬುಳಪುತ್ರಾಂಗಮುನಿಕ್ಕಿದೊಂದುಮುಳಿಸೋ ಶ್ರೀಶೈಲಜಾವಲ್ಲಭಾ || ೪೩

ಕರದೊಳ್ತಾಳ್ದನಿಜೇಷ್ಟಲಿಂಗದೆ ಮನಂ ಪಂಚಾಕ್ಷರಂ ವಕ್ತ್ರದೊ |
ಳ್ಕೊರಲೊಳ್ತಳ್ತಶಿವಾಕ್ಷಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್ ||
ಗುರುಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ಪ್ಪಭಕ್ತಂಗದಾ |
ಸ್ಸರಿ ನೀನಾತನಧೀನನಪ್ಪೆ ಸತತಂ ಶ್ರೀಶೈಲಜಾವಲ್ಲಭಾ || ೪೪

ವ|| ಅಂತು ಪೊಗಳ್ದು ಪೊಡಮಟ್ಟು ಮುಗುಳ್ದು ಲಿಂಗಪೂಜೆಯಂ ಸಾಂಗಮೆನೆ ರಚಿಸಿದನಂತರಂ

ಕಂ|| ಧನಕನಕವಸನಮಣಿಭರ |
ಣನಿವಹ ನವಗಂಧಮಾಲ್ಯವೀಟಿಕೆಗಳಿನಂ ||
ದನುನಯದಿಂದರ್ಚಿಸಿದಂ |
ಜನನಾಮಯಹರಣಶರಣಚರಣಾಂಬುಜಮಂ || ೪೫

ವ|| ಅಂತರ್ಚಿಸಿ ಪೊಗಳ್ದು ಮುಗುಳ್ದೆರಗಿ ಕೈಂಕರ್ಯಮನಂತವರಕಾರುಣ್ಯಮುಂ ಪಡೆದರಸನನವರತಮಿಂತು ಪೊಳ್ತುಗಳೆವುತ್ತುಮಿರ್ದನನ್ನೆವರಮುಂತವರದೊಳಮೃತಮತಿ ಮಹಾದೇವಿಯೊಂದುಪುಣ್ಯವಾಸರಸುಪ್ರಭಾತಸಮಯದೊಳ್ನಿವಲಿಂಗಪೂಜಾನಂತರಂ ಪುರಾಣಮುಂ ಕೇಳ್ವಲ್ಲಿ ಮಾರ್ಕಂಡೇಯಚರಿತಂ ಬರೆವರೆ ತದ್ಬಾಲಲೀಲೆಯುನಾಕರ್ಣಿಸಿ ತನಗೆ ತನಯನಿಲ್ಲಪ್ಪುದರಿಂ ನೆನೆದು ಬಸುಸುಯ್ದು ಕೆಲದೊಳಿರ್ದ್ದಕೆಳದಿಯೊಡನಿಂತೆಂದಳ್

೫೦|| ಎಳವರೆಯುದೊಳೆಳೆಯುಕ್ಕ್ಕಳ |
ನೆಳಸುತೆ ನಳಿತೋಳ್ಗಳಿಂದೆ ಬಿಗಿದಪ್ಪಿ ಮನಂ ||
ಗೊಳೆ ತಳ್ತು ನೋಡಿ ಮುದ್ದಿಪ |
ವಿಳಾಸನೊಂದಕ್ಕೆ ಸೋಂತುದಿಲ್ಲಾಂ ಕೆಳದೀ || ೪೬
ಶಿವಭಕ್ತಿಯಿಲ್ಲದನಬಾ |
ಳ್ಕವಿತ್ವಮಿಲ್ಲದನಜಾಣ್ಮೆ ಕಳೆಯಿಲ್ಲದಪೆಣ್ ||
ಜವಮಿಲ್ಲದಶ್ವಮುಂ ತನು |
ಭವನಿಲ್ಲದಭಾಗ್ಯಮೆಂತುಮೇಂ ಮೆರೆದಪುದೇ || ೪೭
ಅರಳೆಲೆ ಮಾಗಾಯ್ಕುಣಿಯು |
ತ್ತಿರೆ ನುಣ್ಣೊಸಲೊಳ್ಕದಂಪಿನೊಳ್ಮೃದುಹಾಸ ||
ಸ್ಫುರಿತಂ ಪೊಳೆವಲ್ಮಿನುಗು |
ತ್ತಿರೆ ಪರಿದಾಡುವಕುಮಾರನೆಂದಾದಪನೋ || ೪೮
ಕರತಳದಿಂದೆನ್ನಯನು |
ಣ್ಬೆರಲಂ ಪಿಡಿದೇಳ್ದು ಜನನಿ ನಡೆದಪೆನೆನುತೊಂ ||
ದೆರಡಡಿಯನಿಟ್ಟು ಸಿರಿಯಂ |
ಭರದಿಂ ತಳ್ಕೈಪಮಗನನೆಂದೀಕ್ಷಿಪೆನೋ || ೪೯
ಅರಸನ ಪಿಂದೆಸೆಯೊಳ್ಮೆ |
ಯ್ಗರೆದೆಲ್ಲಿದ್ದಪೆನೊ ಜನನಿ ಪೇಳೆನುತೊಲವಿಂ ||
ಪರಿತಂದೆಳನಗೆ ಮಿಸುಗು |
ತ್ತಿರೆ ಕುವರಂ ಕೊರಲನೆಂದು ಬಿಗಿದಪ್ಪುವನೋ || ೫೦

ವೃ|| ಮಗನಂ ತಳ್ತುಮರ್ದಪ್ಪಿ ನೋಡಿ ಮೊಗಮಂ ಮುಂಡಾಡಿ ನೇಹಂ ಮನಂ|
ಬುಗೆ ಮಾತಾಡಿಸಿ ಲಲ್ಲೆಗೈದು ನಗಿಸುತ್ತಿಕ್ಕೈಗಳಂ ಸಾರ್ಚಿ ಮಂ ||
ಡೆಗೆ ಬಟ್ಟಾಡೆ ಕೆಲಕ್ಕೆ ಚಿಮ್ಮಿ ಮೊಲೆವಾಲಂ ಮತ್ತೆ ಬಾಯ್ದೂಡಿ ಮೆ |
ಲ್ಲಗೆ ತೊಟ್ಟಿಲ್ಗಿರಿದಿಟ್ಟು ತೂಗುವೆಳವೆಣ್ಣೇಂನೋಂಪಿಯಂ ನೋಂತಳೋ||೫೧

ಕಂ|| ಪಡಿನೆಳಲಂ ಮಣಿಕುಟ್ಟಿಮ |
ದೆಡೆಯೊಳ್ನಡೆ ನೋಡಿನೋಡಿ ದಾಯೆನುತುಂ ಕೈ ||
ದುಡುಕಲದು ತುಡುಕೆ ನಗೆ ನಗೆ |
ಕಡುಬಿನದಂಬಡೆವ ಕಂದನೆಂದಾದಪನೋ || ೫೨

ವೃ|| ಇಂತುಪಲುಂಬಿ ಪಂಬಲಿಸಿ ಭೂಷಣಮಂ ತೆಗೆದಿಟ್ಟು ಚಿತ್ತದೊ |
ಳ್ಚಿಂತೆಯನಾಂತು ಕಾಂತೆ ಬಿಸುಸುಯ್ಯೆಲರಿಂ ತನುವಲ್ಲಿ ಕಂದಿತೆಂ ||
ಬಂತಿರೆ ತನ್ಮೊಳಾಳಿಯುರದೇನೆನುತಳ್ಕಿರೆ ತಳ್ವದೈದಿದೇ |
ಕಾಂತಸಿಕೇನಕ್ಕೆ ಧರಣೀಪತಿ ಒಂದೊಳಪೊಕ್ಕು ನೋಡಿದಂ || ೫೩

ಎಡಗೈಯಿಂದೊತ್ತಿ ಶಯ್ಯಾತಳಮನಿಸಿಸುಜಾರಿದ್ದುರ್ದಂ ಮೇಲುದಂ ಪೊಂ |
ಗಡಗಂ ಗಲ್ಕೆಂದು ಶಬ್ದಂಗುಡೆ ಬಲದಕರಾಂಭೋಜದಿಂದೇರನೂಂಕು ||
ತ್ತೊಡನುತ್ತುಂಗಸ್ತನಾಗ್ರಕ್ಕೆಳಿವಮುಡಿಯನಾಂತೌಂಕುತುಂಕಂರದಿಂಮುಂ |
ಗಡೆಮೊಳ್ಕಂಡೇಳ್ಸಳಂ ಕೈವಿಡಿದವಳೊಡನರ್ಧಾಸನಂಗೊಂಡನಾಗಳ್ || ೫೪

ವ|| ಅಂತು ಕುಳ್ಳಿರ್ದು ಕೂರ್ಮೆಯಿಂ ಸಿರೀಕ್ಷಿಸಿ

ವೃ|| ಮೃಗಮದಗಂಧಿ ಸಿನ್ನ ಮೊಗಮೆಂಬಸುಧಾಕರಬಿಂಬಮಿಂದು ಬೆ |
ಳ್ನಗೆತಿಳಿಜೊನ್ನಮಂ ತೊರೆದುದಿಂದುಟಿಚೆಂದಳಿರಿಪ್ಪುರ್ಗುಂದಿದ ||
ತ್ತಗಲದರಾಗಸಾಗರದ ಪೆರ್ಚುಗೆ ತಗ್ಗಿದುದಕ್ಷಿಕೈರವಂ |
ಮಿಗೆ ಕೊರಗಿತ್ತು ಚಿತ್ರಪರಿತಾಪಮಹಾತಪದಿಂ ಮನೋರಮೇ || ೫೫

ವ|| ಅಂತುಮಲ್ಲದೆಯುಂ

ವೃ|| ಕರಕಮಳಂ ಕಪೋಳಶಶಿಬಿಂಬಮನಪ್ಪಿದುದೇಕೆ ಸಿನ್ನಭಾ |
ಸುರನಯನೋತ್ಪಳೋದ್ಗಳಿತ ಕಜ್ಜಳಪಜ್ಜಳಬಿಂದುಬೃಂದಷ ||
ಟ್ಚರಣಗಣಂ ಕುಚಾಬ್ಜಮುಕುಳಕ್ಕೆರಗಿರ್ದವುದೇಕೆ ಸುಯ್ಯಲ |
ಕ್ಕೊರ್ಕರಗಿಪುದೇಕೆ ಪೇಳಧರಪಲ್ಲವಮಂ ತರಳಾಯತೇಕ್ಷಣೇ || ೫೬

ಕಂ|| ಅರುಣಾಂಬುಜನಾಳಮನಾ |
ವರಿಸಿದನವಫೇನಪಿಂಡಮಾಲೆಯ ಚೆಲ್ವಂ ||
ಪರಿಭವಿಸಿ ಮೆರೆದುದೇಕಿ |
ಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ || ೫೭

ಗುರುಜಘನಬಿಂಬಶಂಬರ |
ಹರಕರಿವರಕುಂಭಮಿಂಬುವಡೆದುದಿದಿಲ್ಲೇ ||
ಕರವಿಂದಾನನೆ ಮಣಿಗಣ |
ಸುರಚಿರತರಮೇಖಲಾಶಿರೋಮಾಲಿಕೆಯಿಂ || ೫೮

ಅಲರ್ಗಣೆಯನರ್ಚಿಸಿದವಿಹ |
ಕಿಲಮಾಲೆಯನಾಂತಪೂರ್ಣಕುಂಭದ ಚೆಲ್ವಂ ||
ಗೆಲೆವಂದುದಿಲ್ಲ ಕುಚಮಂ |
ಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ || ೫೯

ಮದನಮಣಿದರ್ಪಣದ ಪದ |
ಪೊದವಿಡಕದಪಿನು ಪೊದಳ್ದಮುಕರಿಕೆಯಂ ತಾ ||
ಳದೆ ಕರೆವೆರಸದಶಶಿಬಿಂ |
ಬದ ಪೋಲ್ವೆಯನಾಳ್ದುದೇಕೆ ಕಮಳದಳಾಕ್ಷೀ || ೬೦

ವದನಾಂಬುಜಲಕ್ಷ್ಮಿಯನ |
ಪ್ಪಿದವೇಣ್ಯಸಿತಾಹಿಭೀತಬಾಲೇಂದುವಿಡೆಂ ||
ಬುದನೆಸಿಸದೇಕೆ ನೊಸಲೊ |
ಳ್ಪದಮಳತರಭಸಿತಲಸಿತತಿಲಕಂ ರಮಣೀ || ೬೧

ಮೊಗಸಪಿ ನಯನಾಂಭೋರುಹ |
ಯುಗಳಮನಮರ್ದಪ್ಪಿ ನಿಂದುದೆಂಬೀಪುರುಡಿಂ ||
ಜಗುಳ್ದಂತೆ ತೋರ್ಪುದಿಲ್ಲೆಲೆ |
ಮೃಗಾಕ್ಷಿ ಪೇಳೇಕೆ ಕರ್ಣಪೂರದನೆಯ್ದಿಲ್ || ೬೨

ಕಾರಿರುಳೊಳಮರ್ದತಾರಗೆ |
ಗೋರಗೆಯೆಸಿಸಿದ್ದುದಿಲ್ಲರಲ್ಮುಡಿಯೊಳಿದೇಂ ||
ಕಾರಣಮರಿಪೆನ್ನೊಳ್ಮದ |
ವಾರಣಮೃದುಯಾನೆ ನಿನ್ನಮನದುಮ್ಮಳಮಂ || ೬೩

ಮದಕೋಕಿಳಕಳರವೆ ಸಂ |
ಮದಕರಮೃದುವಾಣಿ ನಿನ್ನ ಮೊಗದೊಳ್ಪೊರಪೊ ||
ಣ್ಮದೊಡಳಿರವಮಿಲ್ಲದಪ |
ದ್ಮದೊಳೆಣೆವಂದೆನಗೆಮಾಳ್ಪುದಿದು ಮನದಳಲಂ || ೬೪
ಆರಿಂದಾದುದು ಚಿಂತಾ |
ಭಾರಂ ಶಶಿವದನೆ ಪೇಳ್ವುದೆನ್ನೊಡನೆಂದಾ ||
ಭೂರಮಣಂ ಬೆಸಗೊಳೆ ಕರ |
ವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ || ೬೫
ಅವಧರಿಪುದಖಿಳಧರಣೀ |
ಧವನಿವಹಕಿರೀಟಕೋಟಿಮಣಿಗಣಘೃಣಿಸಂ ||
ಭವನವರಪರುಚಿರುಚಿರಾಂ |
ಘ್ರಿವನೇರುಹಯುಗಳ ದೇವ ದೇವಿಯುರಿರವಂ || ೬೬
ವಾಸ್ತವಪುರಾಣದೊಳ್ಪೃಥು |
ಳಸ್ತನಿ ಕೇಳ್ದಳ್ಮೃಕಂಡುಜೋಪಾಖ್ಯಾನ ||
ನ್ವಸ್ತಮೃಕಂಡುಜಲೀಲಾ |
ವಿಸ್ತಾರಮನೆಲ್ಲಮಂ ವಸುಂಧರೆಯರಸಾ || ೬೭
ತನಗಿಲ್ಲಪ್ಪುದರಿಂದಂ |
ತನಯುಬ್ಬಿಸುಸುಯ್ದು ಬಿಸುಟು ಮಣಿಭರಣಮನೀ ||
ವನಿತೆ ವಸಂತಂ ತೊಲಗಿದ |
ವನಲತೆಯೆನೆ ಬಿನ್ನನಿರ್ಪ್ಪಳೆಲೆಧರಣೀಶಾ || ೬೮
ತನುವಲ್ಲಿಗೆ ಫಳಮಾವುದೊ |
ತನಯಂ ತತ್ತನಯನಿಲ್ಲದಿರೆ ವಿಫಳಂ ಕೇ ||
ಳ್ತನುವಲ್ಲಿಯುದರಿನೀಮಾ |
ನಿನಿಗೆ ಕರಂ ಚಿಂತೆ ನೆಗಳ್ದುದವನಿಪತಿಳಕಾ || ೬೯

ದೇವಿಯರ ಚಿತ್ತದನುವಿದು |
ದೇವರ್ಚಿತ್ತವಿಪುದೆಂದು ನುಡಿದಳ ನುಡಿಯಂ ||
ಭಾವಿಸಿ ಕಾಂತೆಯ ಚಿಂತೆಯ |
ನಾವಿಭು ತಾಂ ಪರ್ಚುಗೊಂಡು ತಳೆದಿಂತೆಂದಂ || ೭೦

ವೃ|| ಶಿವಮತವಾರ್ಧಿವರ್ಧನಶಶಾಂಕನನಂಗಜಮರ್ದನಾರ್ಚನೋ |
ತ್ಸವಸವನಪ್ರದೀಕ್ಷಿತನಸಚ್ಚಕಳಾಧರಭಕ್ತಬೃಂದಬಾಂ ||
ಧವನನುಮೇಶಲಾಂಛನಧರಾಂಘ್ರಿಸರೋರುಹಭಕ್ತಿಯುಕ್ತನಂ |
ಕುವರನನೀಗಳೆನ್ನಬಗೆಯುಂ ಬಯಸಿರ್ದಪುದಂಬುಜಾನನೇ || ೭೧

ವ|| ಎಂದು ನುಡಿದಿನಿಯನನುಕೂಲವಚನಮಂ ಕೇಳ್ದು

ಕಂ|| ವದನಸ್ಥಿತವಾಣಿಯ ಕ |
ಣ್ಣಾದಿರುರ್ವಿದುದೆಂಬಭಾವಮಂ ಬೀರಿ ಲಸ ||
ದ್ರದನದ್ಯುತಿ ಪಸರಿಸೆ ತ |
ತ್ಸದತಿ ಮೃದೂಕ್ತಿಯೊಳೆ ಕಾಂತನೊಡನಿಂತೆಂದಳ್ || ೭೨

ವೃ|| ಪರರಾಜಾಶೇಷತೇಜಸ್ಸ್ಥಿತಿ ಕೆಡೆ ಕಮಳಾಮೋದಮಿಂಬಾಗೆ ಧಾತ್ರೀ |
ಪರಿತೋಷಂ ಪೆರ್ಚೆ ಪೂರ್ವಕ್ಷಿತಿಭೃದಧಿಕರಾಗಂ ಸಮಂತಾಗೆ ಸನ್ಮಾ ||
ರ್ಗರುಚಿಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮ|
ದ್ವರಚೇತಃಪದ್ಮಮೀಗಳ್ಬಯಸಿದಪುದು ಕೇಳ್ಭೂಮಿಪಾಲಾವತಂಸಾ || ೭೩

ಕಂ|| ಗಿಳಿವರಿ ಮೆರೆಯದನಂದನ |
ಮಳಿಶಿಶು ವಿಹರಿಸದಪೂಗೊಳಂ ಕಳರವದಿಂ ||
ದೆಳಅಂಚೆಯಡಿಯಿಡದತ |
ಣ್ಬುಳಿಲರ್ಭಕನಾಡದಂಗಳಂ ಮಂಜುಳಮೇ || ೭೪

ಎನೆ ನೃಪನೆಂದಂ ಕೇಳಂ |
ಗನೆ ನೀನೆಂದಂತೆ ತನಯನಂ ಪಡೆಯದೆ ಬಾ ||
ಳ್ವನ ಸಂಸಾರಮಸಾರಂ |
ತೆನೆಯಿಲ್ಲದನವಪಲಾಲದಂತಿರೆ ಧರೆಯೊಳ್ || ೭೫

ಸುರತುರುವಿನೆ ಸಿರಿವಡೆವುದು |
ಪಿರಿದೆ ಸರೋಜಾಕ್ಷಿ ಮದ್ಗುರೂತ್ತಮನೊಲ್ದೊ ||
ಪ್ಪಿರೆ ತತ್ಪ್ರಸಾದಬಲದಿಂ |
ಪಿರಿದು ಮದಿಷ್ಟಮನೆ ಪಡೆಯಲಕ್ಕುಮಮೋಘಂ || ೭೬

ಆದರಿಂ ಚಿಂತೆಯನುಳಿವುದು |
ಸುದತಿ ಸುಧಾಕ್ಷರಧರಾಂಘ್ರಿಯುಂ ಪೂಜಿಪುದ ||
ಭ್ಯುದಯಕರ ಧರ್ಮಮಂ ಮಾ |
ಳ್ಪುದು ದೊರೆತಪ್ಪುದಲ್ತೆ ಭವದಭೀಪ್ಸಿತಮಬಲೇ || ೭೭

ಇಂತೆಂದು ತಿಳಿಪೆಧರಣೀ |
ಕಾಂತಂ ಬಗೆವಿಡಿದು ಚಿಂತೆಯಂ ತಾನುಳಿದಳ್ ||
ಕಾಂತೆ ಬಿಡದಾಪ್ತವಚನದಿ |
ನೇಂತಿಳಿವೊಡೆ ಚಿಂತೆಗೌಷಧಂ ಪೆರತುಂಟೇ || ೭೮

ವ|| ಅನಿತರೊಳ್ಪರಮನೋರಥಮಂ ನಿಮಿರ್ಚಲೆಂದು ನೃಪ ಸಾಕಾರತೆ ವೆತ್ತುಬರ್ಪಂತೆ

ವೃ|| ಘನಮಹಿಮರ್ಸ್ವವೃತ್ತರಭವಾರ್ಚಕರುಜ್ಜ್ವಲಲಿಂಗಸಂಗಸ |
ಜ್ಜನವಿನುತರ್ಶಿವಾಗಮವಿಶಾರದರಾರ್ಯರುದಾತ್ತಕೀರ್ತಿಮಂ ||
ಡನರುಚಿತಜ್ಞರಪ್ರತಿಮನೇದಶಿರೋಮಣಿಪಂಚವರ್ಣಚಿಂ |
ತನನಿಜಚಿತ್ತಚಿದ್ಘನಶಿವಾರ್ಯಗುರೂತ್ತಮರೆಯ್ದೆ ಸಾದರಂ || ೭೯

ಮಣಿಮಯತೋರಣಂ ಮುಕುರತೋರಣವೊಪ್ಪಿರೆ ಮಂಗಳಧ್ವಜಂ |
ಕುಣಿಯೆ ಗಜವ್ರಜಂ ರಥಪದಾತಿತುರಂಗಮಸಂಘಮುಲ್ಲಿ ಸಂ ||
ದಣಿಗೊಳೆ ಭೂರಿಭೇರಿಯಘನಸ್ವನವೊಂದೆ ದಿಗಂತಮಂ ಗುರು |
ಪ್ರಣತಿಸಮುತ್ಸುಕಂ ಮುದದಿನಂದಿದಿರ್ಗೊಂಡನವಂ ನರಾಧಿಪಂ || ೮೦

ವ|| ಅಂತಿದಿರ್ಗೊಂಡು ಕಟ್ಟಿದಿರೊಳ್ಕಂಡು ಪುಷ್ಪಾಂಜಲಿಗೆದರ್ದು ಸಾಷ್ಟಾಂಗಪ್ರಣತನಾಗಿ ಸಾತ್ವಿಕಂ ಮಿಗೆ ನಿರೀಕ್ಷಿಸಿ ನಿಜಹೃದಯನಳಿನಮಿನ್ನೈವರ

ಮಿಂತಿರ್ದುದೆಂದರಿಪುವಂತೆ ಕರಕಂಜಮಂ ಮುಗಿದು ನಲವಿಂ ನುತಿಗೈದು ಪರಮಾನಂದಂ ಮಿಗೆ ಪರಕೆಯುಂ ಕೈಕೊಂಡು ಕೃತಾರ್ಥತೆಯನಪ್ಪುಕೈದು ಕನಕಮಯಸುಖಾಸನನೊಳ್ಕೈಗೊಟ್ಟು ಮೂರ್ತಿಗೊಳಿಸಿ, ಮಕುಟವರ್ಧನರ್ಬಳಸಿ ಬರೆ ಮಹೋತ್ಸವಂಬೆರಸು ಧರ್ಮಮಂ ತಪ್ಪದಾನದಂತೆ ಜಸಮಂ ತಪ್ಪಜಯದಂತೆ ಸುಖಮಂ ತಪ್ಪಸುಕೃತದಂತೆ ಸಾಹಸಮಂ ತಪ್ಪಸತ್ವದಂತೆ ವಿನಯಮಂ ತಪ್ಪವಿವೇಕದಂತೆ ಪರಿಮಳಮಂ ತಪ್ಪಪವಮಾನನಂತೆ ಶಿವನೊಲವಂ ತಪ್ಪಶಿವಯೋಗದಂತೆ ಗುರುಕುಲೋತ್ತಂಸನಂ ನೃಪಕುಲೋತ್ತಂಸನಂತಃಪುರಕ್ಕೊಡಗೊಂಡು ಬಂದು, ಮಣಿಖಚಿತ ದಿವ್ಯಸಿಂಹಾಸನದೊಳ್ಮೂರ್ತಿಗೊಳಿಸಿ ಪರಿಮಳೋದಕದಿಂ ಪಾದಪ್ರಕ್ಷಾಳನಂಗೆಯ್ದು ಸಾದರಂ ಮಿಗೆ ಪಾದತೀರ್ಥಮಂ ತಳೆದು ವಿವಿಧೋಪಚಾರಂಗೈದು ಸಚಿವನುಂ ತಾನುಂ ಸಮುಚಿತಾಸನದೊಳ್ತದನುಜ್ಞೆಯಿಂ ಕುಳ್ಳಿರ್ದು ಬಳ್ಳಿವರಿವಭಕ್ತಿಗಡಪ್ಪಗಿ ತದೀಯಕಟಾಕ್ಷರುಚಿರರುಚಿಸಾಂದ್ರಚಂದ್ರಿಕೆಯಿಂದಾನಂದಸುಧಾಬ್ಧಿ ತೆರೆಮಸಗಿದಂತೆ ಪಲ್ಪೊಳಗುಪಸರಿಸೆ ಮೆಲ್ಲನಿಂತೆಂದಂ.

ವೃ|| ಪಾವನದೇಶಿಕಾನ್ವಯಪಯೋಜನದಿನೇಶ್ವರ ನಿಮ್ಮಪಾದಸಂ |
ಸೇವನೆಯಿಂದರಲ್ದುದು ಮದೀಯಮನಃಕಮಳಂ ವಿವೇಕಮೆಂ ||
ಬಾವಿಮಳಾಕ್ಷಿಗಾದುದವಿಳಾರ್ಥಸಿರೀಕ್ಷಣಮಿಂದು ಧನ್ಯನ |
ದ್ಭಾವಮನಾಂತೆನೆನ್ನವೊಲದಾರ್ಕೃತಕೃತ್ಯರಿಳಾತಳಾಗ್ರದೊಳ್ || ೮೧

ಕಂ|| ಎನೆ ಕೇಳ್ದು ಹರಿಸಮೊಗೆತರೆ |
ಮನಕ್ಕೆ ಕರುಣಾವಲೋಕನಂಗೈದೆಲೆಭೂ ||
ವನಿತೇಶ ನಿನ್ನ ಮನದ |
ಷ್ಟನಿಯೋಜನೆಗೆಯ್ದೆವಾವುದದನರಿಪೆಂದರ್ || ೮೨

ವ|| ಎನೆ ಮುದಂಬಡೆದು

ಕಂ|| ದೇವಜಯಸಿದ್ಧವುದು ಮ |
ಹ್ಯಾವಂ ಭವದೀಯವದನದಿಂ ತಿಳಿದಪೆನೆಂ ||
ದಾಂ ಮುಳಮೆನಿಪಶಿವಲೀ |
ಲಾವಳಿಯಂ ಪೇಳ್ವುದೆನಗದಂ ದಯೆಯಿಂದಂ || ೮೩

ವ|| ಎಂದು ಭಕ್ತಿಭರದಿಂ ಪುತ್ರವರಮಂ ಬೇಳ್ಪುದಂ ಮರೆದಿಂತೆಂದು ಬಿನ್ನಪಂಗೆಯ್ದನರೇಂದ್ರನ ಒಗೆಗೆ ಮೆಚ್ಚಿ ಸಂತಸಂಬಟ್ಟು ಸೋಡುಂ ನಿರೀಕ್ಷಿಸಿ ನಿಖಿಳ ಶ್ರುತಿಪುರಾಣಾಗಮಸಾರಮಪ್ಪ ಶಿವಲೀಲೆಯುಮಂ ಪೇಳಲುಜ್ಜುಗಿಸಿ,

ಕಂ|| ಹೃದಯಕಮಳದೊಳೆ ನೆಲಸಿದ |
ಮದನಾರಿಯ ಮಕುಟದಗ್ರದೆಳವೆರೆಗವಿರು ||
ಣ್ಮಿದುದೆನೆ ಪಸರಿಸೆ ವಿಳಸ |
ದ್ರದನದ್ಯುತಿ ನೊಗದೊಳಾಗಳವರಿಂತೆಂದರ್ || ೭೪

ಸ್ರ|| ಮೊದಲೊಳ್ ನಿಷ್ಕಳಮಾಗಿ ನಿರ್ವಿಕೃತಿಯಿಂ ತಾನೊಂದೆ ಸಚ್ಚಿತ್ಸುಖಾ |
ಸ್ಪದಲಿಂಗಂ ಸತತಮಾಗಿ ಪೂರ್ಣಪುರುಷಟ್ತ್ರಿಂಶತ್ಪರಂ ಶಕ್ತಿಯಂ ||
ಗದ ಸಂಪರ್ಕದೆ ಗಟ್ಟಿಗೊಂಡತಿಶಿನೆಯ್ದಂತಾಮಹೇಶತ್ವಮಾಂ |
ತದು ತದ್ದೇಹದೊಳೊಲ್ದು ತಾಳ್ದುದುರುಲೀಲಾಜಾಲಮಂ ಭೂಮಿಪಾ|| ೭೫

ವ|| ಅದೆಂತೆಂದೊಡೆ

ಸ್ರ|| ಸುರಗೌರೀರೊರ್ವರಪ್ಪ ದಕ್ಷನೊಸದಿರ್ಪ್ಪತ್ರೇಳ್ಸನೂಜಾತೆಯ |
ಸ್ವರಿಯೊಂಬಿಂತಿರೆ ಕೂಡಿರೆಂದು ಕುಪಿತೆ ಮಾರುತ್ತೊರ್ಪ್ಪಿನೊಳ್ ಪ್ರೀತಿ ಸಂ ||
ದಿರೆ ಶಾಪಂಗುಡೆ ಕಂದಿ ಕುಂದಿ ತಪಮಂ ತಾನಾಂತಿರಲ್ಮೆಚ್ಚಿ ಶಂ |
ಕರನಾಕಾಶನದೀಮೃಣಾಳಮೆನೆ ತಚ್ಚಂದ್ರಾರ್ಧಮಂ ಸೂಡಿದಂ || ೭೬

ಮಂದಾರಾಮಳಪುಷ್ಪದೊಳ್ಬಿರಮಳಂ ಶ್ರೀದೇವಸದ್ರತ್ನದೊ |
ಳ್ಚಂದಂಬೆತ್ತೆಸೆದಿರ್ಪ್ಪಕಾಂತಿ ನೆಲೆಗೊಂಡಿರ್ಪ್ಪಂತೆ ತನ್ನೊಳ್ಸದಾ ||
ನಂದಂಬೆತ್ತೆಸೆವಿರ್ಪ್ಪಮಾರಮಣಿಯೊಳ್ಕೂಡಿರ್ದ್ದಜಾಂಡಂಗಳಂ |
ಕಂದರ್ಪಾರಿ ಸಿಸೃಕ್ಷೆ ಸಾಕ್ಷೆ ಸುಮನಸ್ಸಂಪ್ರೀತಿಯಂ ಮಾಡಿದಂ || ೭೭

ಒಮ್ಮೆ ಜಗತ್ತ್ರಯಕ್ಕೆ ಲಯಮಂ ರಯದಿಂದೆ ನೆಗಚ್ಚಿ ತನ್ನ ಜಿ |
ದ್ಧರ್ಮಮನಕ್ಕರಿಂ ನೆನೆಯೆ ತಾಂ ವೃಷಭಾಕೃತಿಗೊಂಡು ಮುಂದಿರಲ್ ||
ಕೂರ್ಮೆಯೊಳೇರಿ ಸಿಂದನಿದು ಚಿತ್ರಮಿಳಾತಳದಲ್ಲಿ ಧರ್ಮಮೋ |
ಬ್ಧರ್ಮದೊಳಿರ್ಪ್ಪನೆಂದು ವಿಬುಧರ್ಪ್ಪೊಗಳುತ್ತಿರೆ ಪಾರ್ವತೀಶ್ವರಂ || ೭೮

ಸ್ಫೂರ್ಜದ್ಗರ್ಜದ್ಘನಾಡಂಬರರವಡಮರುಧ್ವಾನಮಿಂಬಾಗೆ ಗಂಗಾ |
ವಾರ್ಜಂಗಳ್ಸೀಕರಂಗಳ್ಸುರಿಯೆ ಮೊರೆಯೆ ಸರ್ಪಾಳಿ ಜಂಪೇಭಚರ್ಮಂ ||
ಪರ್ಜನ್ಯಾಭಂ ಕಟೀಮಂಡಳದೆ ಪೊಡರೆ ಕಾಲಾನಲಾಕ್ಷಿಸ್ಫುರದ್ರೋ |
ಚಿರ್ಜಾಲಂ ಪೊಣ್ಮೆ ದಿಗ್ಭಿತ್ತಿಗಳೊಡೆಯೆ ಹರಂ ತಾಂಡವಂಗೆಯ್ಯುತಿರ್ದ್ದಂ |

ತಪಮಿರ್ಪ್ಪದ್ರಿಜೆಯಲ್ಲಿ ಗೆಯ್ದು ವಟುವೇಷಂಬೊತ್ತು ನಾನಾಪ್ರಪಂ |
ಚಪರಾಲಾಪಮನಾಡಿ ನೋಡಿ ಮನಮಂ ಮಚ್ಚುತ್ತೆ ಪೋಗೆಂದು ತ ||
ದ್ವಿಪುಳಾವಾಸಕಲಂಪಿನಿಂ ಕಳುಸಿ ಬಂದಾನಂದದಿಂ ನಿರ್ಜರಾ |
ಧಿಪರೇಳ್ತಂದಿರೆ ಶಂಭು ಕೂರ್ತ್ತು ಪಸೆನಿಂದಂ ತನ್ಮಹಾದೇವಿಯೊಳ್ || ೯೦

ಅಧರಿತಮನ್ಮಥಾಕೃತಿ ಮನೋಹರಮೂರ್ತಿ ವಿಳಾಸವಾಂತು ಒಂ
ದಧಿಗತರೂಪಯೌವನಸುರೇಂದ್ರಪುರೀಸುದತೀಪಿತಾಸಮಂ |
ಮಧುಸಖಬಾಣಪಾತಕೊಳಗಾಗಿಸಿ ಭಿಕ್ಷೆಯನಲ್ಲಿ ಬೇಡುತುಂ |
ವಿಧುಧರನೊರ್ಮ್ಮೆ ತಾಳ್ದನಧಿಕೋತ್ಸುಕ ಭಿಕ್ಷುಕಲೀಲೆಯಂ ನೃಪಾ || ೯೧

ಅಂಬಿನ ಶತ್ರು ಸತ್ತಿಗೆಯುದರ್ಕ್ಕಗಿದಿರ್ಪ್ಪರಥಂ ನಿಜಾಶ್ವಮಾ |
ಲಂಬಿಸೆ ಕೋಡೊಳಿಟ್ಟು ಪೊರೆವಾನೆಯುದಂ ಮುದವೇರಿಪಾತನೇ ||
ನಂಬುಗೆವೆತ್ತಮಂತ್ರಿ ಗುಣಮಂ ಪರಿಪಾಲಿಪಬಿಲ್ಬಲಂ ತದ |
ಸ್ತ್ರಾಂಬಕಿಯಾಗಲೆಚ್ಚ ಮುಗುಳಂಬನನೀಕ್ಷಿಸಿ ಸುಟ್ಟನೀಶ್ವರಂ || ೯೨

ಶ್ವೇತನೆನಿಪ್ಪಪಾತಕಿ ವಣಾಂಗನೆಗೆಂದರಲಂ ತರುತ್ತೆ ಧಾ |
ತ್ರೀತಳದಲ್ಲಿ ಪೇಳೆ ಗಿರಿಶಂಗೆ ಸಮರ್ಪಣಮೊಂದಸ್ಸೈಪು ರಂ ||
ಭಾತರುಣೀರತಂಗುಡಲವಳ್ಮಿಗೆ ಬೋಧಿಸೆ ತನ್ನನರ್ಚ್ಚಿಸಿ |
ಪ್ಪಾರ್ತನನೊಯ್ಯಲೈದಿದಕೃತಾಂತನನರ್ದ್ದಿಸಿದಂ ಮಹೇಶ್ವರಂ || ೯೩

ನಾರಿ ಶರಂ ತದಂಗಜನೆ ಸಾರಥಿ ತತ್ಪದಶತ್ರುಮಿತ್ರರೇ |
ಸೇರಿದಗಾಲಿಗಳ್ತದಹಿತಂ ಪೆಡೆ ತದ್ಧೃತಮೇ ರಥಂ ತದಾ ||
ಧಾರಮೆ ಬಿಲ್ತದಗ್ರಚರತೃಷ್ಟಿವಿಧಾಯಕಮಶ್ವಮಾಗೆ ತ |
ಜ್ಜೋರಸಜಾತಿಜಾತಪುರಮಂ ಪುರವೈರಿ ಕನಲ್ದು ಚುರ್ಚ್ಚಿದಂ || ೯೪

ವರಕಂಜೋದ್ಭವನಿಂ ವರಂಬಡೆದು ದಿಕ್ಪಾಲರ್ಕಳಂ ಪೊಯ್ದು ತ |
ತ್ತರುಣೀವೃಂದಮನೆಯ್ದೆ ತಂದು ಸೆರೆಯಂ ದೈತ್ಯಾರಿಯುಂ ಕಟ್ಟಿ ಮೇ ||
ಲಿರದಿಟ್ಟಂದು ಜಲಂಧರಂ ಬರೆ ಜಯಾರ್ಥಂ ವಾರ್ಧಿಯೊಳ್ಚಕ್ರಮಂ |
ಒರೆದಂಗುಷ್ಠದಿನೆತ್ತಿಸುತ್ತೆ ತಲೆಗೊಯ್ದಂ ಶರ್ವನಾಚಕ್ರದಿಂ || ೯೫

ಪುಟ್ಟಿಪೆನೀಜಗತ್ತ್ರಯಮನೆನ್ನೊಳ್ ವಿಶ್ವಮಿದಿರ್ಕ್ಕುಮಾಗಳುಂ |
ನೆಟ್ಟನೆ ಬೊಮ್ಮವಾನೆನುತಹಂಕರಿಸುತ್ತಿರೆ ವಿಷ್ಣು ಪೇಂದಮಂ ||
ಪುಟ್ಟಿಸಿದಾತನೆಮ್ಮಸಭವಂ ಪರಬೊಮ್ಮವೆನಲ್ಕನಲ್ಕು ಜೊ |
ಬ್ಬಿಟ್ಟೊಡೆ ಬೊಮ್ಮನೊಂದುತಲೆಯಂ ಪರಿದಾಂತನಪಂ ಸದಾಶಿವಂ || ೯೬

ದಕ್ಷನೊಡಜ್ಜರ್ ಮಾರಣಮಹಾಮಖಮಂ ನಿಜವೈರದಿಂದೆ ಕೇ |
ಳ್ದಕ್ಷಯರೂಪೆ ತತ್ಸುತೆಯೆನಿಪ್ಪುದನಂಬಿಕೆ ಪೋಗಿ ನೀಗೆ ಕೇ ||
ಳ್ದಾಕ್ಷಣಮುಗ್ರಮೂರ್ತಿದಳೆದೆಯ್ದಿ ತದಾಪ್ತರನಿಕ್ಕಿ ಸೊಕ್ಕಿರ್ದಾ |
ದಕ್ಷನ ಮಸ್ತಕಂಗಡಿದು ವೀರಸಮಾಹ್ವಯನಾದನೀಶ್ವರಂ || ೯೭

ಘೋರಹಿರಣ್ಯಕಾಕ್ಷರುಧಿರೋನ್ಮದಿರಾಮದಮತ್ತನಾಗಿ ದೈ |
ತ್ಯಾರಿ ನೃಸಿಂಹಮೂರ್ತಿದಳೆದರ್ದಿಸುತಂತಿರೆ ಲೋಕಮಂ ಮನೋ ||
ಜಾರಿ ವಿಚಾರಿಸುತ್ತೆ ಶರಭಾಕೃತಿದಾಳ್ದಿರದೈದಿ ನೀಳ್ದು ರ |
ಕ್ತಾರುಣಚರ್ಮಮಂ ತಳೆದತಿದ್ಯುತಿ ತತ್ತ್ವಮುಮಂ ಕಳಲ್ಚಿದಂ || ೯೮

ಕ್ಷೀರಾಂಭೋರಾಶಿಯೊಳ್ಶ್ರೀಪತಿಯುರೆಬಿಸಿಯೇಳ್ತಂದು ಯುದ್ಧಂಗುಡಲ್ತ
ಳ್ತೋರೋರ್ವ್ವಪ್ಪಾಶುಪತ್ಯಾಸ್ತ್ರದಿನಿಡೆಪಿಡಿಯಿಂಬೇಯು ಲೋಕಂಕೃಪಾಕೂ||
ಪಾರಂ ವಾರಾಶಿಯೊಳ್ಪಜ್ಜಳಿಸಿ ಬಳೆದು ತಸ್ಮಧ್ಯದೊಳ್ಲಿಂಗರೂಪಂ |
ಸಾರುತ್ತಂದರ್ಧನಾರೀಶ್ವರನವಗರ್ಬಿಳಗ್ಗಳ್ಕಿಂ ತಣ್ಪುಗೈದಂ || ೯೯

ಮಗಳೆಂದೀಕ್ಷಿಸದಂಟೆಭಾರತಿ ಮೃಗೀರೂಪಿಂದವಳ್ಜಾರೆ ತಾಂ |
ಮಿಗೆ ತನ್ನೊಂದುಪಶುತ್ವಮಂ ಪ್ರಕಟಿಪಂತಾಂತಲ್ಲಿ ತದ್ರೂಪಮಂ ||
ಬಗೆಗೊಂಡಟ್ಟಲವಳ್ಶಿವಂಗವಿದಿಡಲ್ಭಾವಕಾರದಿಂ ಪೇದಮಂ |
ಘ್ರಗಳಂ ಘ್ರಾಣಿಸುತೆಯ್ದೆ ತಚ್ಛಿರಮನೆಚ್ಚಂಕೇಳ್ಕಿರಾತೇಶ್ವರಂ || ೧೦೦

ಅರಡಿಗೊಂಡು ಮೂರಡಿಯನಾಬಲಿಯಿಂ ಬಲಿಗೊಂಡು ಭೂಮಿಯಂ
ಮೂರಡಿಯನಾಂತು ಮೂರು ಬಳೆದಿತ್ತನಸಿಕ್ಕಿ ರಸಾತಳಕ್ಕೆ ಸಿಂ ||
ದಾರಡಿವಣ್ಣದಾಗಸಕೆ ಕಾಲಿದೆ ಬಂಡಿಸೆ ಬೊಮ್ಮನಿಟ್ಟಸೀ |
ಮ್ಮಾರ್ಗದುಯಿಂದೆ ಕೊಲ್ವನನೆ ಕೊಂಡವನಸ್ಟಿಯನಾಂತನಾಹರಂ || ೧೦೪

ಸುಮ್ಮಾನದಿಂದೆ ಸೂತ್ತಿ ಶಿವಲಿಂಗಮನರ್ಚಿಸಿ ಧೇನುವೃಂದಮಂ |
ಚಾಣ್ಟಿಗೆ ತಂದು ಪಾಲ್ಗರೆಯೆ ಕೇಳೊದೆಯುತ್ತಿರೆ ತಂದೆ ಬಂದದಂ ||
ಪೂಣ್ಮೆ ಕನಕ್ಕೆ ಸ್ಟಿಗೊಡಲಿಯಿಂದವನಂ ಪೊಡೆದಿಕ್ಕೆ ಮಿಕ್ಕ ಕೈ |
ಗಣ್ಮೆದಹಂಡಹನ್ನಸುತನೆಂದು ಗಣೇಶತೆಯಿತ್ತನೀಶ್ವರಂ || ೧೦೫

ದೂರ್ವಾಸನಂ ಬಂಧುಸಿಮಾರ್ಗಮನಸುರವರಂಗಿಯೆ ತಾನೊಲ್ಲದಿರ್ಪಾ
ಗರ್ವಂಗಂಡಬ್ಧಿಯೊಳ್ಮೇಣ್ಣಿರಪ ಸಿರಿಯುಸಿರಾಜ್ಯಿಯಿಂ ಶೇಷನಂ ತಂ ||
ದುರ್ವಾರ್ಧ್ಯಕ್ಕೃಷ್ಟ ಮತ್ತುತ್ತ್ಮಿಡನೆ ಕನೆಯ ದೇವಾಳಿ ದೇವಮ್ಮರ್ಗಹಾಳಾ
ಪೂರ್ವಂ ಪ್ರಟ್ಟಿದ್ರ್ಗಮೃತ್ಯುಪ್ರಭವಿಷಮನದಂ ಕಂಠದೊಳ್ಪೂರ್ವನಾಂತಂ|| ೧೦೬

ಸುರರಿಪುಬಾಧೆಗಳ್ಗೆ ತೆ ಮುರಾರಿ ಪುರಾರಿ ಪದಾರವಿಂದಮಂ |
ಸರಸಿಜದಿಂ ಸಹಸ್ರದೆ ಸಮರ್ಚಿಸದೇಕೆಯೊಳೊಂದು ಕುಂದೆ ಕ ||
ಣ್ಣೆರಲಿನಸೂನಭಕ್ತಿಭರದಿಂ ತೆಗೆದೇರಿಸೆ ಮುಚ್ಚಿ ಚಕ್ರಮಂ |
ಸುರಪಜಲೋಜನಾಬ್ಜಮನಮರ್ತ್ಯನಮೋಘರಸಿತ್ತನುರ್ವರಾ || ೧೦೭

ವಾರಣದೈತ್ಯಸ್ತ್ರೀರ ವರವಾರಣಪಕ್ಷನನೊಲ್ಲು ದೆತ್ತು ದಿ |
ವ್ಯಾರುಣರಕ್ತಮಂಡನಮುಸಿತ್ತು ಚತುರ್ದಶಮನ್ಯಗಗ್ಗಿಮಂ ||
ಕಾರಣಸಂಬವ್ರೋಲ್ಮಗಳ್ಗೆ ಕಟ್ಟೆ ಗಣಾಧಿಪಪಟ್ಟಮಂ ಭವ್ರೋ |
ತ್ತಾರಣಸಂಚಪಕ್ಷ್ಮನೆಸೆದಂ ಕನಕಾದ್ರಿಯೊಳ್ಪ್ರಚಾಸ್ಪಿತಂ || ೧೦೮

ಅಸುರಪ ಬಾಧೆಗಳ್ಗತಿಪಿಯಂ ಕರೆದಟ್ಟೆ ಮೃಡಂ ಮೃಡಾನಿಯೊ
ಳ್ನುಸಿಲಿನಪಲ್ಲಗೆಯುತ್ತೆ ತದುದ್ಧವರ್ವಮನಿಂಪಿ ವಸ್ತಿವ ||
ಕ್ಷ್ಮನುತಿ ಗರ್ಭವಾಂತು ಶರದೊಳ್ ಶಿರಂಕೊರೆದಿಕ್ಕೆ ಕೃತ್ತಿಕಾ |
ಪಿಸರಪಿವರ್ಧಿತಂ ಗುಹನಮಾಪ್ತಯನೊಪ್ಪಿದನಾಮೃಡಾಂಕದೊಳ್ ||೧೦೯

ವೃ ಎನೆ ಕೇಳ್ದಾನಂದದುಗ್ಧಾಂಬುಧಿಯೊಳೆಮುಳುಗುತ್ತೀಳ್ದವೊಲ್ಕಂಪಮುಂ
[ಬುಂ |
ಮನೆ ರೋಮಾಂಚಂಗಳುಂ ಸಂಜನಿಸೆ ಒಗೆಗಡಪ್ಪಾರ್ಗೆ ಕೌತೂಹಲಂಭೋಂ||
ಕನೆ ತಾನೇಳ್ದಂಘ್ರಿಪದ್ಮಕ್ಕಮರ್ದು ಮಣಿದುಬಾಳ್ದಂಕೃತಾರ್ಥಾತ್ಮನಾದೆಂ|
ಮುನಿಮುಖ್ಯಾರಾಧ್ಯ ನಿಮ್ಮಿಂದೆನುತೆ ನುತಿಸುತುಂಮಂತ್ರಿ ಯುಂತಾನುಮಿ
[ರ್ದ್ದರ್ ||೧೧೩

ಸಾರಸಾರಸಮಾನಲೋಚನಕಾಂತಕಾಂತಿಯುತಾನನೇ |
ಭೂರಿಭೂರಿಪುಸಂಘಸಂಹೃತಿಶಕ್ತಿಶಕ್ತಿಸಮನ್ವಿತೇ ||
ಮಾರಮಾರಣದಕ್ಷದಕ್ಷಮುದಾಪಹಾಂಕವಿರಾಜಿತೇ |
ಧೀರಧೀರತಿಪಾಲಪಾಲನಶೀಲೆ ಪಾಲಿಪುದಂಬಿಕೇ || ೧೧೪

ಗದ್ಯ || ಇದು ವಿನಮದಮರವರಮಕುಟತಟಘಟಿತಮಣಿಗಣಮಹಾ
ಪ್ರಭಾಪಟಳಪರಿವೃತಪರಶಿವಶ್ರೀಪಾದನಖಚಂದ್ರಸಾಂಪ್ರರುಚಿರುಂ
ದ್ರಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನಮಾನಿ
ತೋಭಯಕವಿತಾವಿಶಾರದ ಶ್ರೀಷಡಕ್ಷರದೇವವಿರಚಿತಮ
ಪ್ಪರಾಜಶೇಖರವಿಳಾಸವಿಪುಳಪ್ರಬಂಧದೊಳ್ಕಥಾವತ
ರಣಶಿವಲೀಲಾವರ್ಣನಂ ತೃತೀಯಾಶ್ವಾಸಂ
ಸಂಪೂರ್ಣಂ



# ಚತುರ್ಥಾಶ್ವಾಸಂ.

ಕಂ|| ಶ್ರೀಶರ್ವಾಣೀಹೃದಯಕು |
ಶೇಶಯಹಂಸಂ ನಿಜಾಂಘ್ರಿಸೇವಕಜನತಾ ಕು ||
ಪಾಶಹರಂ ಪಶುಪತಿಪರ |
ಮೇಶಂ ಪೊರೆಗೆಮ್ಮನಾವಗಂ ಶಿವಲಿಂಗಂ || ೧

ವೃ|| ಮುಡಿಗಂಪಿಂಗಾದ್ರ್ದಸಾತ್ತ್ವಂದೆರಗೆಪರಮೆಗಳ್ಮಂಜುಮಂಜೀರನಾದ |
ಕ್ಕೊಡನೊಂದೊಂದಾಗಿ ಪಿಂದೈತರೆ ವಿಮಳಮರಾಳಂಗಳಾಳೀಜನಂ ಪಿಂ ||
ಗಡೆಯೊಳ್ಕೃತ್ತ್ಯದೆಶೋಭಾವತಿಮೃದುಗತಿಯಿಂಬಂದುಪೊವಿಲ್ಲಿನಮ್ರಂ |
ಬಡೆವಂತಂಗಂ ಬಳುಂಕಲ್ಮಣಿದಳವರ ದಿವ್ಯಾಂಘ್ರಿಯೊಳ್ದೇವಿಯಾಗಳ್|| ೨

ಕಂ|| ಪರಸಿರದರಧಿಕೋತ್ಸವದಿಂ |
ಗುರುಗಳ್ಮಗುಳ್ದವಳಮನದಭೀಷ್ಟಮನಿಂತೆಂ |
ದಿರದರುದರ್ ಶಿವಶಿವ ಶಂ |
ಕರಶರಣರ ಮಹಿಮೆ ಮಹಿಮೆಗೆ ಸಾಧಾರಣಮೇ || ೩

ಧರಣಿಪನುಂ ಸಚಿವನುಮು |
ಚ್ಚರಿವಡುತಿರೆ ಮಗಳೆ ಬಾರೆನುತ್ತೀಕ್ಷಿಸಿ ಶಂ ||
ಕರನಡಿದಳಿರಂ ಜಾನಿಸಿ |
ತರಳೆಗೆ ಪಂಚಾಕ್ಷರೋಪದೇಶಂಗೆಯ್ದರ್ || ೪

ತರುಣಿ ಭವದೀಯಪುಣ್ಯೋ |
ದರದೊಳ್ಪುಟ್ಟುಗುಮಿನಾನ್ವಯಾಂಬುಧಿಚಂದ್ರಂ ||
ಹರಮಂತ್ರಮಿದನೆ ಜಪಿಸು |
ತ್ತಿರೆ ತಪ್ಪದಿದೆಂದು ದೇಶಿಕಂ ಕರುಣಿಸಿದಂ || ೫

ಎನೆ ನಂಬಿ ನಲಿದು ಮನದೊ |
ಳ್ನನೆಕೊನೆವೋದಳ್ಗುರೂಕ್ತಿಯಂ ಬಗೆಗೊಂಡಳ್ ||
ಜನಪತಿಯ ವದನಮಂ ಕ |
ಣ್ಗೊನೆಯಿಂ ನಡೆನೋಡಿ ನಾಣ್ಚಿ ಮುದಮಂ ತಳೆದಳ್ || ೬

ವ|| ಅನಂತರಂ

ಆದಂಪತಿಯ ಸಪರ್ಯೆಯ |
ನಾದಂ ಕೈಕೊಂಡು ನೆನೆದುದಂ ನೆಗಳ್ದು ಮಹಾ ||
ಮೋದಂ ಮಿಗೆ ನಿಜದೇಶಕೆ |
ಪೋದರ್ಚಿದ್ಘನಶಿವಾರ್ಯರುತ್ತಮಕಾರ್ಯರ್ || ೭

ವ|| ಅಂತವರ್ಪೋಗಲೊಡನಿತ್ತಲ್

ವೃ|| ಶಿವಲಿಂಗಾರ್ಚನೆಗೈವುತುಂ ಶಿವಕಥಾಪೀಯೂಷಮಂ ಕರ್ಣದಿಂ |
ಸವಿಯುತ್ತುಂ ಶಿವಯೋಗಿವೃಂದಚರಣಾಂಭೋಜಂಗಳಂ ಪೂಜಿಸು ||
ತ್ತವರಿರ್ವರ್ಗುರುವಿತ್ತಮಂತ್ರಮನದಂ ಚಿತ್ತಾಂತದೊಳ್ಭಾವಿಸು |
ತ್ತೆ ವಧೂವಲ್ಲಭರಿರ್ದ್ದರುತ್ಸವಯುತರ್ನ್ನಾನಾವಿನೋದಂಗಳಿಂ || ೮

ವ|| ಅಂತಿರ್ಪಿನಮೊಂದು ದಿವಸಂ

ವೃ|| ಮೊಗದೊಳಗೊಂದೆರಳ್ಮೊಡವಿಮೂಡೆ ಬೆಮರ್ನ್ನನುದೋರೆ ಕಾಂತಿ ಕೈ |
ಮಿಗೆ ಕದಪುಜ್ಜ್ವಳಂಬಡೆಯೆ ಮೆಲ್ನಗೆ ಲಜ್ಜೆಯನೊತ್ತುಗೊಂಡು ತಾ ||
ನೊಗೆಯೆ ಘನಸ್ತನಂ ಬಿಗಿಯೆ ಸುಯ್ಬುಸುವಾಂತರೆ ಲೋಚನಾಂಚಲಂ |
ಸೊಗಯಿಸೆ ಕೆಂಕಮಾಗಿ ಸತಿ ಪ್ರಸ್ತುತೆಯಾದಳದೊಂದು ಜಂಕದಿಂ || ೯

ಕರತಳದಲ್ಲಿ ತಾಳ್ದಸೆಳೆಯುಟ್ಟೆಳಗೆಂಪಿನಸೀರೆ ರನ್ನದಾ |
ಭರಣಮುರೋಜದೊಳ್ತಳೆದಕುಂಕುಮಲೇಪನಮಂದವೀಯೆ ಬಿಂ ||
ಬರುಚಿರದಂತವಾಸೆ ವನಿತಾಮಣಿ ಮಾಣಿಕನಾಂತು ಸೋಳ್ಪಭೂ |
ವರನ ವಿಲೋಚನಕ್ಕೆ ಪೊಸಮಾಣಿಕಪುತ್ತಳಿಯಂತಿರೊಪ್ಪಿದಳ್ || ೧೦

ವೃ|| ಜಲಜಾತಾಯತಲೋಚನಂ ಕುಮುದಿನೀಕಾಂತಾನನಂ ಕಾಂತಿಮಂ |
ಜುಲಕಾಯಂ ನವಯೌವನಾಂಕನತಿಸೌಂದರ್ಯಾನ್ವಿತಂ ರಾಜಸಂ ||
ಕುಲದೊಳ್ಮೀರಿದ ನೀರನ್ನೈತರುತುಮಿರ್ಪ್ಪಂ ನೋಡಲೇಳೆಂದು ಪೇ |
ಳೆ ಲಸತ್ಸಿಂಹಳರಾಜನಂದನೆ ಮನಂದಂದೆಳ್ದಳಂದೀಕ್ಷಿಸಲ್ || ೧೫

ಅರಗಿಳಿವಿಂಡು ತೊಂಡುಗೆಡೆಪಂತಿರೆ ನುಣ್ಣುಡಿ ಸೋಗೆ ಸಾಗಿ ಸೈ |
ವರಿಪ್ಪೊಲೊಪ್ಪೆ ಸೋರ್ಮ್ಮುಡಿ ತಳಿತೊರ್ತ್ತಳಪಂತಿರೆ ಕೆಂದಳಂ ಕಳ ||
ಸ್ವರಮದು ಕೋಕಿಲ ಸ್ವರದವೋಲಿರೆ ಬಲ್ಮೊಲೆ ಪೂದೊಡಂಬೆಯುಂ |
ತಿರೆ ಬನಮೆಯ್ದುವಂತೆಸೆಯೆ ಪೆಣ್ಬಡೆ ಬಂದಳದೊಂದುಬಿಂಕದಿಂ || ೧೬

ವ|| ಅಂತು ವನಲಕ್ಷ್ಮಿ ವಸಂತನಂ ನೋಡಲೆಳಸುವಂತೆ ಸುಜನವನವಸಂತನಂ ಭೂಕಾಂತನಂ ಕಾಂತೆ ನೋಡಲೆಳಸಿ ಗಳಿಲನೇಳ್ತಂದು

ವೃ|| ನೆಲೆವೊಲೆಗಳ್ಕದಕ್ಕದಿಸೆ ಸೂಸೆ ಬಳಲ್ಮುಡಿ ಪುಷ್ಪಬೃಂದಮಂ |
ಕಲರುತಿ ಕಿಂಕಿಣೀಕಲಿತಕಾಂಚಿ ರವಂಗುಡೆ ನೂಪುರಂ ಪೊದ ||
ಳ್ದುಲಿಯೆ ನಿತಂಬಮುಂ ಜಡಿಯೆ ತೆಳ್ನಡು ಬಳ್ಕೆ ಸಖೀಕದಂಬಕಂ |
ನಲಿದೊಡನೇರೆ ನೀರೆ ಬಿಡದೇರಿದಳೊಯ್ಯನೆ ರಮ್ಯಹರ್ಮ್ಯಮಂ || ೧೭

ವ|| ಅಂತೇರಲಾಗಳ್ಸಡಗರಿಸುತೊಡನಾರೋಹಿಪಮಡದಿಯರ ಮುಡಿಮುಡಿಗಳೊಡನೊಡನೊರಸಲೊಡನೊಗೆದು ನೆಗೆನವುಡಿಗತ್ತುರಿಯ ಪರಾಗಪಟಲಂ ಪರೆದು ಪರಿಕಲಿಸಿ ಹಸನರುಚಿಚಂದ್ರಿಕೆಗಗಿದು ನೆಗೆವತಮಃಪಟಲದಂತೆ ಪರಿರಂಜಿಸೆಯುಂ ತನುಸಹಜಸರಸಸುರಭಿಗೆರಗಲವ್ವಳಿಪಳಿಪ್ರತಾನದನೂನಗಾನಧ್ವನಿಯನಾಕರ್ಣಿಸಿದಕರ್ಣಮದಕ್ಕೆಮಚ್ಚುಗೊಟ್ಟಪುದೆಂಬವೊಲ್ಕೆಯಿಂ ಕಮಳಕಮನೀಯಕರ್ಣಪೂರಂಜಗುಳ್ದು ಬೀಳುತ್ತಿರೆಯುಂ ಬಿಂಬಾಧರದ ಕೆಂಬೊಳಪಂ ತಳೆದು ಕೆಂಬರಲಂತೆ ತೊಳತೊಳಪನಾಸಾಭರಣಮೌಕ್ತಿಕಂ ಸಂಜೆಗೆಂಪು ಪುದಿದಶುಕ್ರನಂತೆ ಮೆರೆದಲುಂಗುತ್ತುಮಿರೆಯುಂ ತಳತಳಸಿ ಒಳೆದು ಬಳ್ಳಿವರಿದು ಪರೆದು ಪಸರಿಪ ಕಟಾಕ್ಷರುಚಿರರುಚಿಯೆಂಬ ವದನವಿಧುವಿಮಳಪ್ರಭಾಪಟಲಂ ಕನತ್ಕನಕಮಯಮಣಿಭೂಷಣಾಂಶುವಿಸರವಿಸರದರುಣತರುಣಾತಪದೊಳ್ಮಲ್ಲಗಾಳೆಗಮ

ನೊಡರ್ಚೆ ಕಂಡು ಕಡುನಡುಗುವ ಜಕ್ಕವಕ್ಕಿಗಳಂತೆ ನೆಲೆವೊಲೆಗಳ್ಕದಕ್ಕದಿಸೆಯುಂ ಮೃದುಳತರ ಬಾಹಾಮೃಣಾಳನಾಳದೊಳೊಗೆದರವಿಂದದ ಸಿರಿಯನೊಳಕ್ಕೈದಲೀಲಾರವಿಂದದಮಂದಗಂಧಸಂದೋಹಕ್ಕೆ ಮೊರೆದೆರಗುವಿಂದಿಂದಿರಬೃಂದದೊಳ್ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿಯುತ್ತಿರೆಯುಂ ಮದನಮರಾಳನಾಡುವಮಳಲೊಟ್ಟಿಲೆಂಬಂತಿಂಬುವಡೆದ ನಿತಂಬಬಿಂಬಂ ನಿಜಭಾರಮಂ ಪೊರಲಾರದೆ ದಢದಡಿಪಸುಣ್ಗೊಡೆಗೆ ವಿಪುಳತರಕುಚಭರಮಂ ತಳೆದ ಬಡನಡುವಂ ತೋಳಿ ಪುರುಡಿಸಿ ಜಡಿವಂತೆ ಮಣಿಮೇಖಲೆ ಝಣಝಣಿಸುತ್ತಿರೆಯುಂ ಸೋರ್ಮುಡಿಯೆಂಬ ಕಾರ್ಮುಗಿಲಿಂದಿಳಿವನುಗುಳ್ವೆಳಗೆ ಚಿಗುರ್ತು ಸೊಂಪೇರಿದ ಪಸಲೆಯಂತೆಸೆವಸುವರ್ಣೆಯ ಸೋಪಾನಕ್ಕೆ ಪದತಳಮಲಕ್ತಾರಸದಿನಲ್ಲಿಗಲ್ಲಿಗಂದಂಗೊಳಿಸಿದಕೆಂಬರಲ ಸಿರಿಯಂ ನಿರವಿಸುತ್ತಿರೆಯುಮತಿವಿಳಾಸದಿಂ ಯುವರಾಜವದನರಾಜಮಂಡಳದರ್ಶನೋತ್ಸುಕೆಯಾಗಿ ಕುವಲಯಾಕ್ಷಿಯದರಮೇಲ್ನೆಲೆಗೇಳ್ತಂದಾಗಳ್

ಕಂ|| ಅಮಣಿಹರ್ಮ್ಯದಮುಂದಣ |
ಸೋಮಾಶ್ಮದ ವೇದಿಕಾಗ್ರದೊಳ್ನಿಂದವಳ್ ||
ದ್ದಾಮಯನನಾಂಶು ಪಸರಿಸೆ |
ಕೋಮಲೆ ತದ್ರಾಜವೀಧಿಯದನೀಕ್ಷಿಸಿದಳ್ || ೧೮

ವೃ|| ಹಿಮಕರಕಾಂತಿಯಂ ಕವರ್ದುದಲ್ಲದೆ ತನ್ಮೃಗನೇತ್ರಶೋಭೆಯಂ |
ಕಮಳದ ಚೆಲ್ವುಮಂ ಸೆಳೆದುದಲ್ಲದೆ ಮತ್ತದರೊಂದುಲಕ್ಷ್ಮಿಯಂ ||
ಭ್ರಮರದಕರ್ಪುಮಂ ತೆಗೆದುದಲ್ಲದೆ ಮೀಣದು ಪಾರ್ವಲೀಲೆಯಂ |
ಪ್ರಮದೆಯ ಕಣ್ಗಳೀಳ್ದೆಳೆದುಕೊಂಡವೊಲಾದುದು ಕಣ್ಗೆ ನೋಳ್ಪರಾ || ೧೯

ವ|| ಆಪ್ರಸ್ತಾವದೊಳಾರಾಜವೀಧಿಯಲ್ಲಿ

ವೃ|| ತೊಳಪಕಿರೀಟರತ್ನಕರಮಂಬರಮಂ ಮಿಗೆ ಚಿತ್ರಿಸುತ್ತೆ ಕಂ |
ಗೊಳಿಸೆ ಮುಖೇಂದುಮಂಡಳಮರೀಚಿ ವಧೂಸಯನೋತ್ಪಳಂಗಳಂ ||
ಕೆಳೆಗೊಳಿಸುತ್ತಲರ್ಚೆ ನಿಜರೂಪು ಮನೋಜನನಂಗಹೀನನೆಂ |
ದಿಳೆ ನುಡಿವಂತೆ ಮಾಡೆ ನಡೆತಂದನಿಭಾಗ್ರದೊಳಾನರಾಧಿಪಂ || ೨೦

ವ|| ಅಂತು ನಟಿತಪ್ಪಾಗಳ್

ವೃ|| ನಗೆಗಣ್ಗೊಸೆ ಸುಧಾಮರೀಚಿರುಚಿಯುಂ ಘರ್ಮಾಂಭಸಂ ಪೊಣ್ಮೆ ಸು |
ಣ್ಮೊಗದೊಳ್ಚಿತ್ತದೊಳಾಗೆ ಕೌತುಕರಸಂ ಪೀನೋರುಗಳ್ಕಂಪನಂ ||
ಬುಗೆ ಲೀಲಾಕಮಲಂ ಕರಾಂಬುಜದಿನಾಗಳ್ಜಾಸೆ ಕಂಚಾಸ್ತ್ರನಂ |
ನಗುವಂತೊಪ್ಪುವನಂ ಮೃಗಾಕ್ಷಿ ನಡೆನೋಡುತ್ತಿರ್ದ್ದಳಾಭೂಪನಂ || ೨೧

ವ|| ಇಂತನಿಮಿಷದೃಷ್ಟಿಯಿಂ ನಿಂದು ನಿರೀಕ್ಷಿಪ ನವೀಜನಮಧ್ಯದೊಳ್ತ
ನ್ನನನೂನಸ್ನೇಹರಸಭರಭರಿತಕಟಾಕ್ಷದಿನಭೀಕ್ಷಿಸುತ್ತುಮಿರ್ಪ್ಪ

ಕಂ|| ಕಾಮಿನಿಯುಂ ತನುಜಿತನಾ |
ದಾಮಿನಿಯುಂ ಸೌಧದಗ್ರದೊಳ್ಕಂಡನಿಳಾ ||
ಭಾಮಿನಿಯುರಸಂ ಮುರರಿಪು |
ಗೋಮಿನಿಯುಂ ಕಾಣ್ಬವೋಲ್ಸರೋರುಹದೆಸೆಯೊಳ್ || ೨೨

ವ|| ಅಂತುಕಂಡತಿವಿತತಕೌತುಕರಸ ಪ್ರವಾಹದೊಳ್ಮುಳುಂಗಿ ಮೋಹಿಸಿ

ಕಂ|| ಅಮರಾಂಗನೆಯಿವಳಲ್ಲದೊ |
ಡಮೆಯಿಕ್ಕದ ದೀರ್ಘನಯನಮೀಸೌಂದರ್ಯ್ಯಂ ||
ಸಮನಿಪುದೆ ನೋಳ್ಪಡೆಂದಾ |
ರಮಣಿಯನಾನೃಪಕುಮಾರನೀಕ್ಷಿಸುತೆಂದಂ || ೨೩

ಪಡಯದೆ ಬಗೆಗಚ್ಚರಿಯುಂ |
ಪಡೆಯದೆ ನಿಜಸೃಷ್ಟಿಗತುಳತರನವಯಶಮುಂ ||
ಪಡೆಯದೆ ಹರ್ಷಮನತನುಗೆ |
ಪಡೆದನೆ ಕನ್ನಿಕೆಯನೀಕೆಯಂ ಕಮಳಭವಂ || ೨೪

ವ|| ಎಂದು ಬಗೆಯೊಳ್ಬಗೆದು ಭಾವಿಸಿ ಪೊಗಳ್ತೆವಡೆದವಳವಯವ ಸೌಂ
ದರ್ಯ್ಯಮನಾಕಳಾನಿಳಯಂ ಬೇರೆಬೇರೆ ಪರೀಕ್ಷಿಪಾಗಳ್

ಕಂ|| ಆಸರ್ವ್ವಮಂಗಳೆಯ ಶೋ |
ಭಾಸೌಭಾಗ್ಯಮನದಾವನಭಿವರ್ಣಿಪನಾ ||
ವಾಸುಕಿವಾಣೀವರವರ |
ವಾಸವಸಚಿವಗ್ರವಾದೊಡಂ ತೀರ್ದ್ದಪುದೇ || ೨೫

ವೃ|| ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊ |
ಳ್ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿಪುಟ್ಟಿದಂ ||
ದಾವಿಧುಬಿಂಬಮಿಂಬವಳಮಂ ಪಡೆದಂದು ತದಗ್ರದಲ್ಲಿ ಭೃಂ |
ಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ || ೨೬

ಕಂ|| ಕುಸುಮಶರನಸುಗೆಸರಮಂ |
ಮಸೆಯೆ ಸುಧಾಕಿರಣಬಿಂಬಶಾಣೋಪಲದೊಳ್ ||
ಮಸಗಿ ಪನಿಪತ್ತಿ ತುದಿಯೊ |
ಳ್ಮಿಸುಗುವ್ರದೆನೆ ಮೆರೆದುವವಳ ಪದತಳದುಗುರ್ಗಳ್ || ೨೭

ಬಳೆದಪದರ್ತುಂಗಕುಚಗಿರಿ |
ಗಳ ಮರೆಯೊಳ್ಕಾಣದಾಸ್ಯಶಶಿಯಂ ವಿರಹಾ ||
ಕುಳಮೆಳದಳರೊಳ್ತಾರಾ |
ವಳಿ ನಿಂದಪ್ಪೊಲೆಸೆದುದವಳ ಪದನಖನಿಕರಂ || ೨೮

ಅಂದುಗೆಯ ಕಳನಿನಾದದೊ |
ಳೊಂದಿದಸುಂದರಿಯ ಮಂದಗತಿಯತಿಶಯಮಂ ||
ಕುಂದದೆ ಪಾಡೆಂದಜನಂ |
ಬಂದೀಗಳ್ಪೊತ್ತು ಸೇವಿಪುದು ಕಳಹಂಸಂ || ೨೯

ಲಲನೆಯನುಣ್ಗೊಡೆ ತಮ್ಮಂ |
ಗೆಲೆ ಸೋಲ್ತೊಡನೈದಿ ಪೊಕ್ಕು ಭಯಭರದಿಂದಂ ||
ತಲೆವಾಗಿ ನೀರೊಳಿನ್ನುಂ |
ನೆಲಸಿರ್ದ್ದಪುವಲ್ತೆ ಬಾಳೆಗಳ್ಬನದೆಡೆಯೊಳ್ || ೩೦

ಕ್ಕರಿಶಿರದ ಸಿರಿಯ ಸಿರಿಯಂ |
ಪರಿಭವಿಸಿದೊಡವಳ ಸುಘನಜಘನಂ ಮಿಗೆ ತ ||
ತ್ಕರಚರಣಸೋದರಂಗಳ |
ನರುಣಾಂಬುಜಪಲ್ಲವಂಗಳಂ ಪರಿದಿಡುಗುಂ || ೩೧

ಬಡಬಾಸೆಯೆಂಬಸಿತಫಣಿ |
ಯೆಡೆಗೊಂಡುದು ಸಿಂಹವಿಜಯಿಯೆಸಿದ್ಧಿರ್ೀಗಳ್ ||
ಪಿಡಿಗೊಳಗಾದೆನೆನುತ್ತುಂ |
ಬಡವಾಯ್ತೆನೆ ಮಧ್ಯಮೆಸೆದುದಾಮಾನಿನಿಯಾ || ೩೨

ಸ್ತನಕನಕಕಲಶನಿಧಿಯುಂ |
ಮನಸಿಜಸಾಧಕನೆಯುಗುಳ್ದ ನೆಗಪಿದಕುಳಿಯೆಂ ||
ದೆನೆ ಸುಳಿನಾಭಿವಿಳಾಸಾ |
ವನಿ ವನಿತಾಮಣಿಯ ತೆಳ್ಪಸಿರೊಳೆಸೆದಿರ್ಕ್ಕುಂ || ೩೩

ಸುಲಲಿತಜಘನಸ್ಥಳಮೋ |
ಖಲೆಯಗ್ರದೊಳೆಸೆವಮಂಜುಮಣಿದೀಪದ ಕ ||
ಜ್ಜಲರೇಖೆ ನೆಗೆದುದೆನೆ ಕ |
ಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ || ೩೪

ವ|| ಮತ್ತಂ

ಕಂ|| ಜಗಮಂ ಜಯಿಸುವೊಡೀಕೆಯು |
ನಗವೊಗಮೇ ಸಾಲ್ಗುದೆಂದು ಮದನಂ ಧನುವಂ ||
ತೆಗೆದಿಳಿಪಿದಳಿವೆದೆಯೊ ಎನೆ |
ಸೊಗಯಿಸಿದುದು ಬಾಸೆ ತರುಣಹರಿಣೇಕ್ಷಣೆಯಾ || ೩೫

ಸ್ಮರಸಿದ್ಧಂ ಮೋಹನಯುಂ |
ತ್ರಿರಚನೆಯೆನೊಡರ್ಚ್ಚಲೆಂದು ಮೂಗೆರೆದೆಗೆದಂ ||
ತರಳೆಯುದರಪತ್ರದೊಳೆನೆ |
ಕರಮೆಸಗುಂ ತ್ರಿವಳಿ ಕಮಳದಳಲೋಚನೆಯಾ || ೩೬

ತರಳೆಯ ತಿವಳಿಯ ಪೋಲ್ಪೆಯ |
ತರಂಗಮಂ ಪಡೆವೆನೆಂದು ಸುರನದಿ ಪಲವುಂ ||
ತೆರೆಗಳನೆ ಪಡೆದು ಪಡೆಯದೆ |
ಸರಿದೆರೆಯುಂ ಮಾಂಜಿ ಮಗುಳ್ದು* ಪಡೆದಪುದಿನ್ನುಂ|| ೩೭

---

ದದರ್ಕ್ಕೇಣಿ | ವರದೆಂದೇ

ಎಲೆನಡು ಬಡವಾಗದಿರೆಂ |
ದಲರಂಬಂ ಬರೆದಸುಮರಜೋರಕ್ಷೆಯ ನುಂ ||
ಜುಲರೇಖೆಗಳೆಸೆ ಸುರೆಗುಂ |
ವಲಿಗಳ್ಕೋಮಲೆಗೆ ಹಾರರುಚಿರುಚಿರಂಗಳ್ || ೩೮
ಮೊಗಸಸಿ ಪೊಕ್ಕುಗ್ಗಳದಿಂ |
ತೆಗೆದೆತ್ತುತೆ ಕನಕಕಮಳಕೊಳಿಕೆಗಳಂ ತಾ ||
ರಗೆಯಂ ಕಾಪಿಟ್ಟಂದದೆ |
ಸೊಗಯಿಸಿದುವು ಹಾರಮಣಿಯಿನವಳಕುಚಂಗಳ್ || ೩೯
ನವನವಮಣಿಮಯವಾಲಿಕೆ |
ಕವಿದಿರೆ ಕಾಶ್ಮೀರಗಂಧಗೈರಿಕಗತತ ||
ದ್ಯುವತಿಸ್ತನಮಂಡಲಮದು |
ವಿವರಿಸೆ ರೋಹಣಗಿರೀಂದ್ರಮಪ್ಪುದು ಪುಸಿಯೇ || ೪೦
ಎಳೆಯಳ ನಳಿತೋಳಂದಂ |
ದಳೆವೆನೆನುತ್ತಳಸಿ ತಳೆಯುದಳಲಿಂ ಬಳದೊ ||
ಳ್ಮುಳುಗಿತು ಮೃಣಾಳಮಿಷ್ಟಮ |
ನಿಳೆಯೊಳ್ತಳೆ ದೀರ್ಘಸೂತ್ರನೇಂ ಪಡೆದಪನೇ || ೪೧
ಮೃದುಲತೆಯಿಂ ಬಿಸಕಾಂಡದ |
ಮೃದುಲತೆಯಂ ಜಯಿಸುವವಳ ಬಾಹಾಲತೆಯೊಳ್ ||
ಪುದಿದೆಳದಳಿರಂ ಪೋಲ್ತು |
ಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ || ೪೨
ಎಳದಳಿರಂಬಿದು ಮರುನೊನೆ |
ಗೊಳಲಾರದುಧೀರರೆರ್ದೆಯನೆಂದತನುವದ ||
ಕ್ಕಳವಡಿಸಿದನೆನೆ ಕೈತಕ |
ದಳಮಂ ತುದಿಗೊಂಡು ಕರಜಮೊಪ್ಪಿದುದವಳಾ || ೪೩

ನೆರೆವೆರೆಮೊಗದ ಮೃಗಾಕ್ಷಿಯ |
ಮಿರುಗುವನಖರುಚಿಗೆ ಸೋಲ್ತು ಮರನೇರುತ್ತುಂ ||
ಗರಿವೂವಿನ ಕಿರುಗರಿಗ |
ಳ್ತುರುಗಿದಬಹುಕಂಟಕಂಗಳೊಳ್ಸಿಲುಕಿರ್ಕುಂ || ೪೪

ಮುಗುಡೆಯ ಮೊಗದಾವರೆಯುದು |
ಮುಗಿವುದೊ ನಗುವುದೋ ಪರೀಕ್ಷಿಸೆಂದಟ್ಟಲೊಡಂ ||
ಮೃಗಧರನಬ್ಜಮನದನದು |
ಮಿಗೆ ಸೆರೆವಿಡಿದಂತೆ ಕಂಠಮೊಪ್ಪಿದುದವಳಾ || ೪೫

ಹರಿಣನುಮಂ ವೃತ್ತಂ ವಟ |
ತರುವಂ ತೊರೆದಕ್ಷಿಫಣಿಫಲಂಗಳನಾಂತಂ ||
ತಿರೆ ನೇತ್ರಭ್ರೂಬಿಂಬಾ |
ಧರಂಗಳಿಂದವಳ ವದನವಿಧು ಕರಮೆಸೆಗುಂ || ೪೬

ಅರವಿಂದಗ ಸಿರಿ ನೋಣಿರು |
ಳಿರುಳೆರೆಯನ ಸಿರಿಯೆ ಪಗಲೊಳಳಿಗುಮಿವೆರಡಂ ||
ಸರಿಮಾಳ್ಪುದೆಂತೊ ಸಿರಿ ಬಂ |
ದೆರವಿಲ್ಲದೆ ನೆಲಸಿ ನಿಂದತರಳೆಯ ಮೊಗದೊಳ್ || ೪೭

ಎನ್ನಂ ಪಡೆದಂಬುಜಮುಂ |
ಮುನ್ನಂ ಮುಗಿಯಿಪಮೃಗಾಂಕನಂ ಜಯಿಸೆಂದಾ ||
ಕನ್ನೆಯ ಮೊಗಕ್ಕೆ ಕಡುಚೆ |
ಲ್ವನ್ನಿಸಜಸೀಯೆ ಕುಂದುಗುಂ ಕುಮುದಾಪ್ತಂ || ೪೮

ಮುಗುದೆಯ ಮೊಗಸಸಿಯೊಳ್ಬಿದಿ |
ಮಿಗಮಂ ನಿರ್ಮಿಸುವೆನೆಂದು ಬಗೆದದರಂದಂ ||
ಬಗೆವುಗೆ ಮರಳ್ದು ಲೋಚನ |
ಯುಗಮಂ ಸಮೆದಂತೆ ಮೆರೆದುದವಳಲಗಣ್ಗಳ್ || ೪೯

ವಸಿತೆಯ ವದನಶ್ರೀ ಜಂ |
ದನರಸಮಂ ನಳಿನದಳದೆ ತೀವಿದಳೆನೆ ಲೋ ||
ಚನರುಚಿಯಿರೆ ತಾರಕಮದು |
ನೆನೆಯಿಪುದದರೆಡೆಯೊಳೆರಗಿ ತೇಲ್ವಳಿಶಿಶುವಂ || ೫೦
ಸೊಗಯಿಪಸಂಪಗೆಮುಗುಳದು |
ಮುಗುಡೆಯು ಮೂಗಿಂ ಪರಾಭವಂಬಡೆದಳಲಿಂ ||
ಮೃಗನಯನೆಯ ಕುರುಳೊಡನಾ |
ಡಿಗಳೆನಿಪಳಿಗಳನೆ ತಗುಳ್ವದಿನ್ನುಂ ಮುನ್ನುಂ || ೫೧
ಉದಯಿಪಪೂರ್ಣೇಂದುವ ಕೆಂ |
ಪೊದವಿದ ಕಳೆದೆಗೆದಮುಚ್ಚಿದಂತೆವೊಲೆಸೆಗುಂ ||
ಸುದತಿಯ ಬಾಯ್ದೆರೆಯೊಸರ್ದಮೃ |
ತದ ಪನಿಗಳ ಪಙ್ಕ್ತಿಯಂತೆ ಪಲ್ಗಳ್ಮೆರೆಗುಂ || ೫೨
ಜೆಂದಳಿರ್ದಂಪಂ ಬಿಂಬದೊ |
ಳೊಂವಿದಕೆಂಪಂ ಪಯೋರಸದೊಳಮುರ್ದಿಂಪಂ ||
ಕುಂದದ ರನ್ನದಲಂಪಂ |
ತಂದೊಂದೆನಿಸಿದವೊಲಧರಮೊಪ್ಪಿದುದವಳಾ || ೫೩
ಅಲರದಕುಂದದ ಜಂದದ |
ಸುಲಲಿತಕುಟ್ಮಳಮನಾಯ್ದು ತೊಯ್ದುಮರ್ದಿನೊಳಾ ||
ಲಲನೆಯ ಜೆಂದುಟಿದಳಿರೆಡೆ |
ನಲಿನಜನಿಟ್ಟಂತೆ ದಂತಮೇಂ ರಂಜಿಸಿತೋ || ೫೪
ಕಿವಿದೊಡವಿನಮುಕ್ತಾತತಿ |
ನವೋಡುಗಣಮೆನಿಸೆ ಕರೆಯೆ ಮಕರಿಕೆಯೆನೆ ತ ||
ದ್ಯುವತಿಯ ನಯನೋತ್ಪಳದಂ |
ದವನೀಕ್ಷಿಸಲ್ಕೆದಿದಿಂದುವೆನೆ ಕದಪೆಸೆಗುಂ || ೫೫

ಕುರುಳೊಳ್ತೀವಿದ ಕತ್ತುರಿ |
ಯ ರಜಂ ಮೊಗರಸದೊಳುದಿರ್ದು ನರುಸುಯ್ಯೆಲರಿಂ ||
ಪರೆದು ತೆರೆಮಸಗಿ ನಿಂದಂ |
ತಿರೆ ಕೊಂಕಿಂ ಭ್ರೂಯುಗಂ ವಿರಾಜಿಪ್ಪುದವಳಾ || ೫೬

ಸೆರೆವಿಡಿದುದು ಮುಖಕಮಳಂ |
ಪೆರಪಿಂಗದು ಚಿಕುರತಿಮಿರಮೆನ್ನನಿದೆಂದೇಂ ||
ಮರುಗಿ ಬಡವಾದನೋ ಪೇ |
ಳ್ನಿರವೆರೆಯನೆ ಪೆರೆನೊಸಲ್ಮೃಗೇಕ್ಷಣೆಗೆಸೆಗುಂ || ೫೭

ಅಗಲದೆ ಮೊಗದಾವರೆಯೊ |
ಳ್ಸೊಗಯಿಪ ಪಮ್ಮುಗಮುದಲಲಾಮುಮಧುಪದ ಶಿಶುಗಳ್ ||
ಬಗೆಗೊಳಿಸಿ ಬಳಿಯೊಳಾಡುವ |
ಬಗೆಯೆನಿಸಿದುದವಳ ಪಣೆಯೊಳೊಲೆವಳಕಂಗಳ್ || ೫೮

ವನಿತೆಯ ತನುತನುಹರಿಣಂ |
ದನಶಾಖೆಯನಡರ್ದು ಬಾಸೆಸಿಸುವಲ್ಲಿದುದೆಂ ||
ದೆನುತೆರಗಿ ನೋಳ್ಪಭುಜಗಾಂ |
ಗನೆಯೆನೆ ಘನವೇಣಿ ಜಾಣೆಗೇನೊಪ್ಪಿದುದೋ || ೫೯

ವ|| ಅಂತುಮಲ್ಲದೆಯುಂ

ವೃ|| ಹಿಮಕರಬಿಂಬವಕ್ತ್ರೆಗೆ ಮೃಗಾಯುತಲೋಚನಮುಬ್ಜಗಂಧಿಗು |
ತ್ತಮಮದಭೃಂಗಕುಂತಳಮುದಾರಶುಕೀಮೃದುವಾಣಿಗಚ್ಛದಾ ||
ಡಿಮರದನಾಳಿ ಶೈಲಜಘನಸ್ಥಳಿಗೊಪ್ಪುವಸಿಂಹಮಧ್ಯಮೊ |
ಪ್ಪಮನಿರದೀವುದಚ್ಚರಿಯೆ ಕೋಕಕುಚದ್ವಯೆಗಬ್ಜಪಾಣಿಗಳ್ || ೬೦

ನುಡಿ ನುಡಿವೆಣ್ಗೆ ಜಾಣ್ನುಡಿಗಳಂ ಕಲಿಸಲ್ಸಲೆ ಸಾಲ್ವುದೊಪ್ಪುವೊ |
ಳ್ನಡೆ ನಡೆವಕ್ಕಿಗಳ್ಗೆ ನಡೆಯಂ ನೆರಪಲ್ನೆರೆದಿಪ್ಪುದೆಯ್ದೆ ಕ ||
ಣ್ಣುಡಿ ಕುಡಿಮಿಂಚನುರ್ಕ್ಕುಡಿಯಲಾಪ್ಪುದು ಬಾಳೆಯ ಭಾಳವರ್ಣಮಂ |
ತೊಡೆ ತೊಡೆದಪ್ಪುದಾಂತೊಡೆ ಶುಭಾವಹಭಾವಭವಾಧಿದೇವಿಯಾ || ೬೧

ವ|| ಮತ್ತಮಾತರುಣಿ ಗಿರಿಸುತೆಯಂತೆ ಶಶಿಕಳಾಧರೆಯುಂ ರಮೆಯಂ
ತೆ ತನುಜನ್ಮಸ್ಥಳಿಯುಂ ಭಾರತಿಯಂತೆ ಪದ್ಮಜಾತ್ಯಾಮೋದಾವಹೆಯುಂ ವನ
ಸ್ಥಳಿಯಂತೆ ಪೃಥುಲಕುಚಾಲಂಕೃತೆಯುಂ ನರ್ತಕಿಯಂತೆ ಮಂಜುಲಾಸ್ಯಮ
ನೋಜ್ಞೆಯುಂ ಈಶಾನದಿಶೆಯಂತೆ ಸುಪ್ರತೀಕಸಮನ್ವಿತೆಯುಂ ಸುಗ್ರೀವಾಭಿರಾ
ಮೆಯಾಗಿಯುಮಲಂಕಾರಾತಿಶೋಭಿತೆಯು ಮುದಿತಾರುಣಕರೋಲ್ಲಸಿತೆಯಾಗಿ
ಯು ಮಪೂರ್ವಸ್ವಭಾವೆಯುಂ ಧೃತಕುಂಭಜಘನಸ್ಥಿತಿಯಾಗಿಯು ಮತಿಲಾವ
ಣ್ಯನಿಧಾನೆಯುಂ ರಂಭೋರುವಿಭವಾನ್ವಿತೆಯಾಗಿಯುಂ ವಿತತಭೂಮಹಿತಗುಣೋ
ದಯೆಯುಂ ನಳಿನನೇತ್ರವಿಳಸಿತೆಯಾಗಿಯು ಮನಂತಮಣಿಕಿರಣಮನೋಜ್ಞೆ ಸ್ವರ್ಗ
ಮೆನಿಸಿರ್ದಳಂತುಮಲ್ಲದೆ

ವೃ|| ಗತಿಯಿಂದಂ ರಾಜಹಂಸದ್ವಿಜವಿಜಯಿನಿಯಾಗಿರ್ದ್ದ ಮಾತಂಗಮಂ ನಿ |
ರ್ಜಿತಸದ್ವೃತ್ತಾತ್ಮಕಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ ಕ್ಷಣತ್ವಿ ||
ಟ್ಪ್ರತಿಯಂ ಸೌಂದರ್ಯದೂರೀಕೃತಸಕಳವಧೂವೃಂದೆಯಾಗಿರ್ದ್ದ ಭೂಭೃ |
ತ್ಸುತೆ ತಾಂ ಶ್ರೀಪತ್ನಿಯೊಳಿರ್ಪ್ಪ ಸಮನಸನುಮನಂ ಗೆಲ್ದುದಾಶ್ಚರ್ಯಮೋ ದಲ್ ||

ವ|| ಮತ್ತಂ

ವೃ|| ಇದು ಕುಸುಮಾಸ್ತ್ರನಸ್ತ್ರಮಿದು ದರ್ಪಕನಾರ್ಪ್ಪ ಮನೋಜನೋಜೆ ನೋ |
ಡಿದು ನೃಪನಿಲ್ಲ ವಲ್ಲಭನ ಜೆಲ್ವಿದು ಕಾಮನ ಜೀವರತ್ನಮಿಂ ||
ತಿದು ರತಿಕಾಂತನಾಂತ ಪೊಸಕೂರಸಿ ತಾನಿದು ಮಾರವೀರನ |
ಗ್ಗದ ಸದಳಂಕೃತಿಧ್ವಜಮಿದೆಂದೆನಿಸಿರ್ದ್ದುದು ರೂಪು ನೀರೆಯಾ || ೩೬

ಕಂ|| ಕರೆದಳೆಯುದಿಂದುಕಳೆ ಕಳೆ |
ದೊರೆಯುದಚಂದ್ರಿಕೆ ಪಗಲ್ಪಗಲ್ಮಗಿದು ಮುದಂ ||
ಮುರಿಯುದಕೋಮಳೆ ಕೋಮಳೆ |
ಬರೆಯುದಸಿಂಗರದ ಪೊಳೆ ಪೊಳೆಯುತ್ತೆಸೆದಿರ್ದ್ದಳ್ || ೩೭

ವ|| ಇಂತು ನಿರತಿಶಯ ಸೌಂದರ್ಯಮಾಧುರ್ಯಮಂ ಬೀರಿ ಕಾಂತ್ಯೆ ಕಾಂತಿ
ವೆತ್ತು ಕಂಗೊಳಿಸುತ್ತು ಮಿರೆಯಿರೆ

ವೃ|| ಗುರುಜಘನಸ್ಥಳೀಪುಳಿನದೊಳ್ಪರಿದಾಡಿ ವಲಿತ್ರಯೋರ್ಮಿಯೊ |
ಳ್ಪಿರಿದಡಪರ್ದಾಡಿ ನಾಭಿಸುಳಿಯೊಳ್ಸುಳಿದಾಡಿ ತಮಾಲನೀಲಭಾ ||
ಸುರತರರೋಮರಾಜಿನವಶೈವಲದೊಳ್ನಡೆದಾಡಿ ತನ್ನೃಪಾಂ |
ಬುರುಹರಸಪ್ರವಾಹದೆ ಮುಳುಂಗಿದುವಕ್ಷಿಝಷಂಗಳಾತನಾ || ೭೫

ವ|| ಮತ್ತಮಾಗಳ್

ವೃ|| ಲಲನಾನೇತ್ರತ್ರಿಭಾಗಪ್ರಭವತಿತಿರುಚಿಶ್ರೀತರುಗ್ಲೋಹಿತಜ್ಯೋ |
ತಿ ಲಸದ್ಧಾತ್ರೀಶಪುತ್ರಾಂಗದೊಳೆ ಪಸರಿಸುತ್ತಿಯ್ದೆ ಕಣ್ಗೊಪ್ಪಿದತ್ತು ||
ಜ್ಜ್ವಲತನ್ನೇತ್ರಾಂಚಲಸ್ಥಸ್ಮರನಿಸೆ ಪರಿತಂದೊತ್ತಿ ಪಾಯ್ತುರ್ಪನೀಲೋ |
ತ್ಪಲಚಂಚನ್ಮಲ್ಲಿಕಾಶೋಕಪಲಿಖತತಿಯೊಂದೆಂಬಪಾಂಗಿಂದಳುಂಬಂ || ೭೬

ವ|| ಅಪ್ಪುಸತ್ತ್ವವಮಂ ಸಾದ್ವರ್ ಸಂಭ್ರಮಿಸಿ ನಿಂದು

ವೃ|| ಕರ್ಪ್ಪುರನ ಬಲ್ಗೆ ತುಂಬಪೆದಿಯುಂ ಪದೆದೇರಿಸಿ ಗಂಧಗಾಡಿಯಿಂ |
ದುಬ್ಬರ್ ಸರೋಜಕೋರಕದ ಕೂಗ್ಗರ್ಣೆಯುಂ ತನೆ ತೊಟ್ಟುಲಕ್ಷ್ಯಮುಂ ||
ದೋರ್ಬ್ಬಲಕಾಲ ನೋಡಿ ಸಲೆಸಿಕ್ಕಸವಂದಿರನೊವ್ವರ್ ತೊಟ್ಟನಂ |
ದಿಬ್ಬರಗಿಯಾಗಿ ತನ್ಮನಮುಸಂಗಧನುರ್ಧರನಾಕ್ಷಣಾರ್ಧದೊಳ್ || ೭೭

ಕಂ|| ಗಡಿಗೆಟ್ಟುದು ಕಣ್ಬೇಟಂ |
ನಡೆಗೆಟ್ಟುದು ಚಿತ್ತವೃತ್ತಿ ಧೃತಿವಲ್ಲಿ ವಲಂ ||
ಕುಡಿಗೆಟ್ಟುದು ನವವಿರಹಂ |
ತಡೆಗೆಟ್ಟುದು ತನ್ನೃಪಾತ್ಮಜಂಗಾಕ್ಷಣದೊಳ್ || ೭೮

ಅರಸನ ಹೃದಯಪಟಾಭ್ಯಂ |
ತರದೊಳ್ನವರಾಗರಸದಿನಾಕನ್ನೆಯ ನು ||
ಣ್ಬರಿಜಂ ಬರೆದಂಗಜನೇಂ |
ಪರಿಕಿಸೆ ಮುಂ. ಚಿತ್ರಕರ್ಕ್ಕಳೊಡನಾಡಿದನೋ || ೭೯

ವ|| ಆಗಳರಸಂ ತನ್ನೊಳಿಂತೆಂದಂ

ವೃ|| ಬಗೆಯಂ ಬಲ್ಸೆರೆಗೈದುದೀಗಳಿವಳೀಮಾಧುರ್ಯಮೀಮೆಯ್ಯನು |
ಣ್ಬುಗರೀಕಣ್ಗಳಕಾಂತಿಯೀಮುಖಶಶಿಪ್ರದ್ಯೋತಮೀಕಂಜದೊ ||
ಳ್ಮಗುಳಂ ಪೋಲ್ವಕುಚಂಗಳೀಪೃಥುಳವೃತ್ತಶ್ರೋಣಿಯೀಬೇಟದು |
ಜ್ಜುಗಮೀವಿಭ್ರಮಮೀವಿನೋದದೊದವೀ ಸೌಂದರ್ಯಮೀಸದ್ಗುಣಂ || ೭೦

ಕಂ|| ಈಲಲನೆಯ ಸೌಂದರ್ಯಂ |
ಸೋಲಿಸಿದುದು ಗಡ ಮದೀಯಮನವನದಾಗ್ರ್ಗಂ ||
ಸೋಲದುದಂ ಶಿವಶಿವ ಶಿ |
ಮೌಲಿಯು ಮಾಯೆಯನದಾರೊ ಮೀರಲ್ಬಲ್ಲರ್ || ೭೧

ವ|| ಎಂದು ವಿಸ್ಮಯಂಬಡೆದು ಚೆಲ್ಲಿದಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತಸಾರ್ವಭೌಮಂ ಮುಂದಣ್ಗೆ ನಡೆತರುತ್ತುಂ ನಿಜನಯನಪಥಮಂ ಮೀರಲೊಡನೆ

ವೃ|| ಪಡಿದೆರೆದಂತೆ ಪಾರಿತೆರ್ದೆ ಜುಂಮನೆ ಮೈನವಿರುಮ್ಮೆ ಮೂಡಿದ |
ತ್ತಿಡಿಕಿರಿದಿರ್ದ್ದಬಲ್ಮೊಲೆಗಳಿಟ್ಟೆಡೆಯೊಳ್ಬೆಮರುಣ್ಮಿದತ್ತು ಮೇಣ್ ||
ದಡದಡಿಸಿತ್ತು ನುಣ್ದೊಡೆ ರದಚ್ಛದಮಿಪ್ಪುಱಡುಗಿತ್ತು ಸುಯ್ಗೆ ಕಾ |
ಯ್ಪಡರ್ದುದೊಡಲ್ಗೆ ಮೆಲ್ಲನಡಿಯಿಟ್ಟುದು ಮೂರ್ಛೆ ಮೃಗಾಯತಾಕ್ಷಿಯಾ||

ವ|| ಅಂದವಳಂದವಳಿದಂದವಂ ಕಂಡು ತಳಾರಮೆ ಮೊದಲಾದಕೆಳದಿಯ ರ್ವಿಸ್ಮಯಂಬಟ್ಟು ನಿರಪಾತಪಮಂ ತವಿಪಬಗೆಯಂ ಬಗೆದಲ್ಲಿಂ ಮೆಲ್ಲನೆ ಕೆಂಳಿದರಾಂದೋಳನದೊಳಿರಿಸಿ ಕೇಳೀವನಕ್ಕೆ ಕೊಂಡುಪೋಗಲೊಡನೆ

ವೃ|| ಇನಿಯನಗಲ್ಕೆಗಿಚ್ಚು ಸುಡೆ ಸೈರಿಸಲಾರದೆ ಮುಗ್ಧೆ ಬಂದು ನಂ |
ದನದೆಡೆ ನಿಂದು ಬೆಚ್ಚನುಸಿರೊತ್ತಿದೊಡಾಗಳೆ ಕಂದಿಸಿತ್ತು ಮೇ ||
ಣ್ಜೆನುಗುವತುಂಬಿಯುಂ ಬಳಸಿ ಬಗ್ಗಿಪಕೋಗಿಳೆಯುಂ ಮೃಗಾಂಕನಂ |
ಮನಸಿಜಮಾರುತರ್ತ್ತನುವನಾಂತೊಡೆ ಕಂದಿಸದೇನದಿರ್ಕ್ಕುಮೋ || ೭೩

ವ|| ಆನಂದನದೊಳಾಳೀಜನಮವಳಂ ಶಿಶಿರೋಪಚಾರಂಗೆಯ್ವೆಲೆಂದು ಪೊಸಕುಸುಮ ಮಂಟಪಕ್ಕೆ ತಂದು

ವೃ|| ಸರಸರಸಾಲಸಲ್ಲಲಿತಪಲ್ಲವತಲ್ಪದೊಳಿಟ್ಟು ಪಚ್ಚೆಗ |
ಪ್ಪುರವನಮುಚ್ಚುರ್ತೆಚ್ಚಿ ನಿಡುಗಣ್ಗೆ ಸರೋಜದಳಂಗಳಂ ಪಯೋ ||
ಧರದೆಡೆಯಲ್ಲಿ ತಂದಿರಿಸಿ ಸೂಸಿ ಹಿಮಾಂಬುವನ್ನೈದೆ ಪುಷ್ಪಚಾ |
ಮರಮನೆ ಬೀಸಿ ಚಂದನಮನಂಗದೆ ಪೂಸಿ ವಿಳಾಸಿನೀಜನಂ || ೭೪

ಕಂ|| ಪರಿಹರಿಸಲೆಂದು ವಿರಹ |
ಜ್ವರಮಂ ಶಿಶಿರೋಪಚಾರಮುಸಗಿದೊಡದು ತಾಂ ||
ಪಿರಿದಾದುದಕಟ ಮಧುರಾ |
ಧರೆಗದನಂತಿಂತುಟೆಂದು ಬಣ್ಣಿಪರೊಳರೇ || ೭೫

ವೃ|| ಬಿಸುಸುಯ್ಯಿಂದಿರ್ಪ್ಪುಗುಂದಿರ್ದ್ದಧರಕಿಸಲಯಂ ರಕ್ತನೇತ್ರಾಂಚಲಂಬಾ|
ಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮುಮೃತಾಪಾಂಡುಗಂಡಸ್ಥಲಂ ಶೂ ||
ನ್ಯಸಮಾಲೋಕಂ ತನುತ್ವಂಬಡೆದತನು ವೃಥಾನಲ್ಪಸಂಕಲ್ಪಚಿತ್ತಂ |
ಮುಸುಕಿದರ್ದ್ದಾಲಸ್ಯಭಾವಂ ನೆಗಳ್ದಿರೆ ವಿರಹಾಕ್ರಾಂತೆ ತತ್ಕಾಂತೆಯಿರ್ದ್ದಳ್||

ಕಂ ತೀವಿದತಾಪಕ್ಕಿಕ್ಕಿದ |
ಬಾವನ್ನದ ಬಟ್ಟಬೊಟ್ಟು ವದನದ್ಯುತಿಯಂ ||
ತಾವರೆವಗೆಯಂ ಕಳಲೆಂ |
ದಾವೇಳೆಯು ನರಿದು ಬಂದು ನಿಂದವೊಲೆಸೆಗುಂ || ೭೭

ಅಸಿಯುಳಸಿಯೊಡಲೊಳೊರಸಿದ |
ರಸವೊಸರ್ವ ಸುಚಂದನಂ ಕರಂ ಕಣ್ಗೆಸೆಗುಂ ||
ಕುಸುಮಾಸ್ತ್ರನ ಕುಸುಮಶರ |
ಪ್ರಸರದ ಹತಿಗಳ್ಗೆ ಕವಚಮಂ ತಾಳ್ದಿದವೋಲ್ || ೭೮

ಮಾನಿನಿಯ ಪೀನತರಕುಚ |
ಮೀನಧ್ವಜಕುಂಭಿಕುಂಭಮದು ವಿರಹಗ್ರೀ ||
ಷ್ಮಾನಲನಿಂ ಬಿರಿದಂತೆವೊ |
ಲೇನೊಪ್ಪಿತೊ ಬಿರಿಯೆ ತಾಳ್ದಕುಂಕುಮಪಂಕಂ || ೭೯

ಅರೆವಿರಿದಸಂಪಗೆಯ ಸುರು |
ಚಿರಮುಕುಲಂಬೊಕ್ಕು ಬಿಸುಪನಾಂತಿಳಿವೆಲರಂ ||
ತಿರೆ ಬಿಸುಸುಯ್ಯುದತಿಯ ಭಾ |
ಸುರನಾಸಿಕೆಯಿಂದೆ ಸೂಸುತುಂ ಸೊಗಯಿಸುಗುಂ || ೮೦

ವಿರಹಶಿಖಿ ಸುಟ್ಟೊಡಗಿದೊಳ |
ಗಿರಲಾರದೆ ಕಂದಿ ಕುಂದಿ ನೆಗೆದುದು ಬಗೆಯೆಂ ||
ಬರ ಬಗೆಗೇಂ ಬಂದುದೊ ಮಧು |
ಕರನವಳುರದಲ್ಲಿ ಚಂದನಸ್ಥಿತಪಕ್ಷಂ || ೮೧

ಅಂದರವಿಂದಸಖಂ ಕಾ |
ಳಿಂದಿಯುನೆಲೆಪಡೆದನೆಂದು ಪುರುಡಿಂ ಪಡೆದಂ |
ಮಂದಾಕಿನಿಯುಂ ಬಿದುವೆಂ |
ಬಂದದಿನವಳಾಸ್ಯಬಾಷ್ಪನದಿ ಕಳಿದಿಳಿಗುಂ || ೮೨

ವ|| ಮತ್ತಂ

ಕಂ|| ಬಗೆವನೆಯೊಳಿರ್ಪ್ಪರತಿಪನ |
ನೊಗೆದುತ್ಕುಚಗಿರಿಯ ವಿರಹಶಿಖಿದವಶಿಖಿ ಜು ||
ಟ್ಟುಗುಪೊಂದು ಮುಖಮೃಗಾಂಕಂ |
ಮಿಗೆ ಸುಧೆಗರೆವಂತೆ ಕರೆದುದವಳಶ್ರುಜಳಂ || ೮೩

ವೃ|| ನಾರೀಚಾರುಕುಚಂಗಳಂ ಮಿಗೆ ಮುಸುಂಕಿಟ್ಟಬ್ಜಪತ್ರಂಗಳೊ |
ಕ್ಷೀರಂ ಸಿಂಪಿಸೆ ನೀರೆಯಕ್ಕರ್ಣಗಣಂ ಚಾಂಚಲ್ಯಮಂ ಪೊತ್ತು ತ ||
ಳ್ತೀರಂತಲ್ಲಿ ವಿರಾಜಿಸಿತ್ತು ಸುಡುಗುಂ ಕಾಮಾಗ್ನಿ ತಾನೆಂದು ತ |
ನ್ನೀರೇಜಚ್ಛದಜೀವನಂ ಭಯದಿನಾಗಳ್ಕಂಪನಂಬೆತ್ತವೋಲ್ || ೮೪

ಅಂಗನೆಯಂಗದಂಗಜಮಹಾಶಿಖಿಗಾಜ್ಯಮದಾದುದಾಲಿನೀ |
ರ್ತ್ತುಂಗಕುಚಾದ್ರ್ರಚಂದನರಸಂ ಘಟಪಾಕವಿಲೇಪನಂಬೊಲಾ ||
ಯ್ತಂಗಳವಾಯ್ತು ಚಂದಳಿರೆಲತ್ತಿರ್ದಿಯೊಂದೆಲರಂದವಾಯ್ತು ಬೆ |
ಳ್ದಿಂಗಳೆ ತಳ್ತದಳ್ಳುರಿಯುದಾಯ್ತೆನೆ ತಾಪಮದೇನಳುಂಬವೋ || ೮೫

ಆಸಿಯುಳ ಸೋಷ್ಣನಿಶ್ವಸಿತ ಸೌರಭಲೋಭದಿನಾಸಿಕಾಗ್ರದೊ |
ಳ್ಪಸಿದಮುದಾಳಿ ಯೆಂದೆರಗೆ ತಾಂ ಸುಡೆ ಕರ್ರನೆ ಕಂದಿ ಕುಂದಿ ಸಾ ||
ಧ್ವಸವಶದಿಂದೆ ಬಂಪೆರಗಲಣ್ಮದೆ ತತ್ಸಮಚಾರುಚಂಪಕ |
ಪ್ರಸವದೊಳಿನ್ನುಮಿಲ್ಲಿಯುರವಿಂದಮುರಂದದೊಳಳ್ಕು ಜೀವಿಕುಂ || ೮೬
ಕರಮುರಿವೋದುವಾರ್ದ್ರರಗುವಾರಡಿಗಳ್ತಳಿವಾಲಿನೀರ್ಪ್ವ‌ಯೋ |
ಧರದೆಡೆ ಕಾಯ್ದುಘಟ್ಟಿಗೆರೆವಂತಿರೆ ಜುಯ್ಯನೆ ಜುತ್ತಿದತ್ತು ಮೇ ||
ಲಿರಿಸಿದಪಲ್ಲವಂ ಮೃದುಮೃಣಾಳಕುಳಂ ಸಿರಿಗಂಪು ಪುಷ್ಪಮುಂ |
ಜರಿಯುರಿಪತ್ತಿ ಪೊತ್ತಿ ಪೊಗೆದತ್ತು ತನೂದರಿಯಂಗತಾಪದಿಂ || ೮೭

ವ|| ಆಗಳವಳ್ಗೆ ಶಿಶಿರೋಪಚಾರಮಂ ಮಾಳ್ಪಮುಗ್ಧೆಯರ್ಗ್ಗೆ ಎದಗ್ಧೆಯರ್ಸ್ಸಂಜ್ಞೆಗೈದು

ವೃ|| ಘನಕಚೆಯಂಚೆಯಂ ತೊಲಗಿಸೀಯುಲರಂ ಫಣಿವೇಣಿ ಪಾರಿಸೀ |
ಜೆನುಗುವತುಂಬಿವಿಂಡನೆಲೆ ಚಂಪಕನಾಸಿಕೆ ನೂಂಕು ಮತ್ತಕೀ ||
ರನಸಿರದಟ್ಟು ಮಂಜುಳವಿಡೂರಜಭೂಷಣೆ ಚಂದ್ರಕಾಂತಿಯಂ |
ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆಯೆಂದರಾಳಿಯರ್ || ೮೮

ವ|| ಮತ್ತಂ

ವೃ|| ಅಲರ್ಗಳ ಜೊಂಪಮಂ ಪಿಡಿದು ಬೀಸದಿರಿಂದುನಿಭಾಸ್ಯೆ ಜೊನ್ನಮಂ |
ದಲಸುವಳಂಗಜಾತಶರಲೋಚನೆ ಪೂಗಳನಿಕ್ಕದಿರ್ಸುಮೋ ||
ಜ್ಜ್ವಲಶರಮೆಂದು ಕುಂದುವಳುದಂಚಿತಪಲ್ಲವಪಾಣಿ ಪಲ್ಲವಾ |
ವಲಿಯನೆ ಪಾಸದಿರ್ಮದನವಹ್ನಿಶಿಖಾತತಿಯೆಂದು ಬೆಚ್ಚುವಳ್ || ೮೯

ವ|| ಎಂದುಸಿದ್ದುರ್ ಮತ್ತಮಿರಪೆ

ವೃ|| ಅರವಿಂದಾನನೆಗಬ್ಜಲೋಚನೆಗೆ ಪದ್ಮಾಮೋದನಿಶ್ವಾಸೆಗಂ |
ಬುರುಹದ್ವಂದ್ವಸಮಾನಪಾಣಿಗೆ ಪಯೋರುಟ್ಪಾದೆಗಂಭೋಜಭಾ ||
ಸುರಕೋಶಸ್ತನೆಗೀಲತಾಂಗಿಗೆ ಸರೋಜಾತಾರಿ ತಾಂ ಕಾಯ್ವುದ |
ಚ್ಚರಿಯಲ್ತೀಕಳಹಂಸನೀಮಧುಕರಂ ಪೇಳ್ಕಾಯ್ವುದೇಂ ತಕ್ಕುದೇ || ೯೦

ತಳಿರುಂ ತಾಮರಸಂ ಮದಾಳಿಕುಳಮುಂ ಮಂದಾನಿಲಂ ಮಾಮರಂ |
ಕಳೆಯಾಣ್ಮಂ ಕಳಹಂಸಮಂಡಳಿ ಸರೋಜಾತಾಕರಂ ಷಟ್ಪದಂ ||
ಕಳಕಂಠಂ ಕದಳೀದಳಂ ಮಳಯಜಂ ಮಾಧುರ್ಯಗೀತಂ ಮನೋ |
ಜ್ಞಲತಾಗೇಹಮುಮೆಲ್ಲಮೀಕೆಗೆ ಕರಂ ಕಾಯ್ಪುಪ್ಪುವೇಗೆಯ್ವಳೋ || ೯೧
ವಿರಹಶಿಖಿಪ್ರತಪ್ತ ತರುಣೀತತಲೋಚನರೋಚಿಯಿಂ ಸುಧಾ |
ಕರರುಚಿ ಸೋಷ್ಣಮಾಗುತಿಳಿವೀ ಬಿಸುಸುಯ್ಯುಡೆ ಬೆಚ್ಚನಾಗಿ ತಂ ||
ಬೆರಲಿರದಾಳಿಯತ್ತಳಿವನೀತ್ತನುತಾಪದೆ ಕಾಯ್ದುವೆಲ್ಲವೀ |
ತರಳೆಗೆ ತಾಪಮೀಗುಮಿವರೊಳ್ಸಖಿಯುಬ್ಬರಿದೂರನೇರಿಪರ್ || ೯೨

ವ|| ಇಂತನೇಕವಿಧಾಲಾಪಂಗಳವರೊಳ್ನೆಗಳುತ್ತುಮಿರ್ಪಿನಮಾಗಳ್ಗಳಗಳನೆ ಕಳಿದಿಳಿವ ಬಹುಳಬಾಷ್ಪಜಳಪೂರದಿಂ ತೊಳೆದು ಕಳೆದಂತೆ ನಿದ್ರೆ ನೆಲೆಗೆಟ್ಟು ತೊಲಗೆ ಅಲರ ಬಜ್ಜಣಿಗೆಯಿಂ ಬೀಸೆ ಬೇಸರಂಬೋದಂತೆ ಹಸನಂ ಹಸಂಗೆಡೆ ಕಂದರ್ಪಂ ಬೆಸಸೆ ಮಂದಾನಿಲಂ ಪುಗುತಂದೊಳಗೆ ಪೊಳೆವವಿರಹದಹನಜ್ವಾಲೆಯಂ ಮೇಲಿಮೇಲೆ ಪೆರ್ಚಿಸುತ್ತ ದರಬಿಸುಪನಾಂತಿಳಿತರ್ಪಂತೆ ನಾಸಾವಿವರದಿಂ ಸೂಸುವ ಬಿಸುಸುಯ್ಯೊದವಿಯೆ ಬಳಸಿ ಬಂದು ಬಗ್ಗಿಪಕೆಂಗಣ್ಪಕ್ಕಿಗಳ್ಗೆ ಕಾಯ್ದಂತೆ ಕಡೆಗಣ್ಕಡುಗೆಂಪುವಡೆಯೆ ಅಳವಿಗಳಿದುಕೆಳದಿಯತ್ತಳಿವತುಹಿನಜಳದೊಡಗೂಡಿ ಮದನಾಗ್ನಿಯಿಂ ಪೊಗೆವಪಸಿಯಬಿಸವಿಸರದ ಪಸರಿಸಿದ ಪೊಗೆ ಸುಳಿವಂತೆ ಕಾಳ್ಪುರವಾಗಿ ಕಣ್ಣನೀರ್ಕ್ಕವಿತರೆ ರಾಕಾಸುಧಾಕರಂ ಮುಖರುಚಿಯಂ ಕವರ್ದು ನಿಜರುಚಿಯನಿತ್ತಂತೆ ಸಿಡಿಮೊಗಂ ಬೆಳ್ಪೇರೆ ಮನದೊಳಿರ್ಪ ಮನದನ್ನನಂ ಮನಸಿಜನ ನನೆಯಂಬು ನಾಂಟದಂತಡ್ಡಮಿಟ್ಟವಳೆನೆ ಕುಚಮಧ್ಯಕ್ಕೆ ಸಾರ್ಚಿದ ಕರಂ ಕರಮೆಸೆಯೆ ಚಿಂತಾಭಾರಮಂ ಪೊರಲಾರದಳವಳಿವಶಿರಕ್ಕಾಂಕೆಗೊಟ್ಟಪಳೆನೆ ತೆಳ್ಗದಂಪಂ ಕೈದಳಿತ್ತಳೆಯೆ ತನುನಾಮಮಂ ಸಾರ್ಥಕಂಮಾಳ್ಪಂತೆ ತನು ತನುತ್ವಂಬಡೆಯೆ ಕಂತುಗ್ರಹದ ಕಾಟಕ್ಕಳ್ಕಿ ಭಸಿತಮಂ ಧರಿಸಿದಂತಲರ ಮಲಯಜದ ರಜಂ ನಿಜಾಂಗದೊಳ್ಕಂಗೊಳಿಸೆಘನತಾಪಕ್ಕೆಸಡೆದು ಘನಕವಚಂದೊಟ್ಟಂತೆ ಕಂದಿದಚಂದನದಣ್ಪು ತೋರೆ ಮೀರಿದತನುತಾಪದಿಂ ನೊಂದು ಬೆಂದು ಸಸಿಜೊ

ನ್ನಕ್ಕೆ ಬೆಚ್ಚಿರ್ ಬಸಂತಂಗೆ ಬೆರಲ್ಗಚ್ಚಿರ್ ಕಳಕಂಠಂಗಳ್ಕಿ ಗಿಳಿವಿಂಡಿಂಗೆ ಬಳ್ಕಿ ತಳಿ
ರ್ಗ್ಗಿರ್ ತಲ್ಲಣಂಗೊಂಡು ಮಳಯುಜಕ್ಕೆ ಮಲ್ಲಳಿಗೊಂಡು ಮಂದಾನಿಲಂಗಳದ್ರ್ದಿರ್
ಕಂದರ್ಪಂಗೆ ಪೆಳದ್ರ್ದಿರ್ ಕುಸುಮವಿಸರಕ್ಕಗಿದು ಬಿಸಕಾಂಡಕ್ಕೆ ಸುಗಿದು ಪೊಂ
ಬಾಳೆಯಿಂ ಮುರವಟ್ಟು ತುಂಬಿಗಳಿಂ ಕಂಗೆಟ್ಟು ಕಮಳದಿಂ ಕಂದಿ ಕುಮು
ದದಿಂ ಕುಂದಿ ತಿಳಿಗೊಳಮುಂ ಬೈದು ಕಳಹಂಸಂಗೆ ಸುಯ್ದೊಳಲತೆಗೆ ತಲೆವಾಗಿ
ಪುಳಿನಕ್ಕೆಮಾರುವೋಗಿ ಮಾವಂ ನೋಡದೆ ಪೂವಂ ಸೂಡದೆ ಸಖಿಯರಂ ಪರೀ
ಕ್ಷಿಸದೆ ಮುಕುರಮುಂ ನಿರೀಕ್ಷಿಸದೆ ಕುರುಳಂ ನೇವರಿಸದೆ ಶರೀರಮುಂ ಸಿಂಗರಿಸದೆ
ಜಳಕಮುಂ ಪಾರದೆ ತಿಳಕಕ್ಕೆ ಸೇರದೂಟಕ್ಕೆಳಸದಾಟಮಂ ಬಳಸದೆ ಕಾಯ್ಪೇರಿದಕ
ನಕಪುತ್ರಿಕೆಯಂತೆ ಬೇರೊಂದುಸೌಂದರ್ಯಕ್ಕೆಪಕ್ಕಾಗಿ ನಿಜಕಾಂತನಾಟಮುಂ ಕೂಟ
ಮುಂ ಮೀಂಟುಜೌವನದ ಬೇಟಗಾತ್ತಿರ್ ಕೂತ್ತುರ್ ಬಗೆದು ಬಯಸಿ ಬಗೆಯೊಳ್ಭಾ
ವಿಸುತ್ತಿರ್ದ್ದಳಾ ಪ್ರಸ್ತಾವದೊಳ್

ವೃ|| ಗುರುಕುಚದಲ್ಲಿ ಸಾಂದ್ರತರಕುಂಕುಮಪಂಕಮುಸಿಟ್ಟು ಪಲ್ಲವಾ |
ಧರೆಗಿರದಾಳಿಯುಬ್ಬರಿದ ಮಲ್ಲಿಗೆವೊಗ್ಗೆಯುಸಲ್ಲಿ ಸಾರ್ಚ್ಚಿರ್ ತಾ ||
ನರುಣತೆವೆತ್ತು ಕಾಣಿಸಿತು ಕಾಮನೃಪಂ ಕಡುಗಾಸುತೆಚ್ಚುಬ |
ಲ್ಸರಲೆನೆ ಮೂರ್ಛೆಯಿಂ ಮುಗಿದಕಣ್ಮಲರಿಂದೊರಗಿರ್ದ್ದಸೀರೆಯಾ || ೯೩

ವ|| ಇಂತು ಸಂಮದಂಗುಂದಿ ಪಂಮದಂಬೋದ ಸರ್ವಮಂಗಳೆಗೆ ಕೆಳ
ದಿಯರ್ಮದನದಹನಸಂತಾಪಪರಿಹರಣಸಮುಚಿತೋಪಚಾರಂಗೆಯ್ಯುತ್ತುಮಿರ್ದ್ದರ್
ರನ್ನೆವರಮಿತ್ತಲ್ ವಿಪುಳವಿಭವಂ ಮಿಗೆ ಮುಂಬಂದರಾಜಶೇಖರನರೇಂದ್ರಂಗೆ ವಿವಿ
ಧೋಪಚಾರಂಗೈದನಂತರಮಂತಃಪುರದೊಳವಳಯದ ಕೇಳೀವನಾಂತಸ್ಥಳವಿಳಸಿ
ತ ಮಣಿಮಯಪ್ರಾಸಾದಮುಂ ಬಿಡುದಾಣಂಮಾಡಿ ಕೊಟ್ಟುಮಜ್ಜನಭೋಜ
ನಾದಿಸಮುಚಿತೋಪಚಾರಕ್ಕೆ ತಕ್ಕಪರಿಚಾರಕಜನಮುಂ ನಿಯಾಮಿಸಿ ನಿಜರಮಣಿ
ಯೊಡನೆ ಕನಕಪೀಠಮನಳಂಕರಿಸಿ ಸಿಂಹಳೇಂದ್ರಂ ಕುಳ್ಳಿರ್ದ್ದೀಕುಮಾರಂಗೆ ನಿಜಕು
ಮಾರಿಯುಂ ಪರಿಣಯಂಗೆಯ್ಯಲ್ವೇಳ್ಕುಮೆಂದು ನುಡಿವಸಮನಂತರದೊಳ್ಸೌಂದ
ರ್ಯಶಾರದೆಯೆಂಬ ಸರ್ವಮಂಗಳೆಯ ಕೆಳದಿ ಪರಿತಂದಿರ್ವ್ವರಡಿದಾವರೆಯುಂ ಕು

ರುಳ್ಳುಂಬಿಗಳಿನೋಲಗಿಸಿ ಕರಾರವಿಂದಮುಂ ಮುಗಿದು ನಿಂದು

ವೃ|| ಎಂದು ನರೇಂದ್ರಪುತ್ರನನಭೀಕ್ಷಿಸಿದಳ್ಭವದೀಯಪುತ್ರಿಯಂ |
ದಿಂದಮನಂಗಬಾಣಹತಿಯಿಂ ಬಗೆಗುಂದಿ ಬಳಲ್ದು ಪಾಡಗೇ ||
ನೊಂದುಮನಾಡದಂಚೆಗಿಳಿಕೋಗಿಲೆಯಿಂಚರಕಳ್ಕಿ ಬಳ್ಕಿ ಪೂ |
ರ್ಣೇಂದುನಿಭಾಸ್ಯೆ ನೊಂದವಳಿವಳ್ಗೆಸವುಜ್ಝುಗಮೇಂ ಮಹೀಶ್ವರಾ || ೯೪

ಕಂ|| ಅಲರೆಲರಳಿ ಗಿಳಿ ಮಧು ವಿಧು |
ನಳಿನಂ ಪುಳಿನಂ ಮರಂದಬೃಂದಂ ಕುಂದಂ ||
ಕಲಗಲಕಲಕಲ ಘನವನ |
ಮಲೆಗುಂ ಭದೀಯತನುಜೆಯುಂ ಮನುಜೇಂದ್ರಾ || ೯೫

ವೃ|| ತರುಣಿಯ ವಕ್ತ್ರನೇತ್ರಪದಪಾಣಿದರಸ್ಮಿತಕಾಂತಿಗಳ್ಗೆ ಸೋ |
ಲ್ತುರುತರಕಂಜಕೈರವನವಾಮ್ರವಿರಾಜದಶೋಕಮಲ್ಲಿಕಾ |
ಶರನಿಕರಂ ಕರಂ ಸ್ಮರನಿಷಂಗಮನೆಯ್ದಿ ವಿರೋಧಭಾವಸಂ |
ಸ್ಮರಣದೆ ತನ್ನಿತಂಬಿನಿಯನುಂಗೊಳಲುಜ್ಝುಗಿಸಿರ್ಪ್ಪುದುರ್ವಿಪಾ || ೯೬

ವ|| ಅದುಕಾರಣದಿಂ ದಶಮದಶೆಗೆ ಪಕ್ಕಾಗದಮುನ್ನಂ ತಕ್ಕುದಂ ನೆಗಳಲ್ವೇಳ್ಕುಮೆಂದು ನುಡಿಯಲೊಡನರಸಂ ಮನೋರಥಕ್ಕನುಗುಣಮಾದಮಗಳ ಬಗೆಗೆ ಸಂತಸಂಬಟ್ಟು.

ಕಂ|| ಈಕುವರಂಗೆ ಒಗೆವೊಡೆ ಮ |
ತ್ತಾಕುವರನೊಳಲ್ಲದೊಲ್ಮೆ ಸಮನಿಕುಮೆ ವಲಂ ||
ಶ್ರೀಕುಮುದಿನಿಗೊದವುಗುಮೆಕ |
ಲಾಕಾಂತನೊಳಲ್ಲದಾತ್ಮಹರ್ಷೋತ್ಕರ್ಷಂ || ೯೭

ವ|| ಎಂದಿನಿಯಳೊಡನೆಸಾದನಂ ಮಿಗೆ ಪೊಗಳ್ದು ಸಿಂಹಳೇಂದ್ರಂ ಸಾಂದ್ರಹರ್ಷದಿಂದಿರ್ದು ಮರುದಿವಸದುದಯಸಮಯದೊಳೇಕಾಂತಭವನದೊಳ್ಮಣಿಪೀಠದೊಳ್ಕುಳ್ಳಿರ್ದು ನಿಜಾಮಾತ್ಯನೊಡನೆ ತತ್ಪರಿಣಯಪ್ರಸಂಗಂಗೆಯ್ವುತ್ತುಮಿರ್ಪ್ಪಾಗಳ್ ಪತಿವೋಹಿಮಂತ್ರಿಪಂ ರಾಜಶೇಖರಪ್ರೇಷಿತನಲ್ಲಿಗೇಳ್ತಂದು ನಿಜವಿನಯಮಂ ಮೆರೆದು ತನ್ನರೇಂದ್ರಸನ್ಮಾನಿತನುಚಿತವಚನದಿನಿಂತೆಂದಂ

ಕಂ|| ವರರಾಜಶೇಖರಂಗಾ |
ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ ||
ವರರಾಜಶೇಖರಂಗೆಲೆ |
ನರೇಂದ್ರ ಕುಡು ಸರ್ವಮಂಗಳೆಯುನನುಸಯದಿಂ || ೯೮

ವ|| ಎಂದವಮಾತಿಂಗೆ ಮನೋರಥಂ ಕೈಸಾರ್ದಂತೆ ಸಂತಸಂಬಟ್ಟು ಕೊಟ್ಟೆಂ ಕೊಟ್ಟೆನೆಂದು ಸಿಂಹಳೇಂದ್ರಂ ನುಡಿದು ಮೌಹೂರ್ತಿಕರಂ ಬರಿಸಿ ಶುಭ ಲಗ್ನಮಂ ಬೆಸಗೊಂಡು ಮಗಳ ಪರಿಣಯಕ್ಕೆ ತಕ್ಕಕಲ್ಯಾಣಮಂಟಪಮಂ ಕೌತು ಕಾವಹಮಪ್ಪಂತೆ ಮಯಮೊಂಡವ್ಯರಂ ಪಳಿವಶಿಲ್ಪವಿದ್ಯಾವಿಶಾರದರಿಂ ರಚಿಸುತ್ತಿ ರ್ದನಾಗಳ್ಪತಿಸೋಹಿಮಂತ್ರಿಪನಲ್ಲಿಂದೇಳ್ತಂದು ಕುಮಾರಂಗರಿಪಿ ತದನುಜ್ಞೆಯಿಂ ಧರ್ಮಪತಿಗೈತಂದು ಸಕ್ಯೇಂದ್ರಂಗೆ ಪೊಡಮಟ್ಟು ನೆಗಳ್ದಕಜ್ಜಮೆಲ್ಲಮಂ ಬಿನ್ನ ಪಂಗೈದು ಪತ್ರಮಿಂತೆಂದಂ

ಕಂ|| ಮಣಿಯುದಸಿಂಹಳನಗ್ಗದ |
ಮಣಿಯಂ ಮಣಿದಿತ್ತುಮಾತ್ಮಭವೆಯೆನಿಸುವವೆ ||
ಣ್ಮಣಿಯಂ ನೃಪಕುಳಚೂಡಾ |
ಮಣಿಯುವರಾಜಂಗೆ ಮದುವೆಯಂ ಮಾಡಿದಪಂ || ೯೯

ವೃ|| ಸಿಂಗರದಿಕ್ಕೆ ಮಂಗಳದ ಮೆಯ್ಸಿರಿ ಜಾಣ್ಮೆಯ ಗೊತ್ತು ಕಾಮಶಾ |
ಸ್ತ್ರಂಗಳ ಕೋಶಮಿಂಪಿನ ತವರ್ಮನೆ ಸ್ನೆಪಿನ ಸೀಮೆ ಚಿತ್ತಜಾ ||
ತಂಗಧಿದೇವಿ ಸತ್ಕಳೆಗಳಾಗರ ಮೇಳ್ಗೆಯಡಪ್ಪ ಸಚ್ಚರಿ |
ತ್ರಂಗಳ ಬೀಡು ಶೃಂಗಮತವರ್ಣಮಾತನ ಪುತ್ರಿ ಭೂಪರಾ || ೧೦೦

ವೃ|| ನಗೆ ನಡೆ ಮಾಂದ್ಯಮಾಳ್ದಿರೆ ಕುರುಳ್ಕುಡಿನೋಟಮರಾಳಭಾವಮೊ |
ಳ್ಪುಗೆ ಪೊಸಜೌವನಂ ಜಘನಮುಂ ತನಿವೆರ್ಚೆ ಕದಂಪು ಕಣ್ಬೊಗರ್ ||
ಪೊಗರಿಡೆ ಲಜ್ಜೆಯುಂ ಲಲಿತಲೀಲೆ ಪೊದಳ್ದಿರೆ ಸೆಂಪುವಾಳ್ದು ಮೇ |
ಣ್ಸೊಗಯಿಸೆ ಮೈವೊಗಂ ಕುವರಗೊಪ್ಪಿದುದುರ್ವಿದಯೌವನೋದಯಂ ||

ಕಂ|| ತೊಳಗುವನಗೆಮೊಗಮುಜ್ಜ್ವಳ |
ಕಳಶಸ್ತನಮುಳಿಪಳಾಳಕಂ ತಳಿರ್ದುಟಿ ಕೋ ||
ಮಳತನುಲತೆ ಘನಜಘನಂ |
ಸೆಳೆನಡು ಕಳಹಂಸಗಮನಮೊಳೆಯಳ್ಗೆಸಗುಂ || ೧೦೨

ರತಿ ಒಗೆಗೆ ಬರ್ಪ್ಪಳಾಭಾ |
ರತಿ ನುಡಿಯಂ ಮೀರಿ ನಡೆಯುಳಿಂದಿರೆ ಚತುರ ||
ಸ್ಥಿತಿಯಿಂ ಮೈವಳಿಯೊಳ್ಸಂ |
ದತಿಶಯಮೆನೆ ನಡೆವಳಾಮಹೀಭೃತ್ಸುತೆಯಾ || ೧೦೩

ವ|| ಎಂದವಳ ರೂಪಾತಿಶಯಮುಮಂ ಸತ್ಯೇಂದ್ರನರೇಂದ್ರಂಗೆ ವಿಜ್ಞಾಪನಂಗೈದು ತತ್ಪರಿಣಯಕರಣಲಬ್ಧಾಭ್ಯನುಜ್ಞನಾಗಿ ಮಗುಳ್ದು ಕಮಳಾವತಿಗೇಳ್ತಂದು ಸಚಿವೇಂದ್ರಂ ನರೇಂದ್ರಪುತ್ರಂಗೆಲ್ಲಮುಂ ಬಿನ್ನಪಂಗೈದಾಗಳ್

ಕಂ|| ಮೊಗಸಸಿಗೆ ಸುಪ್ರಸನ್ನತೆ |
ನೆಗಳ್ದುದು ಹೃದಯಾಬ್ಜಮಲರ್ದು ಸಾಮೋದತೆಯಂ ||
ಮಿಗೆ ತಳೆದುದು ಚಿತ್ರಂಗಡ |
ಬಗೆವೊಡೆ ತನ್ನೃಪಕುಮಾರಕುಸುಮಾಯುಧನಾ || ೧೦೪

ವ|| ಮತ್ತಮಾಗಳ್

ವೃ|| ಶಿವಪಾದಾಂಭೋಜಮಂ ಭಕ್ತಿಯೊಳೆ ಭಜಿಸುತುಂ ಶೈವಕಾವ್ಯಂಗಳಂ ಶಾಂ|
ಭವಲೀಲಾಸತ್ಕಥಾಸಂತತಿಯನೊಸಗೆಯಿಂ ಕೇಳುತುಂ ಭವ್ಯವಿದ್ವ ||
ನ್ನಿವಹಕ್ಕಾನಂದದಿಂದಂ ವಸುವಸನಮಣಿ ಶ್ರೇಣಿಯಂ ಮಾಣದೀಯು |
ತ್ತವನಿದ್ದಂ ಭೂರಿಭೂಮೀಶ್ವರನತಚರಣಂ ಭಾರತೀಭಾಗಧೇಯಂ || ೧೦೫

ಸುರೇಂದ್ರಪರಿಪೂಜಿತೇ ಸುಗುಣರಾಜಿವಿಭ್ರಾಜಿತೇ |
ಕರೀಂದ್ರವದನಾಂಬಿಕೇ ಕಲಿತಪದ್ಮಪತ್ರಾಂಬಕೇ ||
ಹರೀಂದ್ರವರವಾಹನೇ ಹರಕೃತೋರುಸಮ್ಮೋಹನೇ |
ಗಿರೀಂದ್ರತನುಸಂಭವೇ ಗತಿಭವತ್ಪದಂ ಶಾಂಭವೀ || ೧೦೬

ಗದ್ಯ|| ಇದು ವಿನಮದಮರವರಮಕುಟತಟ ಘಟಿತಮಣಿಗಣಮಹಾಪ್ರಭಾಪಟಲರಿಸ್ಫುತಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾನಸರಸಜನಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸವಿಪುಳ ಪ್ರಬಂಧದೊಳ್ಸರ್ವಮಂಗಳಾದರ್ಶನ ವರ್ಣನಂ ಸಪ್ತಮಾಶ್ವಾಸಂ.

ಸಂಪೂರ್ಣಂ.



# ಅಷ್ಟಮಾಶ್ವಾಸಂ.

ಕಂ|| ಶ್ರೀಮದುಮಾಮಧುರಾಧರ |
ಸೋಮಕಳಾರಸರಸಜ್ಞರಸನಂ ಪ್ರಮಥ ||
ಸ್ತೋಮಾವೃತಕನಕಾಚಳ |
ಧಾಮಂ ಕುಡುಗೆಮಗೆ ಸೌಖ್ಯಮಂ ಶಿವಲಿಂಗಂ || ೧

ವ|| ಆಗಳಿತ್ತಲ್

ವೃ|| ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ |
ಸುತ್ತಿಡಿದಿರ್ದ್ದ ಮಾಣಿಕದ ಲಂಬಣಮಾಲೆ ನವೀನಚೀನದಿಂ ||
ಬಿತ್ತರವೆತ್ತ ಮೇಲ್ಕುಡಿ ನಿಮಿರ್ಚಿದಬಜ್ಜರಗಂಬಮಿಂಬುಗೊಂ |
ಡುತ್ತಮನೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್ || ೨

ಬಳಸಿರೆ ಕಟ್ಟಿಬಿಟ್ಟಪೊಸಮಲ್ಲಿಗೆಮಾಲೆ ಮರಂದಬಿಂದುಗ |
ಳ್ತುಳುಕುವಿಸಂ ಮಧುವ್ರತವಿತಾನಮೊರಲ್ದೆರಗಿರ್ದ್ದೊಡಲ್ಲಿ ಸಾ ||
ಲ್ಗೊಳಿಸಿದಮೌಕ್ತಿಕಪ್ರಸರಮಂ ಹರಿನೀಲಮಣಿ ಪ್ರತಾನದೊ |
ಳ್ಕಳೆಗೊಳಿಸುತ್ತೆ ತೆತ್ತಿಸಿದ ಪೋಲ್ಮೆರೆದಿರ್ದ್ದುದು ಮಂಟಪಾಗ್ರದೊಳ್ || ೩

ವ|| ಮತ್ತಂ

ಕಂ|| ಹರಿನೀಲದ ಭಿತ್ತಿಯೊಳಂ |
ಬುರುಹಾನನೆ ಕೂಡೆ ಕುಂಕುಮದ ಕಾರಣೆಯಂ ||
ವಿರಚಿಸಿದಳರರೆ ಮುಂಗಾ |
ರ್ಸ್ಸಿರಿ ಸೆಳೆಮಿಂಚಂ ಪಯೋದದೊಳ್ಪುಟ್ಟಿಪವೋಲ್ || ೪

ವೃ|| ರಜನಿ ನಭಃಪ್ರದೇಶದೊಳುಡುವ್ರಜಮಂ ರಚಿಪಂತೆ ಸಾರಸೀ |
ರಜನಿ ಮರಂದಬಿಂದುತತಿಯಂ ದಳದೊಳ್ತಳಿವಂತೆ ಕಾಂತಶು ||
ಕ್ತಿಜಮಣಿಬೃಂದಮಂ ಸುರಿದು ನೀಲದ ಪಚ್ಚೆಯ ಕುಟ್ಟಿಮಂಗಳೊ |
ಳ್ನಿಜಕರದಿಂದೆ ರಂಗಮನೊಡರ್ಚಿದಳೊರ್ವ್ವಳುದಾತ್ತಲೀಲೆಯಿಂ || ೫

ವ|| ಮತ್ತಮದು ಘನಕನಕಮಯಸ್ತಂಭಸಹಸ್ರದಗ್ರದೊಳ್ನೆಲೆಗೊಳಿಸಿ ಕಟ್ಟಿದಪೊಂಬಟ್ಟೆಯ ವಿತಾನದ ಪರಿಸರದೊಳ್ನಿರಿವಿಡಿದೆಳಲೆವಿಟ್ಟತಳಿರ್ವಟ್ಟೆಯ

ಚಿತ್ರಾವಳಿಯಮೇಲ್ಕಟ್ಟಿನ ಮುತ್ತಿನಲಂಬಣಂಗಳ ತೆತ್ತಿಸಿದಕೆಂಬರಲ್ಗಳ ಸಾಲಿಡಿದು ತೊಡರ್ಚಿದಜಲ್ಲಿಗಳ ಕೀಲಿಸಿದ ಪೊನ್ನಬಿಂಗಾರಿಗಳ ಸಾಲ್ಗೊಳಿಸಿದಮಾಣಿಕದಿಂಡೆಗಳ ಕೀಲ್ಗೊಳಿಸಿದನಿಮಿರ್ಚಿದಪಚ್ಚೆಯ ಕುಚ್ಚುಗಳ ತೊಡರ್ಚಿದಕುಸುಮಮಾಲಿಕೆಗಳ ನೆಗಳ್ಚಿದ ಚಿತ್ರಪುತ್ರಿಕೆಗಳ ಬಗಿದ ಮಣಿದರ್ಪಣಂಗಳ ಗಗನಮಂ ತುಡುಂಕುವಪತಾಕೆಗಳ ಮುಗುಳ್ವೆಳೆಯಂ ಸುರಿವಜಂತ್ರದ ಮುಗಿಲ್ಗಳ ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ ಸಂಗಳಿಸಿದ ನನೆಯಸೂಸಕಂಗಳ ಸಸಿಗಲ್ಲ ನೆಲಗಟ್ಟಿನ ಪೊಸಬಜ್ಜರದ ವೇದಿಕೆಯ ನವನೀಲದ ಭಿತ್ತಿಯ ಪವಳದ ಬಾಗಿಲ್ವಾಡದ ಗೊಮೇಧಿಕಕವಾಟದ ಹೇಮಮಯಾರ್ಗಳಸ್ತಂಭದ ಸುತ್ತಿಕಟ್ಟಿದ ಕನಕಘಂಟೆಯ ಬಿತ್ತರಂಬಡೆವ ಮಾಣಿಕ್ಯಕಲಶದ ವೈಡೂರ್ಯದಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ ತರಂಬಿಡಿದರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ ತಿಂತಿಣಿಗೊಳ್ವ ರಾಜಪುರುಷರಿಂ ಬಣ್ಣಿಪಸತ್ಕವೀಂದ್ರರಿಂ ಕಣ್ಗೆಟ್ಟುಕೌತುಕಂಬಡುವಕಳಾವಿದರಿಂದೆಡೆಯಾಡುವೆಳವೆಣ್ಗಳಿಂ ಗುಡಿಗಟ್ಟುವ ಪೌರಜನದಿಂ ಗಳಿಗೆವಟ್ಟಲನಾರೈವಜೋಯಿಸರಿಂದೊಳಗೆಪಸದನಂಗೊಂಬವಿದಗ್ಧೆಯರಿಂ ನೆರಪಿಡ ಮಂಗಳಸಾಧನಂಗಳಿಂ ಸರಸಗೀತಮಂ ಪಾಡುವ ಗಾಯಕರಿಂ ಮೊಳಗುವ ಮಂಗಳವರೆಗಳಿಂ ತೊಳಗುವ ಮಣಿದೀಪಿಕೆಗಳಿಂ ನೋಡಿನಲಿವ ಕುಮಾರಿಯರಿಂ ಕೂಡೆ ಸಡಗರಿಪ ವಿಳಾಸಿನಿಯರಿಂ ತೆರಂಬೊಳೆವ ಕಾಂಡಪಟದಿಂ ತುರುಗಿ ಸುರಿವಕರ್ಪೂರರಜದಿಂ ಪರಿಮಳಕ್ಕೆರಗುವ ಪರಮೆವರಿಗಳಿಂ ಪುರುಳಿಗೂಡಿ ಗಳಪುವಕೇಳೀಶುಕಂಗಳಿಂ ಕೆದರ್ದಕುಸುಮಂಗಳಿಂ, ಪದಂಗೊಳಿಸಿದ ಪನ್ನೀರ್ಗೊಡಂಗಳಿಂ ಮುತ್ತಿನರಂಗವಲ್ಲಿಗಳಿಂ ಬಿತ್ತರಿಸಿದ ಚಿತ್ರಂಗಳಿಂ ಪೊರಗೆನೇಮಿಸಿದ ನವಿಲುಯ್ಯಲಿಂ ಕಿರುವೆಂಡಿರಕೇಳಿಗೆಸಮೆದಮಣಿರಾಟಾಳದಿಂದಿಂಬುವೆತ್ತು ವಸಂತರಾಜನ ವಿಳಾಸಮಂಟಪದಂತೆ ಕುಸುಮಶರನಂಬಸ ಕೇಳೀನಿಳಯದಂತೆ ಕಾಣ್ಬರಕಣ್ಗೆ ಕೌತುಕಮನೊದವಿಸಿ ನುತಿಪರ ರಸನೆಗತರ್ಕ್ಯಮೆನಿಸಿ ವಸುಧೆಗೆ ಬಿಸವಂದಮನೀವಪಸದನಂಬಡೆದ ಪೊಸಪಸುರ್ವಂದರೊಸಗೆ ಮಿಗೆ ಮಿಸುಗುತಿರ್ದುದಂತು ಮಲ್ಲದೆಯುಂ

ವೃ|| ಅದು ಪರಿಶೋಭಿಸಿತ್ತು ಮಧುವಿಂ ವಿಧುವಿಂ ವಧುವಿಂ ಪರಾಗಮಂ |
ಕೆದರ್ವಲಸತ್ಪ್ರಸೂನಸರದಿಂ ತರದಿಂ ನೆರೆದಿಂಬುಗೊಂಡಕೋ ||
ವಿದಕುಲದಿಂ ನರೇಂದ್ರಸುತರಿಂ ಹಿತರಿಂ ನುತರಿಂ ಕವೀಂದ್ರರಿಂ |
ಸದಮಳ ಶೈವವಿಪ್ರತತಿಯಿಂ ಶ್ರುತಿಯಿಂ ಕ್ರತುವಿಂದೆ ಮಂಟಪಂ || ೬

ಅರಲ ಸರಂಗಳಂ ನಪಿವ ಲಾಜೆಯುನೋಲೆಯೊಳಾಯ್ತು ಪುಷ್ಪಮಂ |
ಜರಿಗೆ ಹಿಮೋದಕಂದಳಿವ ಕತ್ತುರಿಸಾರಣೆಗೆಯ್ವ ಚಿತ್ರಮಂ ||
ಬರೆವ ಕದಂಬಮಂ ನೆಗಳ್ವ ನೀಪಯನೊತ್ತುವ ಪುಷ್ಪಪುತ್ರಿಕಾ |
ವಿರಚನೆಗೆಯ್ವ ನೀರೆಯರದೇನೆಸೆದಿರ್ದರೊ ಮಂಟಪಾಗ್ರದೊಳ್ || ೭

ವ|| ಮತ್ತಮಲ್ಲಿ

ವೃ|| ಮುಡಿಮುಡಿ ತಾಗಿ ಸೂಸೆ ಮುಡಿದುಳ್ಳಲರೆಲ್ಲೆಡೆಯೊಳ್ಪಳಂಚಿ ಪೊಂ |
ಗೊಡಮೆಡೊಂದನೊಂದೊರಸೆ ತದ್ರುಚಿವೊಕ್ಕುದೆನಿಪ್ಪಭಾವಮಂ ||
ಕುಡೆ ಸಿಬಿಡಪ್ರಕಂಪಿತಕುಚಚ್ಯುತಕುಂಕುಮರೇಣು ತಮ್ಮ ಕೇ |
ಸಡಿಗಳ ಕೆಂಪು ಕೆಂದಳಿರ ಸಾಲಿಡೆ ಸಂಚಿಪಲ್ಲವಾಂಗಿಯರ್ || ೮

ವ|| ಮತ್ತಮಾಮಂಟಪಂ ಮಧುಸಮಯದಂತೆಪ್ರೋಲ್ಲಮದಾಳಿ ಸುಮನೋಮನೋಜ್ಞಮುಂ ದಿವದಂತನಂತಮಣಿಕಿರಣಾಲಂಕೃತಮುಂ ಸಮುದ್ರದಂತೆ ಸದಾರವಿಭವಾನ್ವಿತಮುಂ ಸಂಧ್ಯಾಸಮಯದಂತೆ ಸಭಾಸುರಾಗರಂಜಿತಮುಂ ಸತ್ಯಲೋಕದಂತೆ ಸುಧೀರರಾಜಾನ್ವಿತಮುಂ ಪುರಂದರಪುರದಂತೆ ಸದಾರಂಭಾನ್ವಿತವಿಬುಧಮಿಳಿತಮುಂ ಅಯೋಧ್ಯಾನಗರದಂತೆ ಮಹಾಲಂಕಾರಾತಿಶೋಭಿತಮುಂ ತಪೋವನದಂತೆ ಸದರ್ಘವೇದ್ಯುಪಶೋಭಿತಮುಂ ಪಾಂಚಾಲಿಕೋದಂಚಿತಮಾಗಿಯುಂ ಕಲಶಜಾತಸಮನ್ವಿತಮುಂ ಸದಾಮೋದರಮಣೀವಿಲಸಿತಮಾಗಿಯುಮಜಡಾಶ್ರಯಮುಂ ಚಿತ್ರಕಾಯಾಶ್ರಯಮಾಗಿಯುಂ ಮೃಗಮದಸಮುದ್ಧಿಭಾಜನಮುಂ ಪ್ರವಾಳದಂಡಮಂಡಿತಮಾಗಿಯುಂ ಅನಂಜನಾತ್ಮಜಾತಮುಂ ಸಮಧುರವಿತತಾಬ್ಜೋಪಲಸಿತಮಾಗಿಯುಂ ಮುಕ್ತಾಳಿವಿತಾನಮುಂ ಶಿವಪ್ರಭಾವಾಶ್ರಿತಮಾಗಿಯುಮತನುವಿಳಾಸಾಸ್ಪದಮೆನಿಸಿದುದಲ್ಲಿ

ಕಂ|| ಭಗಣಂ ಬಳಸಿರೆ ಕಿರುವೆ |
ಳ್ಮುಗಿಲೊಪ್ಪುವ ತೆರದೆ ಸುತ್ತಿ ಮುತ್ತಿನಮಣಿಸಾ ||
ಲ್ಮೊಗಯಿಸೆ ನಡುವೆಸೆದುದು ಝುಗ |
ಝುಗಿಸುತೆ ಬಜ್ಜರದ ಪಟ್ಟವಣೆ ವೇದಿಕೆಯೊಳ್ || ೯

ವ|| ಆದರ ಮುಂಗಡೆಯುಲ್ಲಿ

ಕಂ|| ಬಳಸಿರೆ ಮೃಣಾಳಗುಣಮು |
ಗ್ಗಳಿಸಿರೆ ಮಣಿದರ್ಪಣಂ ಮಹೌಷಧಿಗಳ್ಕಂ ||
ಗೊಳಿಸಿರೆ ಪಲ್ಲವತತಿ ಸಂ |
ಗಳಿಸಿರೆ ಮಣಿಪೂರ್ಣಕುಂಭವೊಪ್ಪಿದುದದರೊಳ್ || ೧೦

ವೃ|| ದಧಿ ಜವೆ ದೂರ್ವೆ ಲಾಜೆ ಪೊಸಸಂಕು ಸರೋರುಹತಂತು ರೋಚನಂ |
ಮಧು ಮಣಿಮಾಲೆ ಮಾದಳದಪಣ್ಕದಳೀಫಳಮಿಕ್ಷು ಬಾಸಿಗಂ ||
ಸುಧೆ ಸಿರಿಗಂಪು ಕುಂಕುಮರಸಂ ಕಳವಾಕ್ಷತೆ ರತ್ನದರ್ಪಣಂ |
ವಿಧುಮಣಿಪೂರ್ಣಕುಂಭಮೆಸೆದತ್ತು ವಿವಾಹಗೃಹಾಂತರಾಳದೊಳ್ || ೧೧

ವ|| ಇಂತನಂತಾನಂತಗರ್ಗಂ ನುತಿಸಲಸದಳಮಾದಶೋಭಾವಹಶುಭಮಂಟಪಂ ವಧೂವರರ ಬರವಂ ಬಯಸುತ್ತಿದ್ದುರ್ದಾಸಮಯದೊಳ್ಸಿಂಹಳೇಶ್ವರನ ಬೆಸದಿಂ ಕಳಾವಿದೆಯರಾದಕೆಳದಿಯರೇಳ್ತಂದೊಸಗೆಮುರುಳ್ಗೊಂಡು ಬಂದುನಿಂದು

ಕಂ|| ಒದವಿದಯೌವನ ರಾಜ್ಯಾ |
ಭ್ಯುದಯಕ್ಕಭಿಷೇಕಿಪಂತೆ ಮದನನ ಬೆಸದಿಂ ||
ಸುದತಿಯರಾಯುವತಿಗೆ ಮಾ |
ಡಿದರೊಲವಿಂ ಪರಿಮಳಾಂಬುವಿಂ ಮಜ್ಜನಮಂ || ೧೨

ಅನಂತರದಲ್ಲಿ

ಕಂ|| ಉಗುರ್ಗದಿರಳಕಾಳಿಗೆ ಮ |
ಲ್ಲಿಗೆಗುಡೆ ಬಿಡೆಬಿದಿರ್ದು ಬಿಚ್ಚಿ ಬಿಡದಾರಿಸಿ ಮೇಣ್ ||
ಮುಗಮುಗಿಪಮೃಗಮದದ ರೇ |
ಣುಗಳಂ ತಳಿದಾಳಿ ಕಟ್ಟಿದಳ್ಸೋರ್ಮುಡಿಯಂ || ೧೩

ದಿನಲಕ್ಷ್ಮಿಗಿಂದ್ರದಿಗ್ವಧು |
ವಿನಯದೆ ಪೊಂಬಿಸಿಲನುಡಿಸಿದಂತಿರೆ ಪದ್ಮಾ ||
ನನೆಗೆ ಪೆರಳ್ಪೊಂಬಟ್ಟೆಯ |
ನನುಗೊಳಿದಳವಳ ವಿಪುಳಜಘನಾಚಳದೊಳ್ || ೧೪

ಎಳನೇಸರ ಕೆಂಬೆಳಗಂ |
ತಳೆದಬ್ಜನಿಯಂತೆ ಕಾಂತೆ ಕುಂಕುಮದಣ್ಪಂ ||
ತಳೆದೆಸೆದಳ್ತನುಲತೆಯೊ |
ಳ್ತೊಳಗುವಪೊಸಪೊನ್ನಪುತ್ತಳಿಯನೇಳಿಸುತುಂ || ೧೫

ವಿರಹಿಜನದೆರ್ದೆಯನೆತ್ತ |
ಪ್ಪೊರೆದಂಗಜನಸುಗೆಸರದ ಚೆಲ್ವಂ ತಳೆದ ||
ತ್ತುರರೆ ನವಯಾವಕದ್ರವ |
ಪರಿಲಿಪ್ತಂ ಚರಣತಳಮದಬ್ಜಾನನೆಯಾ || ೧೬

ಅಡಿಯಿದು ನಳಿನದೆ ಜಯಮಂ |
ಪಡೆದುದು ನಡೆಯಿಂದಮಾಮರಾಳದ ಮಟಮಂ ||
ತೊಡೆದುದೆನುತಬಳೆ ಬಿರುದಿನ |
ತೊಡರಂ ತುಡಿಪಂತೆ ತುಡಿಸಿದಳ್ನೂಪುರಮಂ || ೧೭

ಸ್ಮರಕರಿಯ ಶಿರದ ಸಿರಿಯಂ |
ಗುರುಜಘನಂ ಕಳ್ದುದೆಂದು ಕಾವನ ಬೆಸದಿಂ ||
ತರಳೆ ಮಿಗೆ ಕಟ್ಟಿದಪಳೆನೆ |
ಸುರುಚಿರಕಟಿಸೂತ್ರಮಂ ತೊಡಚ್ಚಿದಳೊರ್ವ್ವಳ್ || ೧೮

ಇನಿಯನ ಮನೋಮಯೂರಂ |
ಬಿನದಿಸುಗೆ ನಿತಂಬಗಿರಿನಿತಂಬದೊಳೆನುತುಂ ||
ವನಿತೆ ಸಳೆಮಿಂಚನಿಟ್ಟಪ |
ಳೆನೆ ಕಾಂಚನಕಾಂಚಿಯಂ ಕರಂ ಕೈಗೈದಳ್ || ೧೯

ವದನವಿಧುರುಚಿ ಮುಸುಂಕಿದೊ |
ಡದಿರನಿರೆಂದಒಳೆ ಕುಡಿಪನ್ವೋಲೆಳವಿಸಿಲಂ ||
ಸುದತಿಯು ಕುಚಚಕ್ರಕೆ ತುಡಿ |
ಸಿದಳೊಲಪಿಂ ಮಿಸುಪಮಿಸುನಿರವಕೆಯನೊರ್ವ್ವಳ್ || ೨೦
ಸ್ತನಕನಕಕಮಳಕಳಿಕೆಗ |
ಳನೆ ತಳೆದ ಮೃಣಾಳಮೆನಿಸಿ ತೋರ್ಪ್ಪವೊಲೊರ್ವ್ವಳ್ ||
ವನಿತೆಯುರದಲ್ಲಿ ಪೊಸಮು |
ತ್ತಿನ ಘನನಕ್ಷತ್ರಮಾಲೆಯುಂ ತೆಗೆದಿಟ್ಟಳ್ ೨೧
ವ|| ಆಗಳ್

ಕಂ|| ಸ್ತನಗಿರಿಯೊಳುದಯಿಪಂ ಕಾಂ |
ತನಖಕ್ಷತ ತರುಣಚಂದ್ರನೆಂದುಡುಗಣವೊ ||
ಯ್ಯನೆ ಬಂದು ಮುನ್ನಮಿರ್ದ್ದಪು |
ದೆನೆ ತಾರಾಹಾರಮಿಂಬುವೆತ್ತುದು ಸತಿಯಾ || ೨೨
ಸಂಪಗೆಯದುಂಡುದಂಡೆಗ |
ಳಂಪಿಂ ಮಲ್ಲಿಗೆಯ ದಂಡೆಯುಂ ಕೆಳೆಗೊಳಿಪಂ ||
ತೆಂಪಡರೆ ತೋಳ್ಗೆ ಮೌಕ್ತಿಕ |
ದಿಂಪುದಿದುರುಬಾಹುಪೂರಮುಂ ಪದೆದಿತ್ತಳ್ || ೨೩
ಜನಕರಮುಡುಗಣಮುಂ ಕ |
ಟ್ಟೆನೆಲಕ್ಕೆಳಿತಂದು ನಳಿನಕಿತ್ತಪುದೆನೆ ಕಾ |
ಮಿನಿಯ ಕರಾಗ್ರದೊಳಿಡೆ ಕಾಂ ||
ಚನವಲಯುಂ ಮೌಕ್ತಿಕಾನ್ವಿತಂ ಕಣ್ಗೊಳಿಕುಂ || ೨೪
ಚೆಂಗುಡಿಗುಡಿಯೆಡೆಯೆಡೆಯೊ |
ಳ್ಪಿಂಗದೆ ನೆಗೆದೇರಿ ನಿಂದಮಣಿಗಳಿವೆಂಬೊಂ ||
ದಂಗಮ ನೊಡಚ್ಚಿ ಮಾಣಿಕ |
ದುಂಗುರಮುಂ ಸುಣ್ಬೆರಲ್ಗಳೊಳ್ಕೈಗೈದಳ್ || ೨೫

ನುತಸುಕರಪದ್ಮರಾಗಂ |
ಕ್ಷಿತಿಯೊಳ್ರವಿಯಿಂದೆ ಮೆರೆವುದುಚಿತಮುದೀಗಳ್ ||
ನುತಸುಕರಪದ್ಮರಾಗ |
ಸ್ಥಿತಿಯಿಂ ರವಿ ರಾಗವಾಂಪುದಿದು ಚಿತ್ರತರಂ || ೨೬

ಸ್ತನಕನಕಕಂಜಕೋರಕ |
ಮನಿಶಂ ವಿಕಸನಮನಾನದಿರ್ಕ್ಕೆಂದು ಪಳ ||
ಚ್ಚನೆ ಮೂಡುವಿಂದುವಿಟ್ಟಪ |
ಳೆನೆ ಕಟ್ಟಿದಳ್ಕೆರೆದಾಳಿಯುಂ ಪೆರಳೊರ್ವ್ವಳ್ || ೨೭

ವನಿತೆಯ ಕಣ್ಗೊಸೆದಿಲ ಸಿರಿ |
ಗನುಕೂಲಮಿದೆಂದು ಚಂದ್ರಬಿಂಬದ್ವಯಮಂ ||
ಮನಸಿಜಜಯರಮೆ ಸಾರ್ಚ್ಚಿದ |
ಳೆನೆ ತುಡಿಸಿದಳೆಸೆವಮುತ್ತಿನೋಲೆಗಳೆರಡಂ || ೨೮

ಹಸನರಸವೆಂಬಸುಧೆ ತೆರೆ |
ಮಸಗೆ ಸಿಡಿಲ್ದುದರತೋರಪನಿ ತಳ್ತವೊಲೊ ||
ರ್ವ್ವಸಿಯುಳಿಪ ಮಿಸುಪಮುತ್ತಿನ |
ಪೊಸಮೂಗುತಿ ಮೆರೆದುದಾಸ್ಯದೊಳ್ಸ್ಮಿತಮುಖಿಯಾ || ೨೯

ಸುರಗೀರ್ಯಯುಲಾಗಡೆಲೆಹಂ |
ದಿರ ಕಲೆಗಳನೆಂದು ಬಂದು ಪೊಡೆಯೊಳ್ತಲೆಯಿ |
ಟ್ಟಿರದೆರೆವಶುಕ್ರನೆನೆ ಭಾ |
ಸುರನಾಸಾಮಣಿ ವಿರಾಜಿಸಿತು ಮೊಗಸಸಿಯೊಳ್ || ೩೦

ಇಂದೀವರದಸಿತರಜಂ |
ಪೊಂದಿದುದೆಲರಲೆಯೆ ತುದಿಯನೆನಿಸುತೊರ್ವ್ವಳ್ ||
ಚಂದಿರಮೊಗದೆಳೆಯುಳ ನಯು |
ನೇಂದೀವರಕಾಗಳೆಚ್ಚಿದಳ್ಕಜ್ಜಳಮಂ || ೩೧

ಮೊಗವೆಂಬಪೂರ್ಣಚಂದ್ರನೊ|
ಳೊಗೆದಳಿಕಾರ್ಧೇಂದು ಪೆತ್ತುದೆನೆ ಸಸಿಗೆರೆಯಂ ||
ಮಿಗೆಮೆರೆವಭಸಿತತಿಲಕಮು |
ನುಗುರ್ಗೊನೆಯಿಂ ತಿರ್ದ್ದಿ ರಚಿಸಿದಳ್ಪೆರಳೊರ್ವ್ವಳ್ || ೩೨

ಅಲರ್ದೆಸೆವಕರ್ಣಪೂರೋ |
ತ್ಪಲದಸಿತರಜಂ ಕಳಲ್ದು ಪಸರಿಸಿತೆನೆ ಕೋ ||
ಮಲೆಯು ಕದಪಿನೊಳೆ ಬರೆದ |
ಳ್ನಲಿನೇಕ್ಷಣೆ ಮಿಸುಪಮಕರಿಕಾಪತ್ರಿಕೆಯಂ|| ೩೩

ವದನೋದಿತೇಂದುವಿನ ಜಂ |
ಗದಿರಿದಿರೇರ್ವ್ವಂತೆ ಸಿಂದುರಂ ತಳ್ತಿರೆ ತ |
ತ್ಸುದತಿಯ ಚಿಕುರತಮಂ ಕೊ |
ಟ್ಟುದೆನಲ್ಬಟ್ಟೆಯನದರ್ಕ್ಕೆ ಬೈತಲೆ ಮೆರೆಗುಂ || ೩೪

ರಜನೀಮುಖವಿಧುವೆನೆ ಧೃತ |
ರಜನೀಮುಖವಿಧು ಪೊದಳ್ದಕಾರ್ತಸ್ವರನೀ ||
ರಜಮಧುರತೆದಾಳ್ದಿರೆ ಸೀ |
ರಜಮಧುರತೆಯಳಿನಿ ಪಾಯ್ದುದೆನೆ ಕುರುಳೆಸೆಗುಂ || ೩೫

ವೃ|| ದರಹಾಸಜ್ಯೋತ್ಸ್ನೆಯಿಂತಳ್ತೆಸೆವವದನಪೂರ್ಣೇಂದುವಂಸಾರ್ದ್ದನೀಲಾಂ|
ಬುರುಹಂಗಳ್ಕಂಗಳಾಕಾರಮನೆ ಪಡೆದು ಚೆಲ್ವಾದುವೆಂದಲ್ಲಿ ತಾಮುಂ ||
ಪುರುಡಿಂದಂತಪ್ಪಚೆಲ್ವಂ ತಳೆಯಲೆಳಸಿ ಕಾದಿರ್ಪ್ಪವೆಂಬಂತೆ ಶೋಭಾ ||
ಕರಕಾಂತಾಕರ್ಣದೊಳ್ಕಂಗೊಳಿಸಿದುವು ಲಸತ್ಕರ್ಣಪೂರೋತ್ಪಲಂಗಳ್|| ೩೬

ಕಂ|| ಮುಡಿ ನವಿಲಸಖ್ಯದಿಂದಂ |
ಕುಡಿಮಿಂಚಮರ್ದಪ್ಪಿ ನಿಂದುದೆನೆ ಮೆರೆವಿನವಮಾ ||
ಮುಡದಿಗೆ ಸೂಡಿದಳೊರ್ವ್ವ |
ಳ್ಬೆಡಂಗುವಡೆದೆಸವ ಸಂಪಗೆಯ ಮಾಲಿಕೆಯಂ || ೩೭

ವೃ|| ಕಾರ್ಮುಗಿಲಗ್ರದೊಳ್ಪೊಳೆವ ಭಾಸ್ಕರಬಿಂಬಮನುನ್ಮಯೂಖಮಾ |
ಲೋರ್ಮಿಯನೊರ್ಮೆ ಪೋಲ್ತಿರೆ ಮಣಿವ್ರಜಮಂಡಿತಮೊಂದ ತೊಂಡಿಲಾ ||
ಸೋರ್ಮುಡಿಯಲ್ಲಿ ನಲ್ಮೆಸುನಿದಂಡೆ ಮೃಗಾಕ್ಷಿಗೆ ತತ್ಸಖೀಜನಂ |
ಕೂರ್ಮೆಯೊಳಿಟ್ಟು ಸಿಂಗರಿಸಿ ನೀಕ್ಷಿಸಿ ತಾಳ್ದುದು ರಾಗದೇಳ್ಗೆಯಂ || ೩೮

ವ|| ಅಗಳ್

ವೃ|| ಅನುದಿನಮಿಕ್ಷುಚಾಪನೆಳವೆಂಡಿರ ಪೆರ್ಮೊಲೆವೆಟ್ಟಿನಲ್ಲಿ ನೆ |
ಟ್ಟನೆ ನೆಲೆಗೊಂಡು ತನ್ನ ತನುಧರ್ಮಮನೆಲ್ಲಮನೊತ್ತಿ ನಿಷ್ಠೆಯಿಂ ||
ನೆನೆಯೆ ನಿಜಪ್ರಸನ್ನೆಯೆನಿಸಿರ್ದಧಿದೇವತೆಯಂತೆ ಕಾಂತೆಕಾ |
ಮಿಸಿಯುರ ಕಣ್ಗೆ ಕಾಣಿಸಿದಳುಜ್ಜ್ವಳಭೂಷಣವಾಂಕು ಜೆಲ್ವಿನಿಂ || ೩೯

ವ|| ಮತ್ತಂ

ವೃ|| ಮಸೆದಲರಂಬನಂಬಕಮರೀಚಿ ವಲಂ ಗೆಲೆ ಪಾರ್ವಣೇಂದುವಂ |
ಮಿಸುಪಪೊಗಂ ಕರಂ ಪಳಿಯೆ ಪಂಕಜಕೋಶಮನುತ್ಕುಚಂ ಎಡಂ ||
ಬಸೆ ಗಜಕುಂಭಮಂ ಜಘನಮೇಳಿಸೆ ಸಣ್ಪೊಡೆ ಬಾಳೆಯಂ ಬಳುಂ |
ಕಿಸೆ ತಳಿರಂದಮಂ ತೆಗಳೆ ಮೆಲ್ಲಡಿ ಕನ್ನಿಕೆ ಕಣ್ಗೆ ತೋಱಿದಳ್ || ೪೦

ಕರಪಂಕೇಜಂಗಳೇಂ ಕಂಕಣದಿನೆಸೆವುದಾಶ್ಚರ್ಯಮೋ ಪಾಣಿಶಾಖೋ |
ತ್ಕರಚಂಚದ್ವಿದ್ರುಮೌಘಂ ಮಿಸುಪುದು ಪಿರಿದೇ ರತ್ನಯುಕ್ತೋರ್ಮಿಕಾಬಂ||
ಧುರವಿಭವಕ್ತ್ರೇಂದುಬಿಂಬಂ ಮೆರೆವುದಱಿದೆ ನಕ್ಷತ್ರಮಾಲಾವೃತಂ ತ್ವ |
ಚ್ಚರಣಾಬ್ಜಂ ಹಂಸಕಾರಾಜಿತಮೆನಿಸಿಪುದಿದೇಂ ಚಿತ್ರಮೋ ಪೇಳ್ಮೃಗಾಕ್ಷೀ|| ೪೧

ವ|| ಎಂದು ಕಳಾರವೆ ಪೊಗಳುತ್ತಿರೆ ಮತ್ತೊರ್ವ್ವಳ್ಮುಕುರಮುಖಿ ಸಖೀಮುಖೇಂದುಗಿಂದುಬಿಂಬಮಂ ಸರಿಯಿಟ್ಟು ಪರೀಕ್ಷಿಪಳೆನೆ ಮಣಿಮುಕುರಮನೆತ್ತಿ ಪಿಡಿಯಲೊಡನೆ

ಕಂ|| ಒಳಕೈದುದವಳ ಮುಖಮುಂ |
ಡಳವಿಧುಮಂಡಳಮನಮಳಮಣಿಮುಕುರಮಿಳಾ ||
ತಳದೊಳ್ಪೆರರಿರ್ದ್ದರವಂ |
ತಿಳಿಪುವವಿಮಳರ್ಗ್ಗಧೀನಮಾಗದರೊಳರೇ || ೪೨

ವ|| ಇಂತುಮಾಸರ್ವಮಂಗಳಾಮಹಾದೇವಿ ಪಸದನಂಬಡೆದು ಸಖೀಜನ
ಮಧ್ಯದೊಳ್ಸಂಭ್ರಮದಿನಿರ್ಪಿನಮಿತ್ತಲ್

ವೃ|| ಸನ್ನುತಿವೆತ್ತತನ್ನೃಪಸುತಂಗೆ ವಿಳಾಸಿನಿಯರ್ವಿಳಾಸದಿಂ |
ದನ್ನವಗಂಧತೈಲಮನೆ ಪೂಸಿ ಕಚೌಘಕೆ ಸಾರ್ಚಿ ನಲ್ಮೆಯಿಂ ||
ರನ್ನದಪೀಠಮಂ ಮೊಳಗೆ ವಾದ್ಯರವಂ ವಿವಿಧೋತ್ಸವಂಗಳಿಂ |
ಪನ್ನಗವೇಣಿಯರ್ಸ್ಸರಿದು ಸೂಸಿದರೊಲ್ದು ಸುಗಂಧವಾರಿಯಂ || ೪೩

ಕಂ|| ತರುಣಸುರತರುಗೆ ಸುರಿವಂ |
ತಿರೆ ಸುರತರುಣಿಯರಮರ್ತ್ಯನದಿಯುದಕಮನಾ ||
ತರುಣಿಯರರಸಂಗೊಳ್ಗ |
ಪ್ಪುರವೆರೆದಮಳಾಂಬುವಿಂದೆ ಒಳಕಂಗೆಯ್ದರ್ || ೪೪

ವ|| ಅನಂತರಂ

ಕಂ|| ಸಿಂಗರಿಸಿದನಖಿಳಕಳಾ |
ಸಂಗತನಲರ್ವಿಲ್ಲನಂಗಮಂ ಸಿಂಗರಿಸಂ ||
ತಿಂಗದಿರಂ ಸಾಂಗನುಸೋ |
ಜಂಗೆಣೆಯೆನೆ ಮಿಸುಪಕುವರನಂ ಸಖಿಸೊರ್ವ್ವಂ || ೪೫

ವ|| ಮತ್ತಮಾಗಳ್

ವೃ|| ಪರಿಸಲ್ಕೆ ಶ್ರೀಕಾಂತೆ ತಾಂ ತಂದಿಳಿಪಿದವಿಳಸನ್ಮಲ್ಲಿಕಾಮಾಲ್ಯಮೆಂಬಂ |
ತಿರೆ ಹಾರಂ ವಕ್ಷದೊಳ್ಪಂಕಜಕೆ ಬಳಸಿ ನಿಂದಂಜೆಯುಂಡಂಗಳೆಂಬಂ ||
ತಿರೆ ಮುಕ್ತಾಕಂಕಣಂ ಕೈವಿಡಿದಲೊಳುಡುಗಳಂ ಕಟ್ಟಿ ವಕ್ತ್ರಾಬ್ಜಮಿಟ್ಟಂ|
ತಿರೆ ಕರ್ಣಾಲಂಬಿ ಮಾಣಿಕ್ಯಮುತ್ತುಗಳ ತೊಡವು ಚೆಲ್ವಾದನಾರಾಜಪುತ್ರಂ|| ೪೬

ಕೊಂಕಿದಪುರ್ಬ್ಬ ನೀಳ್ದಸಗೆಗಣ್ಕಳೆವೆತ್ತಮುಖೇಂದು ಶಂಖಮುಂ |
ಝುಂಕಿಪನುಣ್ಗೊರಲೊತ್ತಿಳಪುರಸ್ಸ್ಥಳವಾಯತಬಾಹು ಕಾಂತಿಯಿಂ ||
ಪಂಕಜಮಂ ಕರಂ ತೆಗಳ್ವಕೆಂದಳಮೊಳ್ನಡು ಬಾಳೆಗಂಬಮಂ |
ಮಾಂಕರಿಸುತ್ತೆ ತೋರ್ಪ್ಪತೊಡೆ ಮೆಲ್ಲಡಿ ರಂಜಿಕುಮಾಕುಮಾರನಾ || ೪೭

|| ಮಣಿಭೂಷಣವೃತ್ತಂ ||

ವೃ|| ಕಾವನಾಕುವರನಂಗದ ಜೆಲ್ವಿಕೆಗಂಡು ರಾ |
ಜೀವಲೋಚನೆಯರೆನ್ನಿರವಂ ಪಳಿಕ್ಕೈವರೆಂ ||
ದೇವಿಚಾರಿಸುತೆ ನಾಣ್ಚುತೆ ಪ್ಯೊಗರೆದಿರ್ಪ್ಪನಾ |
ಪೀವರಸ್ತನಮಹೀಧರಮಧ್ಯದೊಳೀಗಳುಂ || ೪೮

ವೃ|| ಪೊದೆದನವೀನಚೀನವಸನಂ ತಳೆದುಜ್ಜ್ವಳರತ್ನಭೂಷಣಂ |
ಪದೆದು ಕಿರೀಟಮಧ್ಯದೊಳಮುಚ್ಚಿದರತ್ನದ ಶೇಖರಂ ಸಿಜಾಂ ||
ಗದೊಳಿರದಣ್ಪುಗೈದಸಿರಿಗಂಪು ಕರಾಬ್ಜದೊಳಾಂತಮಾತುಳಂ |
ಗದಫಳಪೊಪ್ಪೆ ಬಂದವನೀಶ್ವರಪುತ್ರನುದಾತ್ತವೈಭವಂ || ೪೯

ಕಂ|| ಮಿಳಿರ್ವಪತಾಕಾವಳಿ ಮೇ |
ಲಳುಕ್ಕೆಗೊಳೆ ಮೌಕ್ತಿಕಾತಪತ್ರಪ್ರಕರಂ ||
ತೊಳಗೆ ಬಳಸಿರ್ದ್ದನೃಪಮುಂ |
ಡಳಿಮೊಳ್ಕರಿಯೇರಿ ನೃಪತಿ ಬರ್ಪ್ಪವಸರದೊಳ್ || ೫೦

ವ|| ಮತ್ತಂ

ಕಂ|| ದೆಸೆಯುಂ ತುಂಬಿರೆ ತೂರ್ಯ |
ಪ್ರಸರಧ್ವನಿ ತೀವೆ ಬಹುಳಕಹಳಾರವಮೊ ||
ರಸೆಯಿಂಬಲ್ಗೆಂಬಂತಿರೆ |
ಮುಸುಂಕೆ ಕರಿತುರಗರಥಪದಾತಿಗಳಾಗಳ್ || ೫೧

ವೃ|| ಕರಕಂಜಾತಕ್ಕೆ ಪುಟ್ಟಿರ್ದ್ದಬುಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾ|
ಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಗಳೊಳ್ಗಂಪುಪಾದಾಂ ||
ಬುರುಹಪ್ರಸ್ಯಂದಮೊಕ್ಕಂತಿರೆ ನಖರುಚಿಸಂಮಿಶ್ರಿತಾಲಕ್ತಕಂ ಬಂ |
ದರಮಂದಾನಂದದಿಂದಂದಿದಿರನವನಿಪಾಲಾಜ್ಞೆಯಿಂ ಕಾಂತೆಯರ್ಕ್ಕಳ್ ||೫೨

ವ|| ಅಂತುಮಲ್ಲದೆಯುಂ

ವೃ|| ಸ್ತನಯುಗ್ಮಂ ಪೂರ್ಣಕುಂಭದ್ವಯಮಳಿಚಳಚೂರ್ಣಾಳಕಂ ತೋರಣಂ ಕಾಂ|
ಚನಕಾಂಚೀದಾಮಚಂಚದ್ದ್ಯುತಿಯುರಿವನಲಂ ದರ್ಪಣಂ ಗಂಡಮಬ್ಜಾ ||
ನನಮಬ್ಜಂ ಶಂಖಮುದ್ಯದ್ಗಳಮಧರದಳಂ ಬಿಂಬಮಿಂತಾಗೆ ಕಾಂತಾ |
ಜನಮಂದೈತಂದು ದಿಷ್ಟಾಸ್ತಿಯನರಿಪುವ ಮಾಂಗಲ್ಯಮೆಂಬಂದದಿಂದಂ || ೫೩

ವಿಸರಜ್ಜಾಂಬೂನದೀಪೂರದೊಳೆ ಬೆರೆದಗಂಗಾಪ್ರವಾಹಂಬೊಲಿಂಬಾ |
ಗೆ ಸುಧಾಧಾಮಪ್ರಭಾಭಾಸುರಮದು ಬಿಸಿಲೊಳ್ತೀವಿ ನೇತ್ರಾಂಶು ಮಂಜೀ||
ರಸಮುದ್ಯನ್ನಾದಮೀಭೂಮಿಯ ತಳೆದಹಿಪಂಗೆಳ್ಚರಂ ಪೇಳ್ವವೋಲ್ರಂ |
ಜಿಸೆ ತತ್ಪೀನಸ್ತನಪ್ರೋಚ್ಚಘನವಪನದೊಳ್ಪೆಂಡಿರೈತಂದರಾಗಳ್ || ೫೪

ವ|| ಮತ್ತಂ

ವೃ|| ತರಳಕಟಾಕ್ಷರೋಚಿ ಪೊಸಲಾಜೆಯ ಸೂಸೆ ಮೃದುಸ್ಮಿತಂ ಸಿತಾಂ |
ಬುರುಹದೆ ತೋರಣಂಗೊಳಿಸೆ ಪಾದ್ಯರವಂಗುಡೆ ಸಿಂಚಿತಂ ಚಲ ||
ಚ್ಚರಣನಖಾಂಶು ಪಾಸೆ ಮುಡಿಯಂ ಗುಡಿಗಟ್ಟೆ ಚಳಾಳಕಂ ಪಯೋ |
ಧರಕಲಶಕ್ಕೆ ಚಂದಳರಸೊಂಡಸೆ ಚಂದುಟಿಗೆಂಪು ಕಾಂತೆಯರ್ || ೫೫

ಕಂ|| ಇದಿರ್ಗೊಂಡರಮುರನಾರಿಯ |
ರಿದಿರ್ಗೊಂಬಂತಮರರಾಜನಂ ಕಣ್ಗದಿರ್ಗಳ್ ||
ಪುದಿದಿರೆ ಸುರಕರಿಯಿರವಂ |
ವೃ|| ಮದಗಜಮದು ಪೋಲ ಮೇಲೆ ಮೆರೆವವನಿಪನಂ || ೫೬

ತಿರೆ ವ|| ಆಗಳ್ಸಂಭ್ರಮಂ ನೆರೆದು ನೆಲೆವನೆಯ ನೆಲೆನೆಲೆಗಳೊಳ್ನಿರೀಕ್ಷಿಪಬಳೆ
ತಿರೆ ೀಳ್ದ ಕಡೆಗಣ್ಣ ಕದಿದ್ದುರುಗಳೆಂಬರಲ ಸರಿಯ ಪಿರಿಯಸಿರಿಯಿಂ ಸಕಳ ರಾಜ
ತಿರೆ ೀಟ ಕೋಟಿಘಟಿತ ಮಣಿಗಣರುಚಿರರುಚಿನಿಚಯತರುಣದಿನಕರಕರನಿಕರ
ದಳಿತ ಧವಳನಳಿನಂಗಳೆಂಬಂತೆ ನಿಲುಂಬಿ ಸಿಂದಧವಳಾತಪತ್ರಸ್ಪ್ರತಾನದಿಂ ದಶದಿಶೆ
ಯೊಳ್ಪರಕಲಿಸಿ ಪರ್ಪ್ಪಟಪಟಹಡಿಂಡಿಮಶಂಖ ಕಹಳಾಮುರಜಾಮೃದಂಗಢಕ್ಕಾದಿ
ವಾದ್ಯನಿನಾದದಿಂ ಮುಂದೆ ಸಂದಣಿಸಿ ಕೈಯೆತ್ತಿ ಪೊಗಳ್ವವಂದಿ ವೃಂದದ ಕೋಲಾ
ಹಲಧ್ವಾನದಿಂ ಪಿಂದೆ ಗೊಂದಣಂಗೊಂಡು ತುರಂಗಮನೇರಿ ಬರ್ಪ್ಪದಂಡನಾಥ

ಮಂಡಳಿಕರ ತಂಡದಿಂದೆಡಬಲದೊಳ್ಬೀಸುವಧವಳಚಾಮರದ ನೆಗಪುವಸೀಗುರಿಯ ಪಿಡಿದುಬರ್ಪ್ಪನವರತ್ನದ ನಡೆತೋರಣದ ನಭಮನಳ್ಕಿರಿದು ಮಿಳಿರ್ವಪಳವಿಗೆಗಳ ವಿಳಾಸದಿಂ ಮಿಕ್ಕು ಪೊಕ್ಕು ಕಿಕ್ಕಿರಿಗಿರಿದು ಬರ್ಪ್ಪಕರಿತುರಗರಥಪದಾತಿಗಳ ಪೆರ್ಮ್ಮೆಯಿಂ ವಿಸ್ತರಿಸಿದ ವಸ್ತುಕಾರದ ಕನಕಪಾತ್ರೆಗಳಂ ಮಣಿಭರಣಂಗಳ್ಪುದಿದಪೆಟ್ಟಿಗೆಗಳಂ ಪರಿಮಳಪ್ರಕರಪರಿಮಿಳಿತಭಾಜನಂಗಳನೋಜೆಯಿಂ ಪಿಡಿದೆಡೆವಿಡದೆ ಗಡಣಂಗೊಂಡು ಬರ್ಪ್ಪಮಡದಿಯರಿಂದತಿಸಂಭ್ರಮಂ ನೆಗಳೆ ಸುರೇಂದ್ರವೈಭವಮಂ ನರೇಂದ್ರತನೂಭವಂ ತಾಳ್ದು ಮಿತವಚನಸಮೇತಂ ಬಂದು ರಾಜಗೃಹದ ಬಹಿದ್ವಾರದೇಶದೊಳ್ಗಜಸ್ಕಂಧದಿನಿಳಿಗವತರಿಸಿ ಸಚಿವಂ ಕೈಗುಡೆ ನಡೆತಂದ್ಮಮಹೋತ್ಸವಂ ಇಂಗೆ ಮಾಂಗಲ್ಯಮಂಟಪಮಂ ಪೊಕ್ಕು ಮಧುಪರ್ಕಮಂ ಕೈಕೊಂಡು ಪುಣ್ಯಾಹನೆಂಬಪುರೋಹಿತರವದೊಡನೆ ಭದ್ರವೇದಿಕೆಯನಲಂಕರಿಸಿಸದ್ಮತಿಯಿಂದಿರ್ಪ್ಪಾಗಳ್ಸುಮುಹೂರ್ತಂ ಸಾರ್ತ್ತಂದುದೆಂದು ಸಿಂಹಳೇಂದ್ರಂಗೆ ಪುರೋಹಿತಂ ನಿರವಿಸೆ ಕೇಳ್ದು ಕುವರಿಯಂ ಕರೆದು ತಪ್ಪುದೆಂದು ಸಚಿವಂಗೆ ಪೇಳಲೊಡನವಂ ಗಳಿಲನೆ ಪೋಗಿ ಮುನ್ನಮೆ ಪಸದನಂಗೊಂಡು ಪಸೆನೆಣ್ಣೆನಿಸಿದ್ದ ಕನ್ನೆಯಂ ಕರೆದುತರ್ಪ್ಪಾಗಳ್

|| ರಥೋದ್ಧತವೃತ್ತಂ ||

ಕಂ|| ಸುತ್ತಿತಳ್ತ ಸುದತೀಜನೇಕ್ಷಣೋ |
ದಾತ್ತಕಾಂತಿ ನವದುಗ್ಧವಾರ್ಧಿಯಂ |
ತೆತ್ತಮುರ್ವ್ವ ಸಿರಿಯುಲ್ಲ ಬರ್ಪ್ಪಪೋ |
ಲ್ವೃತ್ತಪೀನಕುಚೆ ಬರ್ಪ್ಪಳೊಪ್ಪಿದಳ್|| ೫೭

ವೃ|| ಮಣಿಭೂಷಾಭಾನುಭಾನು ಪ್ರಭೆಯನರುಣಿಮಂ ಮಾಡೆ ಚಂಚತ್ಕಟಾಕ್ಷೇ|
ಕ್ಷಣರೋಚಿರ್ಮಾಲೆ ಮಿಂಚಂ ಕರೆಯೆ ಮಿಸುಪವಕ್ತ್ರಾಂಶು ದಿಗ್ಭಾಗದೊಳ್ಪಾ||
ರ್ವಣಚಂದ್ರದ್ಯೋತಿಯಂ ಮೇಣ್ಪರಪೆ ಮೃದುಪದನ್ಯಾಸಕಂಚಿಚ್ಚಲತ್ಕಂ |
ಕಣಕಾಂಚೀಕಿಂಕಿಣೀ ನಿಕ್ವಣಿತಯುತೆ ವರಾಭ್ಯರ್ಣಮಂ ಸಾರ್ದ್ದಳಾಗಳ್||

ಕಂ|| ಮೊಳಗುವಭೇರಿಯ ಶಂಖದ |
ಪಳಹದ ಮದ್ದಳೆಯ ಘನ ಮೃದಂಗದ ಪಟುಕಾ |
ಹಳೆಯ ಬಹುವಿಧದವಾದ್ಯದ |
ಕಳಕಳಮೊಗ್ಗೆಸೆಯೆನಮರ್ದದೇಂ ಮುಸುಕಿದುದೋ || ೫೯
ಸಿರಿಯು ಹರಿಯೆಡೆಯೊಳಬ್ಧಿಯೊ |
ಳಿರದೇಳ್ವಸುವರ್ಣಕಂಜರಜದೊಡವೆರೆದೊ ||
ಳ್ದೆರೆಗೆ ದೊರೆಯಾದುದು ವಧೂ |
ವರರೆಸೆಯೊಳ್ಗಿಸುಸಮಿಸುಸಿದರೆ ಮಣಿಗೃಹದೊಳ್ || ೬೦
ಜವಸಿಕೆ ಸಕುವಿರೆ ನೋಡ |
ಲ್ತ್ವಸಕದಿನೋರೊರ್ವ್ವರಂ ಸಮುನ್ನತದೇಶ ||
ಕ್ಕವತರಿಸಿದರೆನೆ ಮುದದಿಂ |
ದವರಾಗಳ್ಮೆಟ್ಟಿ ಸಿಂದು ಪಟ್ಟಕ್ಕಿಗಳಂ || ೬೧
ಪಡೆದಿಟ್ಟಜ್ಜೀರಿಗೆಬೆ |
ಲ್ಲದಿನೊರ್ವ್ವರನೊರ್ವ್ವರತುಳತರಸಂಭ್ರಮದಿಂ ||
ಪದವರ್ಕ್ಕಳ್ನಿಜನಖರುಚಿ |
ಕೆದರುತ್ತಿರೆ ಕೂಡೆ ಮಲ್ಲಿಕಾಮಂಜರಿಯಂ || ೬೨
ನಳಿನಮುಡುಗಳನೆ ಸೆರೆಪಿಡಿ |
ದಳನೇಸಗ್ಗಿರ್ವತೆರದೆ ಕರಮದು ಮುಕುಟೋ ||
ಜ್ಜ್ವಳಮಣಿಕೆಂಪರದೆಸೆಯೊ |
ತ್ತಿಳಿದುದುಪೊಸಮುತ್ತಿನಕ್ಷತೆಯನಾವಧುವಾ || ೬೩
ಕಂ|| ಕಂದದಕುಂದದ ನನೆಯಂ |
ಕಂದರ್ಪಂ ರತಿಯ ಮುಡಿಗೆ ಸೂಸುವವೋಲಾಭ್ ||
ಕಂದರ್ಪಂ ಸೂಸಿದನೊಲಿ |
ದಿಂದವಳ ಕಚೌಘದಲ್ಲಿ ಧವಳಾಕ್ಷತೆಯಂ || ೬೪

ವೃ|| ಎಲರಲೆದೆತ್ತಿ ಸೂಂಕಿ ತೊಲಗುತ್ತಿರೆ ಪುಷ್ಪಪರಾಗಪೂಗಮಾ |
ವ್ರಲತೆಯ ಪಲ್ಲವಂ ಮಿಸುಪಶೋಕೆಯ ನುಣ್ದಳಿರೊಂದುವಂತೆ ಜೆ ||
ಲ್ವಲರೆ ಸುವರ್ಣಕಾಂಡಪಟನೋಸರಿಸುತ್ತಿರೆ ಸನ್ಮುಹೂರ್ತಮು |
ಜ್ಜ್ವಲಿಸೆ ವಧೂವರರ್ಕ್ಕಳ ಕರಗ್ರಹಣಂ ಬಗೆಗೊಂಡುದಾಕ್ಷಣಂ || ೬೫

ಕಂ|| ತೆರೆ ಸರಿಯೆ ಸಂಜೆ ಸರಿವಂ |
ತಿರೆ ವರವದನೇಂದುವಂ ನಿರೀಕ್ಷಿಸಿ ತಾರಾ ||
ತರುಣಿ ಮುದವಾಂಪಮಾಳ್ಕೆಯೊ |
ಳರಸಿ ಮುದಂಬೆತ್ತು ಬೀರಿದಳ್ನಿಜರುಚಿಯಂ || ೬೬

ವ|| ಆಗಳ್

ವೃ|| ನನೆಯಿಂ ಪೇರಿದ್ದ್ರ ಮಲ್ಲೀಲತೆಗಮುಪದ್ರ್ಸತ್ಕೋರಕಂಬೆತ್ತ ಚೂತಾ |
ವನಿಜಕ್ಕಂಚೈತ್ರಸಚ್ಛಾಂಬುವನೆ ಸುರಿವವೋಲ್ತ್ವೀರದವಾಬ್ಧ್ರಂದುರೋವಾಂ||
ಜನಮುಂ ಕೈಕೊಂಡು ನಿಂದಾತ್ಮಜೆಗನೊಡನೆ ಜಾವಾತೃಗಂ ಸಿಂಹಳೇಂದ್ರಂ|
ಮನವೊಲ್ದೋರಂತೆ ಕೈನೀರೆರೆದನಭಿನವ ಸ್ವರ್ಣ ಕುಂಭಾಂಬುವಿಂದಂ ||೬೭

ಪಾಡೆ ಶೋಭನಮುನಂಗನೆಯರ್ಕ್ಕಳ್ತಂಗಳ ಪಾರಕರುಪ್ಪಿ ಕೊಂ |
ಡಾಡೆ ಭೋಗ್ಗರೆದು ವಾದ್ಯನಿನಾದಂ ತೀವಿರೆ ಭೂಪರಬಾಂಧವರ್ ||
ನೋಡೆ ಸಂತಸದಿನಾಗಮಘೋಷಂ ಪೊಣ್ಮಿರೆ ಜಾಣ್ಮೆಗೆ ಹೋಮಮುಂ |
ಮಾಡೆ ಭೂಸುರರಿಳಾಪತಿಪುತ್ರಂ ಕೈಪಿಡಿದಂ ಕಮಳಾಕ್ಷಿಯಂ || ೬೮

ವ|| ಅಲ್ಲಿಂಬಳಿಯಿಂ

ಕಂ|| ನಡೆಮುಡಿಯೊಳೊಯ್ಯನೊಯ್ಯನೆ |
ನಡೆವವಧೂವರರವೇಂ ವಿರಾಜಿಸಿದರೊ ಬೆ ||
ಳ್ಪಡರ್ದ ಪುಳಿನಸ್ಥಳದೊಳಡಿ |
ಯಿಡುತೊಡನೈದುವಮರಾಳದಂಪತಿಗಳವೋಲ್ || ೬೯

ವೃ|| ಶ್ರುತಿವಿಹಿತಕ್ರಿಯಾಕುಶಲಶೈವಮತಾಶ್ರಿತಶಾಸ್ತ್ರವಿತ್ಪರೋ |
ಹಿತಕೃತಹೋಮಕುಂಡದೆಡೆಗೇಳ್ತರುತುಂ ಮದವರ್ಕ್ಕಳಂಬಿಕಾ ||
ಪತಿಯುತಮಿಂತಿದೆಂದು ಬಲವಂದು ಜಯಸ್ವನಸರ್ವವಾದ್ಯಸಂ |
ತತಿರುತಿ ತೀವೆ ವಂಡಿಸಿದರಕ್ಕಿದವೊಲ್ವಸೆಯೊಳ್ವಿಳಾಸದಿಂ || ೭೦

ಕಂ|| ನನೆವಾಸನೆನೆ ಮುತ್ತಿನಪಸೆ |
ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾ ||
ವನತಾಂಗಿ ಕೆಲದೊಳಿಳಿಸಿದ |
ನನೆವಿಲ್ಲನೆ ಸುಗುಣವತಿ ಕರಂ ಮೆರೆದಿರ್ದ್ದಳ್ || ೭೧

ಮೆಲ್ಲನೆ ನಲ್ಲನನೀಕ್ಷಿಪ |
ನಲ್ಲಳ ಕಣ್ಗಿದಿರ್ಗ್ಗೆಳಸೆದುವಾಕೆಯ ಕಡೆಗ ||
ಣ್ಣಲ್ಲಿ ನೆಲಸಿದಮನೋಜಂ |
ಮಲ್ಲಿಗೆಬಿರಿಮುಗುಳ ಸೇಸೆಯಂ ಸೂಸುವವೊಲ್ || ೭೨

ವ|| ಮತ್ತಮಲ್ಲಿ

ವೃ|| ಮಾಣಿಕವಜ್ಜ್ರಮಂ ತಳೆದು ಕುಂಕುಮದಣ್ಪನಮರ್ಚ್ಚಿ ಕಾಯಗೊ |
ಳ್ಳೋಣನವೀನವಾಸಮನಲಂಪಿನೊಳುಟ್ಟಿಳಮುತ್ತುಡೊಟ್ಟು ಕ ||
ಲ್ಯಾಣಿಯರಾಗಳಾರತಿಯ ಪೊಂಬರಿಯಾಣಮನಾಂತು ನಿಂದು ಮೇ |
ಣ್ಕಾಣಿಸಿದಸ್ಸ್ರಭೇಂದುಮತಿಸಂಜೆ ಬಹುತ್ವಮನಾಂತು ನಿಂದವೋಲ್|| ೭೩

ಮನದನುರಾಗದಿಂ ವಸಿತೆ ನೋಳ್ಪುದುಮಲ್ಲಿ ವರಾನನಾಬ್ಜಮಂ |
ತನು ಪುಳಕಂಗಳಂ ತಳೆಯೆ ನೇತ್ರದೊಳುಣ್ಮೆ ಸುಖಾಶ್ರು ಮೆಲ್ಲನೆ ||
ಲ್ಲನೆ ಬೆಮರುಣ್ಮೆ ಜಾಣ್ಮೆಯೊಳವಂ ಮರೆಸುತ್ತಿರೆ ದೂರಿದತ್ತು ಕಂ |
ಪನಕೃತ ಕಂಕಣಸ್ವನಮುಮ್ಯಾವಿಕಾಸಮುಮಾತ್ಮರಾಗಮಂ || ೭೪

ಆಗಳ್

ಕಂ|| ಪರಸುವಮುತ್ತೈದೆಯರಾ |
ದರಿಸುವಕುಲವೃದ್ಧರತುಳಮಂಗಳಮಂ ಬಿ ||
ತ್ತರಿಸುವವಿಬುಧರ್ನ್ನೆರೆದೊ |
ತ್ತರಿಸುವನಲ್ಪೇಂಡಿರೆಸೆದರಾ ಮಂಟಪದೊಳ್ || ೭೫

ಘನಕಚಘನಕುಚಭಾರದೆ |
ವನಿತೆಯರುರವೆ ಬಾಗುವಂತೆ ಬಾಗುತೆ ಕರದಿಂ ||
ದನವದ್ಯೆಯರಾಗಳ್ಮು |
ತ್ತಿನ ಸೇಸೆಯನಿಕ್ಕಿ ಪರಸಿದಮ್ಮ್ರನದೊಲವಂ || ೭೬

ವ|| ಆಸಮಯದೊಳಖಿಳಕಳಾವಿದೆಯರಾದಕೆಳದಿಯರುಂ ನೆರೆದನರೇಂದ್ರಪುರಂಧ್ರಿಯರುಮಭೀಕ್ಷಿಸಿ

ಕಂ|| ಶಿವೆಯ ವರದಿಂದೆ ಪುಟ್ಟಿದ |
ಕುವರಿಯಿವಳ್ತತ್ಪ್ರಸಾದದಿಂದಲ್ತೆ ಮನೋ ||
ಭವನನಿಳಿಕೆವ್ವವಚೆಲ್ವಿನ |
ಯುವರಾಜನೊಳೊಲ್ಮೆವೆತ್ತು ಪಸೆನಿಂದಿರ್ದ್ದಳ್ || ೭೭

ವ|| ಅಂತುಮಲ್ಲದೆಯುಂ

ಕಂ|| ಇವರಂದಮಿವರವಿಭ್ರಮ |
ಮಿವರತಿಲಾವಣ್ಯಮಿವರ ಸೊಬಗಿವರಕಳಾ ||
ನಿವಹಕ್ಕ್ರಿತೆಯಿವರಗುಣಂ |
ವಿವರಿಸೆ ಮತ್ತಿವರೊಳಲ್ಲದನ್ಯರೊಳೊಳವೇ || ೭೮

ವ|| ಎಂದುಮಗುಳ್ದುಮಗುಳ್ದೀಕ್ಷಿಸಿ ಪೊಗಳುತ್ತುಮಿರೆ

ಕಂ|| ಸರಿಯಿಟ್ಟು ನೋಳ್ಪವೋಲ್ಪಂ |
ಕರುಹನುಸವಳಡಿಗೆ ತನ್ನ ಕರಮದುತರಸಂ ||
ಸರಸಂ ಮಿಗೆ ಮೆಟ್ಟಿಸಿದಂ |
ದರಹಾಸಂ ಮೊಳೆಯೆ ಸಪ್ತಪದಿಗಳನಾಗಳ್ || ೭೯

ವೃ|| ಮಂಗಳದುತ್ಸವಂ ಸೆಗಳೆ ಸಿಂಹಳಭೂಪತಿ ರೋಹಣಾದ್ರಿಯಂ |
ತಾಂ ಗೆಲೆವಂದು ಕಾನಕನಗೇಂದ್ರದವೋಲ್ಲಲೆ ಸಂದು ನಿಂದರ ||
ತ್ನಂಗಳ ರಾಶಿಯಂ ಮಿಸುಪಪೊಂಗಳ ರಾಶಿಯನಲ್ಲಿ ದೇವಭೂ |
ಜಂಗಳ ಪೆರ್ಮೆಗೆ ಕೀಳ್ಪಡೆ ಬುಧಪ್ರಕರಕ್ಕನಸಿತ್ತನಕ್ಕ್ರಿಯಿಂ || ೮೦

ವ|| ಆಗಳಾ ಸಿಂಹಳೇಂದ್ರನರ್ಧಾಂಗಿ ಕಳಾಧರೆ ಮಗಳುಮನಳಿಯನುಮನಭೀಕ್ಷಿಸಿ ಸಂತಸಂಬಟ್ಟು

ಕಂ|| ಹಿಮಮೃಗಮದಕುಂಕುಮಕ |
ರ್ದಮಸುಮನೋಮಾಲ್ಯವೀಟಿಕಾಭೂಷಣವ್ಯಂ ||
ದಮನಸಮಳಾಂಬರಮಂ ನೃಪ |
ರಮಣೀಸಮುದಯಕೆ ಪೊನ್ನಪಾತ್ರೆಯೊಳಿತ್ತಳ್ || ೮೧

ವ|| ಇಂತು ಯಥೋಚಿತವಿಧಾನಂ ಪರಿಣಯಂ ಬಡೆದನಂತರಮನೂನಸ್ನೇಹರಸಭರಿತಾಂತಃಕರಣಂ ಕುಮಾರಕುಸುಮಾಯುಧಂ ಸಸಂಭ್ರಮಂ ಸಜ್ಜುಗೆಯ್ದು ಸೆಜ್ಜಾಗೃಹದ ಪಜ್ಜಳಿಪಪರಿಮಳಪರಿಮಿಳಿತಕುಸುಮಸರವಿಸರಪರಿವೃತ ಕನಕಪರ್ಯಂಕತಳದ ಮೃದುಳಧವಳತಳ್ಪಸ್ಥಳದೊಳ್ಗಾಡಿಯಿಂ ನಲ್ಲಳ ಬರವಂ ಬಯಸುತ್ತೆ ಕುಳ್ಳಿರ್ದಾಪ್ರಸ್ತಾವದಲ್ಲಿ

ವೃ|| ವದನೇಂದುದ್ಯುತಿಪೊಣ್ಮೆ ಸೋರ್ಮುಡಿಯ ಕಂಪಿಂಗೆಯ್ದೆ ಭೃಂಗಾಳಿ ಪಿಂ|
ಗಡೆ ಪೀನಸ್ತನಮುಂ ಕದಕ್ಕದಿಸೆ ಮಧ್ಯಂ ಬಳ್ಕೆ ಮಂಜೀರನಾ ||
ದದೊಳೊಂದಾಗಿ ಪಳಂಚೆ ಕಾಂಚಿನಿನದಂ ಸಾರ್ತ್ತಂದಳಿಂದೀವರಾ |
ಕ್ಷಿ ದರಸ್ಮೇರಮರೀಚಿ ಸೂಸೆ ಸುಧೆಯಂ ತನ್ಮಂದಿರಪ್ರಾಂತಮಂ || ೮೨

ವ|| ಇಂತೆೞ್ತಂದಸರ್ವಮಂಗಳಾದೇವಿಯೊಡನೆ ಕಳಾವಿದೆಯರಾದಕೆಳದಿಯರೊಡನೆೞ್ತಂದತಿಶಯಪ್ರಮೋದದಿನಾಕುವರಿಯನಾಯುವರಾಜನ ಕೆಲದೊಳ್ಕುಳ್ಳಿರಿಸಿ ಸರಸಾಲೋಕನದಿನವಲೋಕಿಸಿ ತಂಗಿ ನಲ್ಲಂಗೆ ತಾಂಬೂಲಂಗುಡುವುದೆಂದು ಪೇೞ್ದುಪೋಂದುದುಮವನೆಲ್ಲರ್ಮೆಲ್ಲನೆ ತೊಲಗಲೊಡನೆ ಜೆಲ್ಲದಿಂ ನಲ್ಲಳ ಲಜ್ಜಾನತಮಾದನಗೆಮೊಗಮಂ ಸಂದಣಿಪಕಟಾಕ್ಷದಿನಡರೆ ನೋಡಿ ಕಾಮಕೇಳಿಗೆ ಮನಂದಂದೊಯ್ಯನೆ ಕಯ್ಯಂ ಪಿಡಿದು ರಯ್ಯಮೆನೆ ಮೆಯ್ಯಂ ಸೋಂಕಿ ಕುರುಳಂ ನೇವರಿಸಿ ಕರಾಂಗುಲಿಯಂ ಚಿಟುಂಕಿಸಿ ನೇಮದಾಣಮನಂಟಿ ಗಲ್ಲಮಂ ಪಿಡಿದಲುಂಗಿ ಬಿಂಬಾಧರಮಂ ಚುಂಬಿಸಿ ಲಜ್ಜೆ ಪಜ್ಜೆದೆಗೆವಂತೆ ಜಾಣ್ಮೆಯಂ ಮೆರೆದು ಮದನೋದ್ರೇಕಂ ಮನದೊಳೊದವಿದಪದಮಂ ಮೊಳೆವಪುಳಕದಿಂ ಮೊಗದದೈನ್ಯದಿಂ ನಗೆವಬೆಮರಿಂ ಮೇಲ್ವರಿವಪಾಂಗದಿಂ ತಿಳಿದು ಮೋಹವರಿದು ಮುದ್ದಿಸಿ ತವಕವರಿದು ತಳ್ಕಿಸಿ ಲಲ್ಲೆಯರಿದು ಬುಲ್ಲವಿಸಿ ಸೋಲವರಿದು ಸೊರ್ಕ್ಕುಗೊಳಿಸಿ ಕಾಲವರಿದು ಕಳೆಯೇರಿಸಿ ಕಳಾನಿಳಯಂ ಕಡಂಗಿ ಸುಸಿಲ ಜಕ್ಕವಕ್ಕಿಯಂತೆ ಸುಸಿಲೆಸಗಲುಜ್ಜುಗಿಸಿಪ್ಪನ್ನೆಗಂ

ವೃ|| ಬಳಿವರೆ ಪೊರ್ದ್ದಿ ಸೋಂಕಲೊಡನಂಗಮನೊಂದಿನಿಸಿತ್ತು ತಳ್ಕೆಗಂ |
ದೆಳಸಿರೆ ತೋಳ್ಗಳಂ ನೆಗಪಿ ಮೆಲ್ಲನೆ ಚುಂಬಿಸಲೊಂದೆ ವಕ್ತ್ರಮಂ ||
ಡಳಮನಮುರ್ಚ್ಚಿ ಸಾದರಮೆ ಕೂಡಲೊಡರ್ಚ್ಚಿರೆ ಲಜ್ಜೆಯೊಕ್ಕು ಮೈ |
ವಳಿಯೊಳೆ ಸಂದು ಮೈಗುಡುತವಳ್ಪಿಡಿದಳ್ಮನಮಂ ಮನೋಜ್ಞನಾ || ೮೩

ರತಿರಾಗಂಬೆತ್ತು ಕಾಂತಂ ತೆಗೆದು ಬಿಗಿದು ತಕ್ಕೈಸೆ ನೀವೀಭರಂ ಜಾ |
ರೆ ತದೀಯಾಂಗಕ್ಕಪಾಂಗದ್ಯುತಿವಸನಮನಂತಿತ್ತು ಲುಪ್ತಾಂಗರಾಗೋ ||
ನ್ನತವಕ್ಷೋಜಕ್ಕೆ ಹಸ್ತಾರುಣರುಚಿಘುಸೃಣಕ್ಷೋದಮಂ ಸಾರ್ಚಿಲೀಲಾ |
ಚ್ಯುತಹಾರಗ್ರೀವೆಯೊಳ್ಸ್ವೇದಲವಸರಮನಿತ್ತೊಲ್ದು ಕೂಡುತ್ತುಮಿರ್ದ್ದಂ || ೮೪

ಒಳಪುಗುವಂತೆ ಬಟ್ಟಮೊಲೆಗಳ್ನಿಜವಕ್ಷದೊಳಾಳೆ ಸೊರ್ಕ್ಕ ಸಂ |
ಗಳಿಸಿರೆ ತೋಳ್ಗಳಿಂ ಬಗಿದು ತಕ್ಕಿಸಿ ನಾಣ್ಬಿಡೆ ಜಾಣ್ಮೆದೋರೆ ಬೆಂ ||
ದಳಿದುರ್ಟಿಯುಂ ಕದುರ್ಂಕಿ ಕಳೆವೆರ್ಚಿಸಿ ಮುದ್ದಿಸಿ ಲಲ್ಲೆಗೈದು ತ |
ನ್ನಳ ಮನಮಂ ಮರುಳ್ಚಿದನದೇಂ ರತಕೋವಿದನೋ ಕುಮಾರಕಂ || ೮೫

ಮನದನುರಾಗಮುಳ್ತರದ ಕಾತುರಮಂ ಪಡೆದೀಯೆ ಸೋಂಕಿನಿಂ |
ಬಸಿಯೆಪಸೊರ್ಕ್ಕ ಸೋಲಮನಮರ್ಚೆ ಸುಧಾಧರದಿಂಪು ಕಂಠನಿ ||
ಸ್ವನಮನೊಡರ್ಚೆ ತಳ್ಕೆ ತನಿನೇಹಮನುರ್ವ್ವಿಸೆ ತಳ್ತು ಕೂಟದೊಂ |
ದಿಸಿದಱವಂ ಕಳ್ಚೆ ನೆರೆದರ್ಪ್ಪರಸೋತ್ಸವದಿಂ ವಧೂವರರ್ || ೮೬

ವ|| ಅಂತುಮಲ್ಲದೆಯುಂ

ವೃ|| ಬೆರಸುತ್ತುಂ ಬಿಗಿಯಪ್ಪಿ ಕೂಡುವೆಡೆಯೊಳ್ಕಂಠೋತ್ಥಿತಧ್ವಾನಮುಂ |
ಕರಸಂತಾಡನಮುಂ ಕಚಗ್ರಹಣಮುಂ ದಂತಕ್ಷತಂಗೆಯ್ವುದಂ ||
ಕರಜಾತಾಹತಿಯುಂ ಪೊದಳ್ದರತದೊಳ್ಸೊರ್ಕ್ಕಿರೆ ಕಣ್ಮುಚ್ಚಿ ನಿ |
ರ್ಭರದಿಂ ಮೈಮರಪೊಂದದಂತೆಸಗುವಂತೋರೊರ್ವ್ವರೊಳ್ತೋಱರಿದರ್ || ೮೭

ಅಳಿಪಿ ನಿರೀಕ್ಷಿಪಾಸೆವಡುತುಂ ಬಗಿಯುಪ್ಪುವ ನೇಹದಿಂ ಪದಂ |
ಗಳಿಯಿಸೆ ಪಾಯ್ದು ಚುಂಬಿಪ ಕಡಂಗಿ ಕರಾಗ್ರದೆ ಪೊಯ್ವ ಬೇಟಮು ||
ಗ್ಗಳಿಸೆ ನಖಾಗ್ರದಿಂದಿರಿವ ತೋಳ್ತೊಡೆ ತಳ್ತಿರೆ ಕೂಡುವಳ್ತಿವ |
ಟ್ಟಳಸುವನೇಕಭಾವರಸಮೊಪ್ಪಿದುದಾಕೆಗೆ ಕಂತುಕೇಳಿಯೊಳ್ || ೮೮

ಕಂ|| ಮಣಿತಂ ತನುವೊಳ್ಗಳಪೊ |
ಳ್ಮಣಿತಂ ನೆಗಳ್ದಿರೆ ವಿಳಾಸಮುಮದೊರ್ಪ್ಪಿರೆ ಪೆ ||
ಣ್ಮಣಿ ತನ್ನವರತಿಚಿಂತಾ |
ಮಣಿತನ್ನರಪತಿಗೆ ತನ್ನಪರಿಜನೆ ನೆರೆದಳ್ || ೮೯

ವೃ॥ ಗಳನಾದಂ ನೆರವಾಗೆ ದೈಸ್ವನಿನದಂ ಕೈಗಣ್ಮೆ ಮಂದಸ್ಮಿತೋ |
ಜ್ಜ್ವಳವಕ್ತ್ರಂ ಪೊಸತಾಗೆ ನೇತ್ರಯುಗಳಂ ಬೆಂಡೇಳೆ ರೋಮಾಂಚಕಂ ||
ಜುಳಿತಾಂಗಂ ಬೆಮರೇರೆ ಸುಯ್ಯುಮಿರೆ ಲೀಲಾವೇಗಮಿಂಬಾಗೆ ಮಂ |
ಜುಳಸೌಖ್ಯಂ ತನಿವೆರ್ಚೆ ಮರ್ಚೆ ನೆರೆದಕ್ಕಾರ್ದಲ್ಮೆಯಿಂ ಕಾದಲರ್ || ೯೮

ವ॥ ಮತ್ತಂ

ವೃ॥ ಮುನಿಸೆಡೆಗೊಳ್ಳದಿರ್ಪ ಕಲಹಂ ಕಿನಿಸಿಲ್ಲದಪುರ್ಬುಗಂಟು ನೆ |
ಟ್ಟನೆ ಬಹುಭಾರಮಂ ತಳೆಯದಾದಬಳಲ್ಕೆ ಪೊದಳ್ದ ನಿದ್ರೆಯೊಂ ||
ದಿನಿಸಿರದುರ್ಪಿಪಾಯ್ವನಿಡುಸುಯ್ತಣಿವಿಲ್ಲದತೃಪ್ತಿ ಭಂಗಮುಂ |
ಟೆನಿಸದಸೋಲಮುಂಜಿಕೆಯನಾನದಕಂಪನುಳುಂಬನೋಪರೊಳ್ || ೯೯

ಚುಂಬನದಿಂಪು ಸೋರ್ಮುಡಿಯ ಕಂಪು ಮೃದೂಕ್ತಿಯಲಂಪು ತಳ್ಕೆ ಚೆ|
ಲ್ವಿಂಬಿನ ಪೆರ್ಚೆ ಸೌಖ್ಯಮನೆಸಾರ್ಚೆ ಸಿಜಾಕ್ಷುತಮರ್ಚೆ ತೋರೆ ಬೇ ||
ಟಂ ಬಿಡದುರ್ವೆ ಬಿನ್ನಣಮೆ ಪರ್ವೆ ಸುಸಿಲ್ತನಿಗೊರ್ವೆ ಭಾಮಿನೀ |
ಜಂ ಬಗೆದಂದು ಕಾಂತೆಯೊಡನಂದು ಮುದಂಬಡೆದೊಂದುಶೊಪ್ಪಿದಂ || ೯೨

ವ॥ ಇಂತುಸಂತಸಂ ಮಿಗೆ ಸಮಂತು ಕಂತುಸುಖಸಾಮ್ರಾಜ್ಯಮನನು
ಭವಿಪದಂಪತಿಗಳ್ಗೆ ಮಾಸಂಗಳ್ದಿವಸಂಗಳಾಗಿ ದಿವಸಂಗಳ್ನಿಮಿಷಂಗಳಾಗಿ ಸಲು
ತ್ತುಮಿರೆಯಿರೆ

ವೃ॥ ಅಪರಾಶಾಕುಂಭಿಶುಂಭತ್ಕರಟತಟಗಳದ್ದಾನಸಂಭ್ರಾಂತಭೃಂಗೌ |
ಘಪಯೋದಾಲಂಬಿ ಜೃಂಭಜ್ಜಲಧಿಜಲಲವಾಶ್ಲಿಷ್ಟಮುನ್ನಿದ್ರಕೈತ ||
ಕ್ಯಪರಾಗಶ್ರೇಣೀಚಂಚಚ್ಚಪಲಮುಪಲಸತ್ತಾಳಸಂಘೃಷ್ಟಭಾಂಡೌ |
ಘಪಟುಧ್ವಾನಾಬ್ಧರಾವಂ ಸುಳಿದುದು ಪವನಂ ಕಾರಿದೆಂಬಂತಳುಂಬಂ ||೯೩

ವ॥ ಆಗಳ್

॥ ಅಲರ್ದುದು ಕಾಡಮಲ್ಲಿಗೆ ಮುಗುಳ್ತುದು ಜಾದಿ ಕದಂಬಕುಟ್ಮಳಂ |
ಬಲಿದುದು ಪೂದೊಡಂಬೆಯನೊಡರ್ಚಿತು ಕೇತಕಿ ಕೇಕಿ ನಣ್ಪಿನಿಂ ||
ನಲಿದುದು ಹಂಸೆಪಾರಲನುಗೆಯ್ದುದು ಚಾದಗೆ ರಾಗಮಾಂತುದು |
ಜ್ಜ್ವಲತೆಯನಪ್ಪುಕೈದುದು ವಿಯೋಗಿಗಳಂಗದೊಳಂಗಜಾನಲಂ || ೯೪

ಸುಳಿಗೊಳುತೆತ್ತಿ ಸುಟ್ಟುರೆ ಧರಾರಜಮುಂ ಕೆಳಗೊಂದೆದಂಡದಂ |
ತುಳಿದತತಾತಪಂ ಬಳಸಿ ಪಲ್ಲವದಂತಿರೆ ಬಾನಮಧ್ಯದೊಳ್ ||
ತೊಳಗುವಭಾನು ಭರ್ಮಕಳಶಂಬೊಲದೊಪ್ಪಿರೆ ಬಟ್ಟಬಲ್ಮುಗಿ |
ಲ್ತಳೆದುದು ಕಾಲಭೂಪತಿಯ ಪೀಲಿಯಸತ್ತಿಗೆಯೊಂದುಲೀಲೆಯಂ || ೯೫

ಗಗನ ಶ್ರೀ ಯುಟ್ಟನೀಲಾಂಬರಮೊ ರವಿಸುಧಾಧಾಮಬಿಂಬಂಗಳಂ ಮು|
ತ್ತಿಗೆಯಂ ಮಾಳ್ಪಂಧಕಾರವ್ರಜಮೊ ಸುರನದೀಸ್ನಾತದೇವಾಂಗನಾವೃ ||
ಷ್ಟಿಗಳದ್ವಾರ್ದ್ರಿಂದು ಚಂಚತ್ಕಚನಿಚಯಮೊ ಜಂಭಾರಿಕುಂಭೀಂದ್ರದಾನಾಂ|
ಬುಗೆ ಪಾಯ್ವಂದಿದಿಂರಶ್ರೇಣಿಯೊ ಎನೆ ನೆರೆದತ್ತಭ್ರನೀಲಾಭ್ರಜಾಲಂ|| ೯೬

ಕಂ|| ಧೃತಚಂಚಲಮತಿಚಪಲ |
ಸ್ಥಿತಿ ಜಡಭರಿತಂ ಕಟುಸ್ವರಂ ಬರೆ ಮೇಘಂ ||
ಸುತಹಂಸಂ ತಳರ್ದುದು ಮಲಿ |
ನತರಂ ಬರೆ ಶುಚಿಸುವೃತ್ತನೇನಿರ್ದಪನೇ || ೯೭

ಗರಿ ನೆರೆಯದ ಕಿರುವರಿಗಳ |
ಸಿರುಂಕಿ ಪಕ್ಷದೊಳೆ ಪಾರಲಾರದೆ ಪಿಂದುಂ ||
ಮರುಗುವಮರಾಳಿಗಳನು |
ಣ್ಗರಿವೊತ್ತೆಪೆವಿಡದೆ ತಳರ್ದುವಂಚೆಗಳಾಗಳ್ || ೯೮

ವೃ|| ರವಿಚಂದ್ರಪ್ರಚುರಪ್ರಭಾಪ್ರಚಯಮುಮಂ ಮೇಘಂ ಮುಸುಂಕುತ್ತೆ ಕಾ|
ಷ್ಯಂರ್ಭವಿಶಿಷ್ಟಂ ತಪೆದಂಕುರಾಳ್ವಿರುಚಿಯಂ ಬೀರಿತ್ತುದಗ್ರಸ್ಫುರ ||
ತ್ಕಂವಿಕಾವ್ಯಪ್ರಕಟಪ್ರಭಾವಮುನದಂ ಕಿಳ್ಕಬ್ಬಗಂ ಗುಪ್ತಿಗೈ |
ದವರಾತ್ಮೀಯಕೃತಿಪ್ರಭಾವತೆಯುನಾದಂ ತೋರ್ಪವೋಲ್ಧಾತ್ರಿಯೊಳ್ | ೯೯

ಘನಕರಿಗಿಕ್ಕಿದಂಕುಶಮಿದಬ್ದಮುಕುಂದನಂದಕಾಯುಧಂ |
ವನದೆ ತಮಾಲಕಾನನದ ಕಾನಕವಲ್ಲರಿ ವಾರಿಭೃದ್ಧ್ವನಾಂ ||
ಜನನಗದಾವಪಾವಕಶಿಖಾತತಿ ಮೇಘಮಹಾಂಧಕಾಬ್ಧ್ಯದೈ |
ತ್ಯನ ಖರದಂಷ್ಟ್ರಮುಳ್ಕಿದುದು ಮಿಂಚುಮುಗಿಲ್ಮುಗುಳಂಬನೀಕ್ಷಣಂ||೧೦೦

ಕಂ॥ ಅಂಬುಜರಿಪುಬಿಂಬದ ಬೆಳ |
ಗಂ ಬಂಧಿಸಿ ಮಬ್ಬುರ್ವೇಱಿ ಮಿಂಚುತೆ ಪಥದೊಳ್ ॥
ತಾಂಬರಿಸಿ ನೆರಯಿಪಾಕಾ |
ದಂಬಿನಿ ಪಾಣ್ಬೆಯರ ಕೆಳದಿಯಾಗಲ್ವೇಳ್ಕುಂ ॥ ೧೦೧

ವೃ॥ ಅಡಿಗಡಿಗುರ್ವ್ವಿ ಮಿಂಚುವೆಳೆಮಿಂಚು ಮರುದ್ಭಟನೆತ್ತಿ ಬೇಗದಿಂ |
ಪೊಡೆವಸುವರ್ಣಕೋಣಮೆನೆ ತಳ್ತಿರೆ ತಾನೊಗೆದತ್ತು ಕಾರ್ಮ್ಮುಗಿ ॥
ಲ್ಗಡಣಮೆನಿಪ್ಪದಂತಿತತಿಯುಗ್ರದಡಿಂಡಿಮನಾದದಂತೆ ಪೇ |
ರ್ಗ್ಗಡುಗು ನಿದಾಘನಂ ತಗುಳ್ದೈದಿದನೀರದ ಕಾಲರಾಜನಾ ॥ ೧೦೨

ವ॥ ಅಂತುಮಲ್ಲದೆಯುಂ

ವೃ॥ ಅಂಬುಧಿಸಂಗಸಂಜನಿತಶಂಬರನಿರ್ಭರಗರ್ಭೆ ಬಂದು ಕಾ |
ದಂಬಿನಿ ತತ್ಪ್ರಸೂತಿಸಮಯಂ ಬರೆ ಪುಷ್ಕರಗೇಹದೊಳ್ಕರಾ ॥
ಲಂಬಿತಹೇಮರಜ್ಜುವೆನೆ ಮಿಂಚಿರೆ ಮುಂಚಿ ನರಲ್ವರಾವದಂ |
ತೇಂಬಗೆಗೊಂಡುದೋ ಗುಡುಗು ಸೂತಿಮರುತ್ಕೃತಶೋದಬೇಳ್ಗೆಯಿಂ ೧೦೩

ವಂಶಸ್ಥವೃತ್ತಂ॥

ವೃ॥ ಸ್ಫುರದ್ಧನುಶ್ಶ್ರೀಕರಜಂಜಲೇಕ್ಷಣಂ |
ಶರಧ್ಯುಪಾತ್ತೋರುಶರಂ ಘನಸ್ವನಂ ॥
ಹರಿಪ್ರಭಂ ನೀರದರಾಜನಟ್ಟಿದಂ |
ಧರಾತಿಸಂತಾಪದನಂ ನಿದಾಘನಂ ॥ ೧೦೪

ಕಂ॥ ` ಗರಿ ಮೂಡಿದಂತೆ ಕೆಲದೊ |
ಳ್ಕಿರುಮುಗಿಲಿರೆ ಜಲದನೀಲಗಿರಿ ನೆಗೆಯೆ ಕರು ॥
ತ್ತೆರಗಿದವಪ್ರಿಯ ವಜ್ರದ |
ಬಿರುವೊಯ್ಲ ರವಕ್ಕೆ ಬರಸಿಡಿಲ್ಸರಿಬರ್ಕ್ಕಂ ॥ ೧೦೫

ವೃ॥ ವರುಣಾಶಾಬ್ಧಿಪಯಃಪ್ರವಾಹಪತಿತಸ್ನಾನಂ ವಿನಿರ್ಧೂತಧಾ |
ತ್ರಿರಜಃಪ್ರೋತ್ಪಿಹಿತಾಂಗನುದ್ಧೃತಘನಕ್ಷ್ಮಾಜವ್ರಜಂ ಭೂಧರೋ ॥
ತ್ಕರಸಂಚಾರಿಕದಂಬಸನ್ಮಧುಮದಾಂಭೋವಾಹಮಂಭೋದಸಿಂ |
ಧುರಮಂ ಪಾಯ್ದು ಪಳಂಚಿ ಪೊಯ್ದುದು ರಟಜ್ಝಂಝಾಮರುತ್ಕುಂಜರಂ ॥

ವೃ॥ ಗಜದಜಿನಂ ಮುಗಿಲ್ಗಜರ ಗರ್ಜಿಪರುಂಡಕದಂಬಘೋಷಮು ।
ಭ್ರುಜಪಟುಘೋಷಮುತ್ಕಟತಟಿತ್ತತಿಯುತ್ಕಣಿತಾಹಿಶೀರ್ಷರ ॥
ತ್ನಜಘೃಣಿಮಾಲೆ ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ ।
ಗಜರಿಪುವೋಲ್ಘನಾಗಮಮದೇಂ ಒಗೆಗೊಂಡುದೊ ನೋಟಕರ್ಕಳಾ ೧೦೭

ಕಂ॥ ಕಡಲವಿಷಮೀಂಟಿದೊಡೆ ತ ।
ನ್ನೊಡಲಂ ಬಿಡದಡರೆ ಕಪ್ಪುರ್ವೆತ್ತಂಗಪಿನಾ ॥
ಗಡೆ ಜೀವನಮಂ ಬಿಟ್ಟುದು ।
ಜಡದಂ ಪೃಡನುಳಿದನೆಂದೊಡುಳಿದರ್ಗ್ಗಳವೇ ॥ ೧೦೮

ನೆರೆದು ಘನಘನಮದೇಂಭೋ ।
ತ್ಕರಮೀಂಟಿ ಮರುತ್ತರಂಗಿಣೀಜಳಮಂ ಪ್ರೂ ॥
ತ್ಕರಸೆ ಸಿಡಿಪಳಿವಕಣಗಣ ।
ದಿರವೆನಿಸಿದುದರರೆ ಸುರಿವಪನ್ಮಾರ್ಗಳೆ ನಭದಿಂ ॥ ೧೦೯

ಸುರಚಾಪಹಂಪಕಸ್ರುಜ ।
ಕುರವಣಿಸುತ್ತಸಿತಜಳಗಮದ ಮಧುಪಸಮು ॥
ತ್ಕರಮೆರಗಿದಂತೆ ಮೆರೆದುದು ।
ಪರಿಕಿಸದಾತ್ಮೀಯಜೀವನವ್ಯಯಭಯಮಂ ॥ ೧೧೦

ನುಂಗೆ ರವಿರುಚಿಯನದು ತ ।
ನ್ನಂಗುಳ್ಳುಡೆ ಶಿತಿಜಲದಪಿಘಂತುದನುಗುಳ್ವಾ ॥
ಪಾಂಗನನುಕರಿಸಿ ಮಿಂಚುತ ।
ಡಂಗುವಸೆಳೆಮಿಂಚದೇಂ ಮನಂಗೊಳಿಸಿದುದೋ ॥ ೧೧೧

ಮೆಲ್ಸರಿ ಸೂಳ್ಸರಿ ಮುಗಿಲೊ ।
ಳ್ಗಲ್ಸರಿ ತೆಳ್ಸರಿ ಕರಂ ಪೊಸಲ್ವಯಿಪಜಂ ॥
ಬಲ್ಸರಿ ಬಲ್ಸರಿ ಕಾಲ್ಸರಿ ।
ಸಾಲ್ಸರಿ ಸಲೆ ಸುರಿದು ಕರೆದುವಿರುಳುಂ ಪಗಲುಂ ॥ ೧೧೨

ಘುಡುಘುಡುಛಿಳಿ ಛಿಟಿಲೆಂದು |
ಗ್ಗಡದಸಿಡಿಲ್ದಸಿಯೆ ಪೊಡೆಯೆ ಗಗನಸ್ಥಳದಿಂ ||
ದುಡುಗಳ್ಪಳಪಳನುದಿರ್ವವೊ |
ಲೆಡೆವಿಡದಿಳಿವಾಲಿವರಲ ಮಳೆ ಬಸೆಗೊಳಿಕುಂ || ೧೧೩

ವಂಶಸ್ಥವೃತ್ತಂ ||
ವಿಯತ್ತಳಶ್ರೀವಧುವಂ ಘನಾಗಮ |
ಪ್ರಿಯಂ ಸರಾಗಂ ಬಿಗಿದಪ್ಪೆ ಕಿಳ್ತು ತ ||
ತ್ಪಯೋಧರಸ್ಥಂ ಮಣಿಪೊಕ್ಕವೋಲ್ಪನೋ |
ದಯೋಪಳಂ ಸೂಸಿದುದಿಂದ್ರಗೋಪಮುಂ || ೧೧೪

ವೃ|| ಸುರಚಾಪದ್ವಿಪವೈರಿ ಮಿಕ್ಕು ನೆಗೆದಭ್ರಾರಣ್ಯದಭ್ರೇರುಸಿಂ |
ಧುರಕುಂಭಸ್ಥಳಮಂ ಸಿಡಿಲ್ದನಿ ನಿಜಧ್ವಾನಂಬೊಲಿಂಬಾಗೆ ಬಂ ||
ಧುರವಿದ್ಯುತ್ಕರಜಾಗ್ರದಿಂದುಗಿದು ಸೀಳಲ್ಮೌಕ್ತಿಕಾಸೃಕ್ಕಣೋ |
ತ್ಕರಮೆತ್ತಂ ಸುರಿವಂತೆ ಸೂಸಿತು ಘನಗ್ರಾವೇಂದ್ರಗೋಪವ್ರಜಂ || ೧೧೫
ಎನ್ನ ಸಹಾಯದಿಂ ನೆರೆದು ತಾಳ್ದು ಘನತ್ವಮನಸ್ಮದೀಯಮಿ |
ತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು ಪೊ |
ಯ್ದನ್ನೆಗಳಲ್ಪನಧ್ವಸಿ ಕಳಲ್ದುದಿರ್ದ್ದತ್ತು ಘನೋಪಳಾಚ್ಛದಂ ||
ತನ್ನಿಜಮುಲ್ಲದಿರ್ದೊಡೆಳೆಯಲ್ಲಿದುಣೀರದನಾಮಮಾಂಪುದೇ || ೧೧೬

ಕಂ|| ಎಳಸಿ ನಿಜಚಂಚುಪುಟದೊ |
ಳ್ತಳೆದಿನಿಯುಳ್ಗರೆದು ಮರಿಗಳಂ ತಣಿಪಿ ಮನಂ ||
ಗೊಳೆ ತಳಿಪಿ ಸೆಳೆದು ಜಳಕಣ |
ಕುಳಮಂ ಪೀರ್ದತ್ತು ಚಾತಕಂ ಚೆದುರಿಂದಂ || ೧೧೭

ವೃ|| ಮಂಗಳವಾದ್ಯಮಬ್ದರವಮುಣ್ಮುವ ಮಿಂಚದು ದೀಪಮಾಲೆಯು |
ತ್ತುಂಗಪಯೋದಮಿಟ್ಟತೆರೆ ತೋರಣಮಿಂದಿರವಿಲ್ಸುವೃಷ್ಟಿಯೇ ||
ಸಂಗತಧಾರೆಯಾಲಿವರಲೊಪ್ಪುವ ಮುತ್ತಿನಸೇಸೆಯಾಗೆ ಕಾ |
ರುಂ ಗಗನಸ್ಥಳೀರಮೆಯುಮೊಂದಿದರೊಂದುವಿವಾಹಲೀಲೆಯುಂ || ೧೧೮

ವ|| ಮತ್ತಮಾಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನಭವಾಂಗದಂತೆ ಕಾದಂಬವಿತತಾವೋದವಾಹಮುಂ ಗರೋದಯಸಮಯದಂತೆ ಸುರಚಾಪಲತಾನ್ವಿತಮುಂ ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರಮುಂ ವಿಧುಂತುದನಂತೆ ಸಂತರ್ಜಿತರಾಜಹಂಸಮಂಡಳಮುಂ ಘನನೀಲಾಂಬರಾಚ್ಛಾದಕನಾಗಿಯುಂ ಸಿತವಾರಿದೋಪಲಸಿತದ್ಯುತಿಯುಂ ಪ್ರಬಳಕೀಲಾಲಕ್ಷಣರುಚಿಯುತಮಾಗಿಯುಂ ವನಸಮೃದ್ಧಿದಮುಂ ಪರಕಬಂಧಸಂಸಕ್ತಸರಕ್ತಶಿಳೀಮುಖಮಿಳಿತಮಾಗಿಯುಮುಪ್ರಕಟಿತಪ್ರಭಾವಮುಂಕೃತವಜ್ರನಿರ್ಘೋಷಮಾಗಿಯುಂ ಗೋತ್ರಾಪ್ರತಿಹಿತಕರಮುಂ ವಿಪಕ್ಷಗತಿರೋಧಕಮಾಗಿಯುಂ ಪರಿಗತಭಂಗವಾಹಿನೀಕಮುಮೆನಿಸಿದ್ದುದಂತುಮಲ್ಲದೆ

ಕಂ|| ಜಳಮಯಮಿಳೆ ಜಳದಮಯಂ |
ಜಳಧರಮಾರ್ಗಂ ತಟಿನ್ಮಯಂ ದಿಗ್ವಳಯಂ ||
ಕೆಳೆಗೊಳೆ ನವಸೃಷ್ಟಿಯನೇಂ |
ತಳೆದುದೊ ಭುವನಂ ಘನಾಗಮಾಂಬುಜಭವನಿಂ || ೧೧೯

ಫಣಿಯಂ ತುಂಡಿಸಿ ವಿಷಮುಂ |
ನೊಣೆದಾನುಂ ನೀಲಕಂಠನಾದೆನೆನುತ್ತುಂ ||
ಕುಣಿವಂತೆ ವಿಷಧರದ ಮುಂ |
ದಣಿಯರದಿಂ ಕೇಗಿ ಕುಣಿವನವಿಲೆಸೆದಿರ್ಕ್ಕುಂ || ೧೨೦

ಗರಿ ಪೊಂಪುಳಿವೋದಂತಿರೆ |
ನೆರೆ ನೆಟ್ಟನೆ ನಿಲೆ ಮುದಶ್ರು ಗರಿಗಣ್ಗಳೊಳೇ ||
ನೊರೆತುದೊ ಪೇಳೆನೆ ಕಿರುವನಿ |
ತುರುಗಿರೆ ಮತ್ತೊಂದು ನವಿಲದೇಂ ನರ್ತಿಸಿತೋ || ೧೨೧

ವೃ|| ಚಾದಗೆಯಂತೆ ಮುಂಬನಿಯನೇಂ ಬರೆಪೀರ್ದ್ದುದೆ ವಲ್ಲಿಯಂತಿದೇಂ |
ತೋದುದೆ ವಾರಿಯಿಂ ಕಡವಿನಂತೆ ಮುಗುಳ್ತುದೆ ತತ್ಸಹಾಯದಿಂ ||
ಕೇದಗೆಯಂತೆ ಪೂತುದೆ ಮುಗಿಲ್ಗಳ ಪಂಗಿನಿತುಂಟೆ ಕೇಕಿಯಾ |
ಹ್ಲಾದದೆ ಕಂಡು ನರ್ತಿಪುದಿದಲ್ತೆ ಸಮಾನವಯಃ ಪ್ರವರ್ತನಂ || ೧೨೨

ಸರಸಸುಗಂಧಬಂಧುರದಳದ್ದಳನೂತನಕೇತಕೀಸುಮಾ |
ವರಣಫಣಿಪ್ರಮುಕ್ತಗರಳೋಪಮಮತ್ತಮಧುವ್ರತಾಳಿ ಷ ||
ಟ್ಚರಣಗಳತ್ತದೀಯರಜಮುಣ್ಮವಮಿಂಚೆನೆ ಗಾವರಂ ಘನ |
ಸ್ವರಮೆನಲಲ್ಲಿ ತಳ್ತು ಕೆಳೆಗೊಂಡೆಳಗಾವುಮ್ಮಗಿಲಂತೆ ರಂಜಿಕುಂ || ೧೨೩

ವ|| ಮತ್ತಮಾಗಳ್

ವೃ|| ತಳರಲ್ಕೆಂದಡಿಯಿಟ್ಟು ಜಾರಿ ಜವದಿಂ ಕೈಯೂರಿ ಬಿಳ್ದೇಳ್ದು ಪಂ |
ಕಿಳಮಾದಂಶುಕಮಂ ಪೊನಲ್ವರಿವನೀರೊಳ್ಕರ್ಚಿ ಮೈಸಾರ್ಚಿ ಪ ||
ಲ್ಗಳ ನಾದಂಪುಳಕಾಂಕುರಂ ಪೊಳೆಯೆ ಮೇಣಾರೈದು ಕಾಲಿಟ್ಟು ಕೋ |
ಲ್ಗಳನಾಂತೈದುವ ಪಾಂಥರಂ ನಗುವರಾಹರ್ಮ್ಯಾಗ್ರದಬ್ಜಾಕ್ಷಿಯರ್||೧೨೪

ಕಂ|| ಬೆಳೆದೆಳವುಲ್ಕರಮೆಸೆದ |
ತ್ತಿಳೆ ಮಳೆಯಿಂ ನಾಂದು ಸೇದುವಡೆದಿರೆ ಮೊಳೆತ ||
ಗ್ಗಳಪುಳಕಾಂಕುರಮೆನೆ ಸಂ |
ಚಳದಳವನದಿಂದೆ ಕಂಪಿಪಂತಿರೆ ತೋರ್ಕುಂ || ೧೨೫

ವ|| ಇಂತೊಗೆತಂದ ಸಕಳಜನ ಮನೋ ನಯನ ಹರ್ಷಪ್ರದಮಾದವರ್ಷಾ ಕಾಲದೊಳಿನಿಯಳೊಡನೆ ಸಡಗರಂ ಮಿಗೆ ಗಗನಮಂ ತುಡುಂಕುವಭರ್ಮಹರ್ಮ್ಯಮನಾರೋಹಿಸಿ ಮೇಲ್ನೆಲೆಯ ಕನಕ ಪರ್ಯಂಕಪೀಠದೊಳ್ಗಾಡಿಯಿಂ ಕುಳ್ಳಿರ್ದು ಗವಾಕ್ಷವಿವರವಿನಿಹಿತಕಟಾಕ್ಷನಾಗಿ

ವೃ|| ಇದೆ ನಿನ್ನೀಕೇಶಪಾಶಕ್ಕಗಿದು ನೆಗೆದವೋಲ್ಕಾಮ್ಮುಗಿಲ್ಮಿಂಚು ತಾನಿಂ |
ತಿದೆ ನಿನ್ನುದ್ಯತ್ಕಟಾಕ್ಷದ್ಯುತಿಗೆ ಬೆದರ್ದೆಂಬಂತೆ ಚಾಂಚಲ್ಯಮಂ ತಾ ||
ಳ್ದಿದೆ ನಿನ್ನೀಭ್ರೂವಿಳಾಸಕ್ಕಳರ್ದು ಕರಗುವಂತಿಂದ್ರಚಾಪಂ ಕಳಾಸಂ |
ಪದೆ ನೋಡೆಂದಂದು ತೋರುತ್ತೆಸೆದನಭಿನವ ಶ್ರೀವಧೂಟೀಭುಜಂಗಂ || ೧೨೬

ದುರ್ವಹಜಗದ್ಧರೆ ಸುಪರ್ವನುತವೈಭವೆ ಸಗರ್ವದಿತಿಜಾಪಹೆಯಖರ್ವಗುಣಹಾರೇ
ಗೀರ್ವರಸಮರ್ಚಿತೆಯಜುರ್ವಿನುತಸತದೆಹವಿರ್ವಿಧಿವಿಧಾಯಕೆಮಹೌರ್ವಶಿಖಿನೇತ್ರೇ
ಸರ್ವಮುನಿಭಾವಿತೆಸದೋರ್ವಿಜನಸೇವಿತೆವಪುರ್ವಿಜಿತವಲ್ಲರಿಯಪೂರ್ವಸುಚರಿತ್ರೇ|
ನಿರ್ವೃತಿಪದಾಸ್ಪದೆಚತುರ್ವಿಧಫಲಪ್ರದೆ ಸಶರ್ವತನು ಪಾಲಿಪುದುಪರ್ವತತನೂಜೇ||

ಗದ್ಯ|| ಇದುವಿನಮದಮರವರಮಕುಟತಟಘಟಿತ ಮಣಿಗಣಮಹಾಪ್ರ
ಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿರುಂ
ದ್ರಚಂದ್ರಿಕಾಚಂಚಚ್ಚರೋರಾಯಮಾನ ಸರಸಜಮಾನಿತೋ
ಭಯ ಕವಿತಾವಿಶಾರದ ಶ್ರೀಷಡರದೇವವಿರಚಿತ
ಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂಧ
ದೊಳ್ಸರ್ವಮಂಗಳಾ ವಿವಾಹಾದಿ
ವರ್ಣನಂ. ಅಷ್ಟಮಾಶ್ವಾಸಂ
ಸಂಪೂರ್ಣಂ.



# ನವಮಾಶ್ವಾಸಂ.

ಶ್ರೀಮದಪರ್ಣಾನನನವ |
ತಾಮರಸಾಮೋದಮದಮಧುವ್ರತನಭವಂ ||
ಸಾಮಜಮರ್ದನನಮರಲ |
ಲಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ || ೧

ವೃ|| ಶಿವಲೀಲಾಕಥನಾವಳೀಶ್ರವಣದಿಂ ತತ್ಪಾದಪೂಜಾಸಮು |
ತ್ಸವದಿಂ ಶೈವಪುರಾತನವ್ರಜಪುರಾಣಾಕರ್ಣನೋತ್ಸಾಹದಿಂ ||
ಶಿವಯೋಗೀಂದ್ರಸಮರ್ಚನೈಕಸುಖದಿಂ ಕಾಂತಾಸಮೇತಂ ಮಹೀ |
ಧವನೊಪ್ಪಿರ್ದ್ದನಶೇಷಸಜ್ಜನಮನಃಪದ್ಮಪ್ರಭಾವಲ್ಲಭಂ || ೨

ವ|| ಇಂತುಮಾನೃಪಂ ದಿವಸಂಗಳವೃತ್ತಮಿರ್ಪ್ಪನ್ನೆಗಂ

ವೃ|| ಸುರಕಟಕರಮುಕ್ತಾಂಭಃಕಣಂಮಂಜಿದೆಂಬಂ |
ತಿರೆ ತಳೆದು ಶಿಖಾವದ್ಗರ್ವವಂ ನುಗ್ಗಿ ನೀಲಂ ||
ಬುರುಹಸುರಭಿಯೊಂದುತ್ತ್ರೈದಿದಂ ಮಾಗೆ ಬರ್ಪ್ಪಂ |
ತಿರೆ ಧೃತಘನಸಾರಾಮೋದಸಾರಂ ಸಮೀರಂ || ೩

ನೆಗೆದುಷ್ಟಜಾಲದಂತೆ ಪೊಸಪೊಲ್ಲೆಯ ಬಲ್ಮುಗುಳೊಪ್ಪೆ ಪದ್ಮಮಂ |
ಮಿಗೆ ತೊರೆದಲ್ಲಿ ಲಕ್ಷ್ಮಿ ನಿಲೆ ನ್ಮೆದಿಲೊಳುಬ್ಬದಮುಬ್ಬ ಪೆಂಗದಿಂ ||
ತಗಲಿರೆ ಕಾಮುರ್ಕ್ಕಗಿಲ್ನೆಗಳ ಜೊನ್ನದಪೋಲ್ಪೊಸಮಂಜು ವಾರ್ಧಿ ಪೆ |
ರ್ಚ್ಚುಗೆಯುನಮರ್ಚ್ಚಿ ತಾಳ್ದನುದಿತೋದಯುಮಂ ಹಿಮಕಾಲಚಂದ್ರಮಂ ||

ಕಂ|| ಘನರಾಹುವಿಂದುವಂ ತಿಂ |
ದು ನಭಸ್ಸ್ಥಳದೊಳ್ ಮುಗುಳ್ದಿದಂತೆವೊಲೆಸೆಗುಂ ||
ವನಧರಮುದರಮೃತರಸದ |
ಸೊನೆ ಸುರಿತರ್ಪ್ಪಂತೆ ಮಂಜದೇಂ ರಂಜಿಸಿತೋ ||

ಧರಣಿಪನಕೀರ್ತಿವಧು ವಿ |
ಸ್ಫುರಿತನಭಃಕಬರಿಯಲ್ಲಿ ಗೊಜ್ಜುಗೆಯ |
ಸರೋತ್ಕರವಾಂತವೊಲೆ ಸಿತಾಭ್ರಂ |
ನೆರೆದಿರೆ ಮಂಜದರ ಮಧುಕಣಂ ಬೋಲ್ಸುರಿಗುಂ || ೬

ವ|| ಮತ್ತಮಾಗಳ್

ವೃ|| ಇಳೆಯಂ ಮುಚ್ಚಿ ಮುಸುಂಕಿ ನಿಶ್ಚಲತೆಯಿಂ ತ್ವಾಶಾಧಿಪಗ್ಗೊರ್ಂಟುಗೊಂ|
ಟೊಳೆ ಸಾವ್ವರ್ಂತಿರೆ ಮಾಡಿ ವಹ್ನಿಸಖನಾನೆಂಬೊಂದಹಂಕಾರಮಂ ||
ತಳೆದಾಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂ |
ಚಳನಂ ಮಾಡಿ ತದಾಪ್ತನುರ್ಕ್ಕಮುರದೇಂ ಪರ್ಬ್ಬಿತ್ತೊ ಹೈಮಾಗಮಂ|| ೭

ವ|| ಅಂತುಮಲ್ಲದೆಯುಂ

ವೃ|| ಪಿಕಜಿಹ್ವಾಸ್ತಂಭಮಂ ಪನ್ನಗನ ಪಟುಗತಿಸ್ತಂಭಮಂ ಮಾಡಿ ಮತ್ತ |
ರ್ಕಕರಸ್ತಂಭಾಗ್ನಿಸಂಸ್ತಂಭಮನೆ ನೆಗಳ್ದು ಮೇಘಾಗಮೋಚ್ಚಾಟನಂಗೈ ||
ದು ಕರಂ ಕಾಂತೌಘಸಂಮೋಹಮನೊದವಿ ಸುಧಾರುಗ್ವಶೀಕಾರನಿರ್ಣಾ |
ಯಕನನ್ಯಾಂಗಪ್ರವೇಶಂ ಹಿಮಸಮಯಮಹಾಸಿದ್ಧನೊಪ್ಪಿರ್ದ್ದನಾಗಳ್ ೮ ||

ಕಂ ಪಗೆಯ ಕಳೆಯುಡುಗಿದುದುಗಡ |
ಪಗೆಯಿಂ ಕಳೆಗೊಂಡ ನಳಿನಿ ಕೊರಗಿದಳೆಂದೇ ||
ನಗುವುದೆನೆ ನೈದಿಲೆ ಪಗ |
ಲ್ಮುಗಿಯದು ಬೆಳ್ದಿಂಗಳೆಂದು ಭಾವಿಸಿ ಹಿಮಮಂ || ೯

ಮಂಜಿರೆ ನರೆಯೆನೆ ಕೊರಗಿರೆ |
ಕಂಜಂ ತೆರೆವಿಡಿದು ಸುರ್ಕ್ಕಿದಾನನಮೆನೆ ಜ ||
ಕ್ರಂ ಜಗುಳ್ದಿರೆ ವೊಲೆಯೆನೆ ಹಿಮ |
ದಿಂ ಜರೆಗೊಂಡಂತೆ ದಿವಸರಮೆ ಕಳೆಗೆಟ್ಟಳ್ || ೧೦

ಮರದೊಳೆಸೆವೊಂದುನೆವದಿಂ |
ಮರನಡರ್ದಂ ಶಿಖಿ ದಿವಾಕರಂ ಸೀರ್ವ್ವರ್ಕ್ಕಂ ||
ಪರಿಗತಬಿಂಬ ವ್ಯಾಜದಿ |
ನರರೆ ಹಿಮಾಗಮಮಹೀಶನೇಂ ಕಡುಗಲಿಯೋ || ೧೧

ರಯದಿಂ ಮುಸುಂಕುತಿರ್ಪ್ಪತಿ |
ಶಯಹಿಮಮಂ ಕಳಿಯಲೆಂದಿನಂ ಶಿಖಿಯ ಸಮಾ ||
ಶ್ರಯಮೆಸಗಿ ಕಳಿಯನೆಸಲಾ |
ಶ್ರಯಾಶನಾಶ್ರಯದಿನಿಷ್ಟಮೇಂ ಸಮನಿಪುದೇ || ೧೨

ಹಿಮಕರಮುಖಿಯರ ಸೇವನೆ |
ಹಿಮಮಂ ಬರಿಕೈದುದಹಿಮಕರಸೇವನೆಯಿಂ ||
ಹಿಮಮಳಿದುದಿಲ್ಲಮೆನೆ ಕಾ |
ಲಮಹಿಮೆಯಾವಂಗದೇನನೆಸಗದೊ ಜಗದೊಳ್ || ೧೩

ಹರನುರಿಗಣ್ಣಡೆ ಮರೆವೊ |
ಕ್ಕರಲಂಬನ ಬಸುಪುಗಳಿದು ಪೊರೆದುದು ತರುಣೀ ||
ಗುರುಕುಚಮಿದು ಚಳಿಗಳಿದುದು |
ವರಂಗೆ ಮರೆವುಗೆ ಸುವೃತ್ತರೇಗೆಯ್ಯರೊ ಪೇಳ್ || ೧೪

ಸಸಿ ಚಾಂಬೊಳೆಯುಂ ಬಾಸೊ |
ಳ್ಪಿಸುಟುಂ ಬಿಡದಾನೆದೊವಲನಿವ್ಮ್ರಡಿಕೆಯೊಳೊಂ ||
ದಿಸಿ ಪೊದೆದಗಜೆಯನಾಲಿಂ |
ಗಿಸಿ ಗಿರಿಶಂ ಮೆರೆವನೆಂದೊಡದನೇನೆಂಬೆಂ || ೧೫

ಹರಿವಿಧಿಗಳುಳಿದು ನಳಿನಾ |
ಕರಸರಸಿರುಹಂಗಳಂ ರಮಾ ವಾಗ್ದೇವೀ ||
ಪರಿರಂಭಣಯುತರಿರ್ದ್ದ |
ಸ್ಸುರುಚಿರವೈಕುಂಠಸತ್ಯಲೋಕಾಂತರದೊಳ್ || ೧೬

ವೃ|| ಚಳಿವೆಟ್ಟಾಣ್ಮನಪುತ್ರಿ ಸುಕ್ಕಿರ್ದ ಚಳಿಯಿಂ ಮೈಸಾರ್ದುದ ತಾನಪ್ಪಿ ಸಂ |
ಚಳಿಸಳ್ಕರ್ವನ ದೇಹದಿಂ ಸಿರಿ ಸರೋಜಾತಾಕ್ಷವಕ್ಷಸ್ಸ್ಥನಿ ||
ಶ್ಚಳೆಯಾದಳ್ನುಡಿವೆಣ್ಣತುಮುರ್ಖಮುಖಾಂತರ್ವಾಸೆ ಯಾಗಿರ್ಪ್ಪಳಿ |
ನ್ನುಳಿದೀಲೋಕದ ಪೆಂಡಿರೇನುಳಿವರೇ ತಳ್ತಪ್ಪದಾತ್ಮೇಶರಂ || ೧೭

ಕಂ|| ಪುದಿದಹಿಮವೊಡಲೊಳಿಳಿತಂ |
ದುದರಾಗ್ನಿಯನ್ನೈದೆ ನಂದೆವೊಯ್ದುದು ನಿಜಮ ||
ಲ್ಲದೊಡೆಂತು ತೋಪ್ಪುದೋ ಪೇ |
ಳ್ಮೊದಲಿಲ್ಲದವೊಗೆ ಪೊದಳ್ದ ಜನದಾನನದೊಳ್ || ೧೮

ಮೃಡನ ಕಿಡಿಗಣ್ಣ ಕಡುಬಿಸು |
ಪಡಂಗಿಸಿತ್ತೈಕಿಲಿದು ಮನೋರಮ ನೋಡೆಂ ||
ದಡಿಗಡಿಗೆ ರತಿಯ ಕರಮಂ |
ಪೊಡೆದಾದ್ದಿರ್ನ್ನಂಜಿನೆಂದು ನಲಿವಂ ಮದನಂ || ೧೯

ಕುಮುದಮನಲರ್ಚ್ಚಿ ಹಿಮರುಚಿ |
ಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿ ||
ಗ್ಮಮರೀಚಿಯನದು ಮುಸುಳಿಸಿ |
ತು ಮಹೀಜನವಾತ್ಮಸಮಕೆ ವಾಳ್ಪುದು ಪಿತಮಂ || ೨೦

ಬೆರಲ್ಕೈಕಿಲಿಂ ಮುರುಂಟಿರೆ |
ವಿರಹಿಯ ಹೃದಯಸ್ಥವಿರಹವಹ್ನಿಗೆ ಕಯ್ಯಂ ||
ಸ್ಮರನೊಡ್ಡಿ ಕಾಸಿ ಬಿಳ್ಲಂ |
ತಿರುವೊಯ್ದಿಸುತಿರ್ಪ್ಪನಸಿತಶರರುಹಶರದಿಂ || ೨೧

ವ|| ಆಕಾಲದೊಳ್

ವೃ|| ನಡುಕಂ ಕೈಮೀರೆ ದಂತಚ್ಛದನೊಡೆದುಹುಹುಧ್ವಾನಮುಂಪೊಣ್ಮೆ ಮೆಯ್ಯೊ |
ಳ್ಬಿಡದೆತ್ತಂ ತೋರೆ ರೋಮೋದ್ಗಮಮಮರ್ದಿರೆಸೀತ್ಕಾರಮಂಗೈವೆರಲ್ಕಾಲ್ ||
ಕಡಿವೆತ್ತಂತಾಗೆ ತಳ್ತೈಕಿಲಭರದೆ ಪಡಲ್ವಟ್ಟು ಗೇಣಾಗಿ ಪಾಂಥ |
ರ್ತೊರ್ಡೆತೋಳ್ಗಳ್ಕೂಡೆ ಜಾನುಪ್ರಪಿತಶಿರರದೇನಿರ್ದ್ದರೋ ಶೀತಭೀತರ್ ||೨೨

ವ|| ಮತ್ತಮವರೊಳೊರ್ವ್ವಮುಗ್ಧಾಧ್ವಗಂ

ಗೇರಪಣ್ಣಿಸಿದು ಕೆಂಡಮೆನುತ್ತುಂ |
ಸಾರಿ ಮೇಲೆ ತೃಣಮಿಟ್ಟದನೂದಲ್ ||
ಸೇರಿಬಾಯ ಪೊಗೆ ತಳ್ತಿರೆ ಕಂಡಾ |
ದಾರಿಗಂ ಮುದದಿನೂದುತುಮಿರ್ದ್ದಂ || ೨೩

ಕಂ|| ಚಳಿಗಾರದೆ ಪೇರಾಲದ |
ಕೆಳಗಿರ್ಪ್ಪನಿತರೊಳೆ ಚಪಳಕಪಿ ನಿಡುಗೋಡಂ ||
ಸೆಳೆದಲುಗೆ ಸೂಸುವೆಲೆವನಿ |
ಗಳಿಸೊರ್ವ್ವಂ ನನೆದು ನಡುಗಿ ಸಿಡಿಮಿಡಿಗೊಂಡಂ || ೨೪
ಇಡಿದಿಂಧನದೊಳೆ ಫಣಿಯೊಳ |
ಗಡಂಗೆ ಮಣಿಗಂಡು ಕೆಂಡವೆಂದೊರ್ವ್ವಂ ಕೈ ||
ದುಡುಕೆ ಪೊರೆದೇಳೆ ಭಯದಿಂ |
ಕಡುಚಳಿಯಿಂದೊರ್ಮ್ಮೆ ಸೆಡೆದು ನಡುಗುತ್ತಿರ್ದ್ದಂ || ೨೫
ಹಾದಿಯೊಳೂದಿದನೊರ್ವ್ವಂ |
ಬೂದಿ ಕರಂ ಪಾರೆ ಕೆಂಡಮುಂ ಕಂಡಮಿದೆಂ ||
ಪಾದರಿಸಿ ಕುಕ್ಕಿ ಕೊಕ್ಕಿಂ |
ಮೋದುದದಂ ಕಾಗೆ ಮಾಗೆಯೇನತಿ ಶಯಮೋ || ೨೬
ಪುಲ್ಲಿಕ್ಕಿ ಪೋಗೆ ಪಥಿಕ |
ರ್ಮ್ಮೆಲ್ಲನೆ ಸುಡಲಾರದಗ್ನಿ ಹಿಮಸಮಯಮಹೀ ||
ವಲ್ಲಭನತ್ತಣಿಸಗಿಡೇಂ |
ಪುಲ್ಲಂ ಕಚ್ಚಿರ್ದುದೊ ಪೇಳೆನಲ್ತುಳ್ತೆಸೆಗುಂ || ೨೭
ಗರಿಗೆದಂ ಬಿದಿರ್ದ ಕೊಕ್ಕಿಂ |
ದಿರದಿರಿದೆಳವಿಸಿಲನೆಳಸಿ ಸೇಡುಂಗೊಂಡೇಂ ||
ತುರುಗಿರ್ದ್ದುವೊ ತುದಿಗೋಡೊ |
ಳ್ಮರ ಬೆರತಿರೆ ನೋಡಿ ಬಾಡುತುಂ ವಿಹಗಂಗಳ್ || ೨೮
ವೃ|| ಪಳುತ್ತುಂ ಪುಲ್ಲನಲ್ಲಿಂಮರಿಯುಮರ್ದ್ದಿರೆ ಕೀಳ್ವೊಟ್ಟಿಯೊಳ್ಸುಕ್ಕಿರ್ವೆತ್ತಾ |
ಬಾಳಂ ಮೇಣ್ಬಳ್ಕೆ ನೋಡುತ್ತಸವಸದೆ ಬಸಿಲ್ಗೆತ್ತು ಜೀರ್ಣಚ್ಛದಂಗಳ್ ||
ಮೇಳಂಗೊಂಡೊಪ್ಪೆ ಶಾಖಾಗ್ರದೊಳಡರ್ದಲುಗಲ್ ಸೂಸೆ ಮೇಲ್ವೈಕಿಲೆತ್ತಂ |
ನಾಳೀಜಂಘಂ ಕರಂ ಪಲ್ಗಿರಿದು ನಡುಗಿ ಹರ್ದ್ರೆಂದು ಪುಬ್ಬಿರ್ಕ್ಕಿತಾಗಳ್ || ೨೯

ಕಂ|| ಮೂಡಣೆಲರೂಡೆ ಜವದಿಂ |
ದೋಡುಗುವಿೂಹಿಮಸುಧಾಬ್ಧಿಯಗ್ರದೊಳೆನಿಪೊಂ ||
ದಾಡಂಬರಮಂ ಜನದೊ |
ಳ್ಮಾಡಿ ಕರಂ ತರಣಿ ತಳರ್ದುದಂಬರತಳದೊಳ್ || ೩೦
ಉರಿಗಣ್ಣಿಂದುರಿದಂಗಜ |
ನುರುಳ್ದಿರ್ಪ್ಪಂ ಯುವತಿ ಸರಸಹೃದಯಪಯೋಜಾ ||
ಕರದೊಳಗಲ್ಲದೊಡವರುರು |
ತರಕುಚದೊಳ್ಬಿಸುಪು ಪೊಣ್ಮುಗುಮೆ ಪೊಗೆಯುಸಿರೊಳ್ || ೩೧
ವೃ|| ಪುಳಕಂ ಕಾಯದೊಳುಣ್ಮೆ ಕಂಪನಮದುಂ ಕೈಗಣ್ಮೆ ದಂತಚ್ಛದ |
ಸ್ಖಳಿತಂಚೀತ್ಕೃತಿ ಪೊಣ್ಮೆ ಬಂದು ನೆರೆ ನಿಂದಾತ್ಮೇಶನಂ ಕಾಣುತ ||
ನ್ಯಳಸಂಗಕ್ಕೊಳಗಾಗಿ ಬಂದನೆನುತುಂ ಕಾಯ್ಪೇರೆ ತೋಳ್ಪಾಸದಿಂ |
ದಳೆದಾಕೋಮಳೆಯೊರ್ವ್ವಳೊತ್ತಿ ಬಿಗಿದಳ್ಸೀತಾತುರಂ ಪೋಪಿನಂ || ೩೨
ಕಂ|| ವಿಚಕಿಲಗಂಧಿಯುರ ಲಸ |
ತ್ಕುಚಕುಲಗಿರಿದುರ್ಗದಲ್ಲಿ ನೆಲಸಿ ತದಂಗ ||
ಪ್ರಚುರಘುಸೃಣಾಂಗರಾಗಕ |
ವಚಮಾಂತರಸ್ಯೆ ಕಿಲರಸನೇಗೈದಪನೋ || ೩೩
ವೃ|| ಗಿರಿಸಾನುಪ್ರಸರಜ್ಝರೋತ್ಕರತರಂಗಾಕೀರ್ಣವಾರ್ಬಿಂದುಬಂ |
ಧುರಮುಕ್ತಾಫಲಮಾಲಿಕಾಲಸಿತರುಕ್ಪ್ರಾಲೇಯಶುಭ್ರಾಂಬರಾ ||
ವರಣಶ್ಶೈವ್ವೇತವಿಭೂತಿಚಂದನವಿಲಿಪ್ತಾಂಗಶ್ರೀವ್ವೈಕ್ಯಮ್ಮುನೀ |
ಶ್ವರರಿರ್ದ್ದರ್ಪ್ಪರಮುಕ್ತಿಕಾಂತೆಯೊಲಿಸಲ್ತಾಳ್ದಂತೆ ನೈಪಥ್ಯಮಂ || ೩೪
ಹಿಮವಚ್ಛೈಲತರಂಗಿಣೀತಟಪಟುಪ್ರಾಲೇಯವಾರ್ಬಿಂದುಸಂ |
ಕ್ರಮಿತೋದ್ಯತ್ಪುಳಿನಸ್ಥಳಂಗಳೊಳೆ ನಿಂದಾನಂದದಿಂದೊಂದೆ ಸಂ ||
ದು ಮನೋವೃತ್ತಿ ಮಹೇಶ್ವರಾಂಘ್ರಿಯೊಳೆರೋಮಾಂಚಂಗಳುಂ ಕಂಪಮುಂ|
ಬೆಮರುಂ ತಳ್ತಿರೆ ಶೈವಯೋಗಿವರರಿರ್ದ್ದರ್ವ್ವಿಗೀತಶೀತಾತುರರ್ || ೩೫

ವ॥ ಇಂತತಿಶಯಪ್ರಭಾವವಿಭವಂಬಡೆದೇಳ್ತಂದ ಹೇಮಂತಸಮಯದಲ್ಲಿ

ವೃ॥ ರಮಣಿಯ ಕುಂಕುಮಾಂಕಿತತನುಪ್ರಭೆ ಜೆಂಬಿಸಿಲಾಗೆ ತದ್ರತ |
ಶ್ರಮಜನಿತೋಷ್ಣತುಂಗಕುಚಯುಗ್ಮಮೆ ವಕ್ಷದೊಳೊಪ್ಪೆ ತಳ್ತ ತ ||
ದ್ವಿಮಳಿನದೋರ್ಲತಾಕನಕಚಂಪಕದಾಮಮೆ ಕಂಠದೇಶದೊ |
ಳ್ಸಮನಿಸೆ ನೂಂಕಿದಂ ಹಿಮದಕಾಲಮನಾನರನಾಥಚಂದ್ರಮಂ || ೩೬

ವ॥ ಇಂತು ಸಂತಸಂ ಮಿಗೆ ಶರಣಜನವನವಸಂತಂ ಕಾಂತೆಯೊಡನುಮಾಕಾಂತನಡಿದಾವರೆಯಂ ಭಕ್ತಿಯಿಂ ಭಜಿಸುತ್ತುಮಿರ್ದ್ದು ನಿಜದೇಶಕ್ಕೆ ಪೋಗಲೆಳಸಿ ಲಲನೆಗರಿಪಿ ಗಳಿಲನೆ ಸಿಂಪಳೇದ್ರಂಗೆ ಸಚಿವೇಂದ್ರನಿಂ ಪೇಳಿಸಲೊಡನವಂ ಕೇಳ್ದು ನಿಜರಮಣಿಗಿಂತೆಂದಂ

ಕಂ॥ ಇನ್ನೆವರಮೆಮ್ಮಮಾತಂ |
ಮನ್ನಿಸಿ ಜಾಮಾತೃವಿರ್ದ್ದನಿದೆ ಸಾಲ್ಗುಮವಂ ||
ಗಿನ್ನಿರವೇಳ್ವುದು ಕಜ್ಜದ |
ಬಿನ್ನಣಮಲ್ತಬಳೆ ಕಳಿಪುವುದು ನಿಜಸುತೆಯಂ || ೩೭

ವ॥ ಎಂದು ಕಾಂತೆಯನೆಂತಕ್ಕೆ ತಿಳುಪುತ್ತಿರ್ದ್ದರೇಕಚಿತ್ತಂ... ನಿಜಕುಮಾರಿಯನೊಡವೋಪಂತುಮಾಡಿಶುಭಮುಹೂರ್ತದೊಳ್ಮಗಳುಮನಳಿಯನುಮಂ ಬರಿಸಿ ಪಟ್ಟವಣೆಯೊಳ್ಕುಳ್ಳಿರಿಸಿ ಮಂಗಳಾಲಂಕಾರಂಗಳಿನಲಂಕರಿಸಿ ಕಳಿಪುವಾಗಳಾಕಳಾಧರೆ ನಿಜತನೂಜೆಯಮೊಗದಾವರೆಯನಮಂದ ಸ್ನೇಹರಸತರಂಗಿತಕಟಾಕ್ಷದಿನಭೀಕ್ಷಿಸಿ

ವೃ॥ ತಂಗಿ ನಿಜೇಶ್ವರಂಗೆ ಬಗೆದಂತಿರೆ ನೀಂ ಬೆಸಕೈವುದಕ್ತೆಮಾ |
ವಂಗಳ ಮಾತುಮಂ ಮರೆದು ಮೀರದಿರಾರ್ಯ ಹಿತೋಕ್ತಿಗಳ್ಗೆ ಚಿ ||
ತ್ತಂಗುಡು ಬಂಧುವರ್ಗದುಪಚಾರಮನಾಂತಿರು ಮೇಶಭಕ್ತಿಯಂ |
ಪಿಂಗದಿರೊಳ್ಪಸಂಬಡೆದು ಬಾಳ್ದಮಗೀವುದತಿಪ್ರಮೋದಮಂ || ೩೮

ವ|| ಎಂದು ಬುದ್ಧಿವೇಳ್ದು ಶೇಷಾಕ್ಷತಮನಿಕ್ಕಿ ಪರಸಿ

ವೃ|| ಚವರದ ಕುಂಚದಾರತಿಯ ಸೆಜ್ಜೆಯ ಮಜ್ಜನದಂಗರಾಗದು |
ತ್ಸವದ ಸುಗಂಧವೀಟಿಕೆಯ ಸಿಂಗರದೊಳ್ನಿರಿಗ್ಯೆವ ಮಾಲೆಗ ||
ಟ್ಟುವ ತೊಡೆದಟ್ಟುವಿಂಚರದೆ ಪಾಡುವ ಕನ್ನಡಿ ದೋರ್ಪ್ಪ ಬೋಸಮಂ |
ಸವೆಪಡಿಯೂಡುವಾಳಿಯುರುಮಂ ಪದೆದಿತ್ತಳವಳ್ವಿಳಾಸದಿಂ || ೩೯

ವ|| ಮತ್ತಂ

ವೃ|| ರಸಚಿತ್ರಂ ರತ್ನಭೂಷಾವಳಿ ಮೃದುವಸನಶ್ರೇಣಿ ಮುಕ್ತಾತಪತ್ರ |
ಪ್ರಸರಂ ಪೊಂಬೆಟ್ಟ ಬಟ್ಟಲ್ಕನಕಕಳಶಮಾದರ್ಶಮಾಂದೋಳನಂ ದಂ ||
ತಿಸಮೂಹಂ ವಾಜಿವೃಂದಂ ಮೃಗಮದಘನಕಾಶ್ಮೀರಪತ್ರಾಳಿ ಕೇಳೀ |
ಲಸದುದ್ಯತ್ಕೀರಪಾರಾವತಶಿಖಿಹರಿಣೀಹಂಸಶಾರೀಪ್ರತಾನಂ || ೪೦

ಮಣಿಮಂಚಂ ದಿವ್ಯನವ್ಯಾಂಬರಮೃದುತರತಲ್ಪಂ ಮೃಗೇಂದ್ರಾಸನಂ ಸ |
ದ್ಗುಣಭಾಸ್ವದ್ವೇಣುವೀಣಾನಿಪುಣತರವಧೂವೃಂದಮುದ್ಗಾಯಕೀಸ್ತ್ರೀ ||
ಗಣಮುದ್ಯನ್ನರ್ತಕೀಸಂಚಯಮಖಿಳಕಳಾವಿದ್ವಧೂಟೀಸಮೂಹಂ |
ಪ್ರಣಯಪ್ರೌಢಪ್ರಹಾಸ್ಯೋಚಿತಪಿತಮಿತಸಲ್ಲಾಪಕಾಂತಾಕದಂಬಂ || ೪೧

ವ|| ಎಂಬಿವೆಲ್ಲಮುಮಂ ಮಗಳ್ಗೆಬಳಿವಳಿಗೊಟ್ಟೊಡವ್ರೋಪಂತು ನಿಯಾಮಿಸಿ ಸಿಂಹಳೇಂದ್ರಂ ಮಂಗಳತೂರ್ಯತ್ರಯರವಂ ವಿಜೃಂಭಿಸೆ ನಿಜಪುರಮಂ ಪೊರಮಟ್ಟು ಕಿರಿದಂತರಮಂ ಕಳಿಪಿ ಮಗುಳ್ದು ಕಮಳಾವತಿಯಂ ಪೊಕ್ಕಿರ್ದ್ದನಿತ್ತಲ್ ರಾಜಶೇಖರನರೇಂದ್ರಂ ವಿಮಳತರತರಂಗಿಣೀತಟವಿಪ್ರಳಗಿರಿಕಟಕವಿವಿಧಕಾಸಾರಪರಿಸರಸ್ಥಿತದಳಫಳಕುಸುಮವಿಸರವಿಳಸಿತದಿವ್ಯತರುಮನೋಜ್ಞನಂದನಂಗಳೊಳ್ಬೀಡುವಿಡುತ್ತಮಿನಿಯಳೊಡನೆ ಬಿನದಿಸುತ್ತುಂ ಮೆಲ್ಲಮೆಲ್ಲನೇಳ್ತಂದು ನಿಜರಾಜಧಾನಿಯಂ ಸಂಭ್ರಮಂ ಮಿಗೆ ಪುಗುತರ್ಪ್ಪನ್ನೆಗಂ

ಮಂದಾನಿಲರಗಳೆ || ಆವೇಳೆ ಯೊಳತಿಸಂಭ್ರಮಮೆಸೆದಿರೆ | ಪೂವಲಿ ಪುರವೀಧಿಗಳೊಳ್ನೆರೆದಿರೆ | ಪವಳದ ರನ್ನದ ಗುದಿಗಳ ಗುಡಿಗಳ್ | ನವಮೌಕ್ತಿಕರಂಗದ ದಾಂಗುಡಿಗಳ್ | ಮೆರೆದುವು ಮಿರುಗುವಮಿಸುನಿಯ ತೋರಣ | ಮರಿ

ಕೆಯ ಪುರಜನದುತ್ಸವದೋರಣ | ಮಾನೆಯ ಮೇಲಣ ಪಳವಿಗೆ ಮಿಳಿರ್ದಿರೆ | ನಾನಾವಿಧವಾದ್ಯಧ್ವನಿಯುಳುರ್ದಿರೆ | ಕರೆದುವು ಬಿರುದಿನ ಕಹಳೆಗಳಾಗಳ್ | ಪರೆದುದು ಪಳಹದ ರವಮೆಣ್ದೆಸೆಯೊಳ್ | ಗಿರಿಬಂಧುರಸಿಂಧುರತತಿ ನಡೆತರೆ| ಚರವೃಂದದ ಕುಂದದ ಕೆಳಕಳಮಿರೆ | ಪೊಸಮೇಳದ ತಾಳದ ಮೃದುನಿನದಂ | ಪಸರಿಸೆ ಗೀತರವಂ ಕಡುಬಿನದಂ | ಬಡೆದಿದಿರ್ವಂದುದು ರಾಜಪ್ರಚಯಂ | ಬಿಡದೊಡವಂದುದು ನಾರೀನಿಚಯಂ | ಕಳಶಂ ಕಂನಡಿ ವೀಜನತತಿಯುಂ | ತಳೆದಿಳಿಕೈಯುತೆ ಚೆಲ್ವಿಂ ರತಿಯುಂ | ಸಲೆ ವಾರಾಂಗನೆಯರ್ಬರುತಿರ್ದರ್ | ಕೆಲರಾರತಿವಿಡಿದೈತರುತಿರ್ದರ್ | ಮುತ್ತಿನ ಸತ್ತಿಗೆ ವೊತ್ತಂಬೆತ್ತಿರೆ | ಸುತ್ತಿತುರಂಗಿಗಳೊತ್ತಿಸುತ್ತಿರೆ | ವಂದಿಸೆ ವಂದಿಜನಂ ಜಯಜಯವೆನೆ | ಮುಂದೆಸೆ ಬಂದೆಸೆವವರತಿಶಯಮೆನೆ | ಕಡೆಗಂಗಳ ಕುಡಿವೆಳಗೆಡೆವುಗುತಿರೆ | ನಿಡುಮುಡಿ ಮುಗುಳಂ ಪುರುಡಿಸುತುಗುತಿರೆ | ಪೆಣ್ಬಡೆ ಸೂಸಿತು ಲಾಜವ್ರಜಮಂ | ತಣ್ಬಿಸಿಲೆನೆ ಪಟವಾಸದ ರಜಮಂ | ತನುರುಚಿನಿರ್ಜಿತಸೌದಾಮಿನಿಯರ್ | ಘನಸಂಭ್ರಮದ ರೆಬಕರ್ಾಮಿನಿಯರ್ | ನೆಲವನೆ ನೆಲೆನೆಲೆಗಳನೇರುತ್ತುಂ | ಕಲಿತಕಟಾಕ್ಷದ ರುಚಿವೀರುತ್ತಂ| ನೋಡುತ್ತಿರೆ ಕರಿವರಮಸ್ತಕದೊಳ್| ತೋಡಿಲ್ಲದೆ ಬಗೆಗೊಗೆದುತ್ತುಕದೊಳ್ | ಯುವತಿಸಹಿತಮವನೀಶ್ವರತನಯಂ | ಸುವಿಳಾಸತಿರಸ್ಕೃತಹರಿತನಯಂ | ಪಿರಿದುತ್ಸವದಿಂದೇಳ್ತಂದಾಗ | ಳ್ಬರದಿಂದರಮನೆಯಂ ಪುಗುವಾಗಳ್ ||

ವೃ|| ಜಡಿಯೆ ಘನಸ್ತನಂ ಪೊಡರೆ ಪೂರ್ಣ ನಿತಂಬಮಪಾಂಗಕಾಂತಿ ಮುಂ |
ದಿಡೆ ಕುಸುಮಾಸ್ತ್ರಮಂ ಕೆದರೆ ತಣ್ಗದಿರಂ ರದನಾಂಶು ಒಳ್ಕೆ ತೆ ||
ಳ್ನಡು ಮುಡಿ ಸೂಸೆ ಬಲ್ಮುಗುಳನಂದಿದಿರ್ವಂದು ಮಹೋತ್ಸವಂ ಮನ |
ಕ್ಕೆಡೆಗುಡೆರನ್ನದಾರತಿಯನೆತ್ತಿದುದೊಲ್ದು ವಿಳಾಸಿನೀಜನಂ || ೪೨

ವ|| ಇಂತು ಸಖೀಜನ ಮೆಸಗುವ ಮಂಗಳೋಪಚಾರಂಗಳಂ ಕೈಕೊಳುತ್ತುಂ ನಿಜಜನನೀಜನಕರಿರ್ಪೆಡೆಗೆ ರಮಣಿವೆರಸೇಳ್ತಂದು ಪೊಡಮಟ್ಟು ನಿಂದಾಗಳಮೃತಮತಿಮಹಾದೇವಿ ಸತ್ಯೇಂದ್ರಚೋಳೇಂದ್ರರಿರ್ವರುಂ ನಲವರಕೆಯಿತ್ತು ಪರಿತೋಷದಿಂ ಪರಸಿ ಕುಳ್ಳಿರಿಸಿ ಸರಸಪ್ರಸನ್ನಸ್ನಿಗ್ಧಮಧುರ ತರಕಟಾಕ್ಷಂಗಳಿನ

ಭೀಕ್ಷಿಸಿ ಸಮುಯೌವನರೂಪಲಾವಣ್ಯಸೌಶೀಲ್ಯಸಂಪದಕ್ಕೆ ಸಂತಸಂಬಟ್ಟುಸಮುಚಿತಮಂಗಳಂಗಳಂ ರಚಿಸಿ ಸುಮುಹೂರ್ತದೊಳ್ಮಸೆದುಂಬಿಸಲೊಡನೆ ನಿಜಸಿತಂಬಿನಿಯೊಳ್ಕೂಡೆ ಸಾರತರಸಂಸಾರಸುಖಮನನುಭವಿಸುತ್ತುಮಾರಾಜಶೇಖರಂ ಹರಚರಣಪೂಜಾಸಾಮ್ರಾಜ್ಯಧುರಂಧರಂ ಶರಣಜನಸಂತಾನಸಂತಾನಂ ಪರಮಹರ್ಷದಿಮಿರುತ್ತುಮಿರ್ಪ್ಪಾಗಳ್ ||

ವೃ|| ಕಳಕಂಠೀಕಳನಾದಕಾಹಳಿಮಿಳದ್ಭೃಂಗಾವಳೀರಾವಮಂ |
ಜುಳಗೀತಂ ಶುಕವಂದಿವೃಂದನಿನದಂ ಮಂದಾನಿಲಾಂಗೋಳಿಕೋ ||
ಜ್ಜ್ವಳವಲ್ಲೀಮೃದುಲಾಸ್ಯಮೊಪ್ಪಿರೆ ವನಶ್ರೀವಲ್ಲಭಂ ಸಂಮುದಂ |
ದಳೆದೇಳ್ತಂದನಮಂದವೈಭವಯುತಂ ಚೈತ್ರಕ್ಷ್ಮಾಧೀಶ್ವರಂ || ೪೩

ವ|| ಅಂತುಮಲ್ಲದೆಯುಂ

ವೃ|| ವನಿತಾವಕ್ತ್ರಾಂಬುಜಂ ಮುನ್ನಲರೆಸರಸಿಜಂಪಿಂತೆ ಕಾಂತಾಕಪೋಲೇಂ|
ದುನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ ಭಾಮಾಮನಶ್ಛ ||
ತನಗಂ ಮುಂ ಪಲ್ಲವಂಬೆತ್ತಿರೆ ಸರಸರಸಾಲವ್ರಜಂ ಪಿಂತೆ ತಸ್ವೀ |
ತನುವಲ್ಲೀಶ್ರೇಣಿ ಮುಂ ರಂಜಿಸೆ ವನಲತೆ ತಾಂ ಪಿಂತೆ ಬಂದಂ ಬಸಂತಂ|| ೪೪

ಮಲಯೋರ್ವೀಧರತುಂಗ ಶೃಂಗವಿಚರದ್ವಿದ್ಯಾಧರೀಕೋಮಳಾಂ |
ಗಲತಾಸೌರಭಶಾಲಿ ವಾಮನಕರಾಕೀರ್ಣೋದಕೋದ್ಯತ್ಕಣಾ ||
ವಪಿ ಮಾರ್ಗಸ್ಥಿತಚಂದನಾಗಗತನಾಗಾಪೀತಶೇಷಂ ಧರಾ |
ತಲಕಾನಂದಮನೊಂದಿಸುತ್ತೆ ಸುಳಿದಂ ಮತ್ತಲ್ಲಿ ಮಂದಾನಿಲಂ || ೪೫

ನಗಿಸುತ್ತಂ ಮಲ್ಲಿಕಾಕಾಮಿನಿಯನಳಿರವವ್ಯಾಜದಿಂ ಸೋಂಕಿ ಮೆಯ್ಯೊ |
ಳ್ನಿಗಪುತ್ತುಂ ಚೈತ್ರದೂತೀಯುವತಿಗೆ ಮುಕುಳವ್ಯಾಜದಿಂಘರ್ಮವಾರ್ಬಿಂ||
ದುಗಳಂ ಮೇಣ್ಛೂತವಲ್ಲೀ ವನಿತೆಗೆ ಪಡೆಯುತ್ತಂಕುರವ್ಯಾಜದಿಂ ನೆ |
ಟ್ಟಗೆ ರೋಮಾಂಚಂಗಳಂ ಸದ್ವಿಟನೆನೆ ಸುಳಿದಂ ವೇಗದೂರಂ ಸಮೀರಂ|| ೪೬

ವ|| ಮತ್ತಮಾಗಳ್

ವೃ|| ತಳಿರ್ವೆಳವಾವು ಪಲ್ಲವಿಪಶೋಕೆ ಮುಗುಳ್ತುದಿರ್ಮುತ್ತೆ ಮೊಗ್ಗೆಯಂ |
ತಳೆಯಲೊಡರ್ಚ್ಚಿನಿಂದಮೊಸಮಲ್ಲಿಗೆ ಪುಷ್ಪಮನಾಂತಚಂಪಕಂ||
ಪಳೆಯೆಲೆಯಿಕ್ಕಿಸಣ್ಣನನೆಯೇರಿದಪಾಟಳಿ ಪೂವನಾಂತು ಕಂ |
ಗೊಳಿಸುವ ಕರ್ಣಿಕಾರಮಲರ್ದೀವಿದಮುತ್ತಮದೆತ್ತನೋಳ್ಪೊಡಂ || ೪೭

ಮೊಡವಿಗಳಂತೆ ಮೂಡೆ ಪೊಸಮೊಗ್ಗೆಗಳಾಮಧುದೂತಿಯಲ್ಲಿ ಸೊಂ |
ಪಿಡಿದಿರೆ ವಲ್ಲರೀತನು ಸುಮಸ್ತಬಕಸ್ತನಮಲ್ಲಿ ಪೊಣ್ಮೆ ಕ ||
ಪ್ಪಡರ್ದತಮಾಲವಲ್ಲಿ ಬಡಚಾಸೆವೊಲೊಪ್ಪಿರೆ ಪದ್ಮಲೋಚನಂ |
ಬಿಡದಲರ್ದೊಪ್ಪೆ ಜೌವನಮನಾಂತವೊಲಾವನಲಕ್ಷ್ಮಿ ತೋರಿದಳ್ || ೪೮

ಕಂ|| ಗಿಳಿಗಳೆರಂಕೆಯ ಪಚ್ಚೆಯ |
ಸಳಿಮಾಲೆಯ ನೀಲಮಾಲೆಯುಂ ಮಾವಿನಚೆಂ ||
ದಳಿರ್ಗೆಂಪಂ ಬನಸಿರಿ ತಾಂ |
ತಳೆದಾಮಾಧವಮನೋಜ್ಞೆಯೆನಿಸುತ್ತೆಸೆದಳ್ || ೪೯

ವ|| ಅದಲ್ಲದೆಯುಮಲ್ಲಿ

ವೃ|| ಮದನಂ ಪೂಸರಿಲಿಂದೆ ಪೂಣ್ದಿಸೆ ತಪಸ್ಸಂಯುಕ್ತಕಾರ್ಕಶ್ಯಚಿ |
ತ್ತದೆ ತಾಂ ನಾಂಟದಿದೆಂದು ಬಂದು ಮಧುವೆಂದೆಂಬೋಜನಂದೊಟ್ಟಿ ಮು||
ತ್ತದ ಪೂಗೆಂಡಮನಲ್ಲಿ ಬಲ್ಸರಲ ಮಾಡಲ್ಮೇಲಯಃಪಿಂಡಖಂ |
ಡದ ಸಾಲಿಟ್ಟದನೂದಿದಂತೆ ಮೆರೆಗುಂ ಭೃಂಗಾಳಿಯಿಂ ಗಾಳಿಯಿಂ || ೫೦

ಕಂ|| ಮಧುಸೇವನೆಯಿಂ ಸೊಕ್ಕಿರ್ಕೆ |
ಮಧುಪಂ ಸುಮನಃಪ್ರಜಯಮನಲೆದೊಡೆ ಶಿಖಿಯೊಳ್ |
ಮಧುರಿಪುಜನ ಬೆಸದಿನದಂ |
ಮಧು ದಂಡಿಪತೆರದೆ ಮುತ್ತದಲರೊಳದೆಸೆಗುಂ || ೫೧

ವ|| ಮತ್ತಮದಲ್ಲದೆಯುಂ

ವೃ|| ಅಂಗಜಭೂಭುಜಂ ವಿಜಯಯಾತ್ರೆಗೆ ಪೋಗಲೊಡರ್ಚೆ ಚೈತ್ರನು |
ತ್ತುಂಗಪಿಕಧ್ವನಿಸ್ಫುಟಮಹಾಪಟಹಧ್ವನಿಗೆಯ್ಯೆ ಕೇಳ್ದು ಚೂ ||
ತಂಗಳೆನಿಪ್ಪವೀರಭಟರೇಳೆ ನವಾಂಕುರ ರೋಮರಾಜಿ ಸ |
ರ್ವಾಂಗದೊಳಂದು ಪಲ್ಲವಲಸತ್ಕವಚಾವಳಿದೊಟ್ಟು ತೋರಿದಳ್ || ೫೨

ಜೇವಣಸಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ ಕೀ |
ರಾವಳಿಕೋಕಿಲಾವಳಿಗಳಗ್ಗದಪಾಠದಪಟ್ಟಶಾಲೆ ಮ ||
ಲ್ಲೀವಧು ಲಾಸ್ಯಮಭ್ಯಸಿಪನರ್ತನಶಾಲೆ ನವೀನಚೈತ್ರಲ |
ಕ್ಷ್ಮೀವರಚಿತ್ರಶಾಲೆ ಮಧುಭೂಭುಜನೋಲಗಸಾಲೆ ಮಾಮರಂ || ೫೩

ವ|| ಮತ್ತಂ

ವೃ|| ಗಿಳಿ ಗಿಳಿದಾಲಿ ಚೆಂದಳಿರೆ ಚಂದಿರಗಾವಿಯನೂತನಾಂಬರಂ |
ಸುಳಿಯದೆ ನಿಂದತುಂಬಿಗಳ ಸಾಲ್ಪವಿಭೃನ್ಮಣಿಮಾಲೆ ಪುಷ್ಪಸಂ ||
ಕುಳದ ರಜಂ ಸುಗಂಧದರಜಂ ತನಗಾಗಿರೆ ತಾಳ್ದು ಮಲ್ಲಿಕಾ |
ಲಳನೆಯೊಳೇಂ ಮಸಂಬಡಿದನೋ ಬನದೊಳ್ಸಹಕಾರಪಲ್ಲವಂ || ೫೪

ಅತಿಕುಳಝೇಂಕೃತಿಪ್ರಚುರಕಿಂಕಿಣಿಕಾರಣಿತಂ ಶುಕಸ್ವನಾ |
ಕುಳವಿಕಟಾಟ್ಟಹಾಸನಿನದಂ ಸುಮನಸ್ಸ್ಫುಟಹಾಸರೋಚಿ ಸ ||
ತ್ಫಳಮಣಿಮಾಲ್ಯನುದ್ಗತರಜೋಭಸಿತಂ ಮಧುಮತ್ತನಲ್ಲಿಕೋ |
ಕಿಳರವಶೃಂಗನಾದನೆಸದಂ ತಳಿರ್ಗೈಯ ರಸಾಲಭೈರವಂ || ೫೫

ತಳಿ*ರ್ಗಳೆ ದಟ್ಟಿಯಾಗೆ ಕೊನರೆಂಬಜೆರಲ್ಗದು ವಜ್ರಮುಷ್ಟಿಯುಂ |
ತಳವಡೆ ತೋರಮಾಮಿಡಿ ಶಿಖಂಡಕದಂತಿರೆ ಮಧ್ಯದಲ್ಲಿ ಕಂ ||
ಗೊಳಿಪಳಿಪಿಂಡು ತದ್ರಜಮೆ ಮೃದ್ರಜದಂತಿರೆ ಕೋಕಿಳಸ್ವರಂ |
ಕಳಕಳಮಾಗೆ ಮಾಮರಮದೊಪ್ಪಿತು ಮಾರನಮಲ್ಲಸಂತೆವೋಲ್ || ೫೬

ಕಳರವಮಿತ್ತುದೆನ್ನ ಕಳಕಂಠನಕಂಠಕೆ ತನ್ನಕೋರಕಂ |
ಗಳ ರಸದಿಂದೆ ಪಣ್ಗಳರಸಂಗಳಿನೆನ್ನ ಶುಕಾಳಿಗಳ್ಗೆ ಮಂ ||
ಜುಳಮಧುರೋಕ್ತಿಯಿತ್ತುದದು ಮಲ್ಲದೆ ಪಲ್ಲವಬಾಣಮೀವುದೆ |
ನ್ನಳಿಯನೆ ಪೂಗಳಿಂ ಪೊರೆವುದೆಂದದನಾಮದನಂ ಸಿರೀಕ್ಷಿಪಂ || ೫೭

ಚೆಂದಳಿರಂದವೆತ್ತಪೊಸಗಾಸೆ ಮದಾಳಿಗಳಿಂಚರಂ ನಯಂ |
ಗುಂದದಕಿಂಕಿಣೀಕ್ವಣಿತ ಮುದ್ಗತಕೋರಕಹಸ್ತಶಾಖೆಯೊ |
ಳ್ನಿಂದಲರ್ಜೊಂಪಮೋ ಪಿಡಿದಚಾಮರಮಾಗಿರೆ ದೇಸಿವೆತ್ತುತ |
ನ್ನಂದನರಂಗದೊಳ್ಕುಣಿದಳಾವ್ರಲತಾನಟಿ ಮುಚ್ಚೆ ಮನ್ಮಥಂ || ೫೮

ಕಂ|| ಪಲ್ಲವದೊಳಿರ್ದು ಕೋಗಿಲೆ |
ಮೆಲ್ಲನೆ ದನಿಗೈಯೆ ತತ್ಪ್ರಸೂನದೊಳಳಿಗಳ್ ||
ಮೆಲ್ಲುಲಿಗುಡೆ ಮಾವುಂ ಪೊಸ |
ಮಲ್ಲಿಗೆಯುಂ ಕೂಡಿ ಪಾಡುವಂತಿರೆ ತೋರ್ಕುಂ || ೫೯

ವ|| ಅದಲ್ಲದೆಯುಂ

ವೃ|| ಗಿಳಿಗಳ್ಮತ್ತೊಂದುಪಣ್ಣಂತುಡುಕುಗುಮಳಿಗಳ್ಪೋಗಿಮತ್ತೊಂದುಪೂವೊ |
ಕ್ಕಳಿವಂಡಂ ಪೀರ್ಗುಮಾಕೋಕಿಳಶಿಶುಗೆಲೆ ನೀನಲ್ಲದಾರುಂಟು ನಿನ್ನೊಳ್ ||
ತಳಿರೆಂದಿಂಗಪ್ಪುದೆಂದೇ ಬಯಸಿ ಮಧುಗೆ ಮೌನವ್ರತಂಗೊಂಡುದೈ ಕೇ |
ಳೆಳಮಾವೇ ಪತ್ತರೊಳ್ಕಾಣದಿರಿಗನೆಸುತುಂ ಕಾಯುಜಂ ಕಯ್ಯೊಳಿತ್ತಂ || ೬೦

ವ|| ಮತ್ತಂ

ವೃ|| ಅಳಿಕುಳಮೆಲ್ಲ ಪೀರ್ದೊಡರೆಯಾಗದಸನ್ಮಧು ಮಂದಮಾರುತಂ |
ಸೆಳೆದೊಡೆ ಕುಂದದಿರ್ಪ್ಪನರುಗಂಪಲರೊಳ್ಗಿಳಿವಿಂಡು ಪೀರ್ದೊಡಂ ||
ಕಳೆಯದೆ ತುಂಬಿ ತೀರ್ಪ್ಪರಸವಾಪೊಸಪಣ್ಗೊಳನೇಕಕೋಕಿಳಾ |
ವಳಿ ಮುಱಿದೊಟ್ಟಿ ಪಿಂಗದ ತಳಿರ್ಕ್ಕಿರುಮಾಮರದೊಳ್ಮನೋಹರಂ || ೬೧

ಕಂ|| ಅಲಗೊರ್ಂಜಿನಲ್ಲಿ ತುಂಬಿಗ |
ಳುಲಿ ಮಿಳಿರ್ವೆಳದಳಿರನಾಂತಕೊಂಬುಗಳೊಳ್ಕೋ ||
ಗಿಲೆಗಳ ಕಳರುತಿ ಪಣ್ಗ |
ಳ್ಗೆಲಸಿದನಿಡುಗೊಂಬಿನಲ್ಲಿ ಪುರುಳಿಗಳ ರವಂ || ೬೨

ಅಳಿಗಳೊಡನೊಡನೆ ದನಿಗುಡೆ |
ಗಿಳಿಗಳ್ನಲಿನಲಿದು ಮಾರವೀರನ ಬಿರುದಾ ||
ವಳಿಯಂ ಪಾಡುತ್ತಾಡಿದು |
ವೆಳಗಾಳಿಗೆ ತೊನೆವತಳಿರ್ಗಳುಯ್ಯಲನಾಗಳ್ || ೬೩

ವ|| ಇಂತೊಪ್ಪುವಮಧುಮದನ ಮನೋಹರಂಗಳಾದ ಮಾಮರಂಗಳಲ್ಲದೆಯುಂ

ಕಂ|| ಅಸುಗೆ ತಳಿತ್ತುರ್ವ ವಿಯೋಗಿಗ |
ಳಸುಗೆ ಕರಂ ಮುಳಿಗುಮೆಂದು ಮುಳಿದೊದೆಯೆ ವಧೂ ||
ವಿಸರಂ ತತ್ಪದಯಾವಕ |
ರಸಮುಮುರ್ದವೊಲೆಸೆದುದದರ ಚೆಂದಳಿರ್ದುರುಗಲ್ || ೬೪

ಸಿರಿಯುಳ್ಳೊಡಳಿಗಳಿಂದೀ |
ವರದೊಳ್ಬಿಡದಿರ್ದ್ದು ತೊಲಗೆ ತೊಲಗುತೆ ವಿಕಚಾಂ ||
ಬುರುಹದೊಳೆ ಸಲಸೆ ಸಲಸಿದು |
ವರರೆ ಗತಶ್ರೀಕನಪ್ಪನಂ ಸೇವಿಪರಾರ್ || ೬೫

ಬನಸಿರಿ ಸುರವರಲೋಕದ |
ಬನಸಿರಿಗುರೆ ತೋರಲೆಂದು ನಿಜವಿಭವಮನಂ ||
ದನುನಯದಿಂ ಕಟ್ಟಿದಕಾಂ |
ಚನತೋರಣಮೆಸಿಸಿ ಕರ್ಣಿಕಾರಂ ಮೆರೆಗುಂ || ೬೬

ವೃ|| ಇದು ಮಧುದತ್ತಮೌಕ್ತಿಕಮೊ ಮಂಜುಳಚೂತಭುಜಂಗಸಂಗದಿಂ |
ದೊದವಿದಘರ್ಮವಾರಿಕಣಮೋ ರತಿದೇವಿ ವಿನೋದದಿಂದೆ ಸೂ ||
ಸಿದಜಳಯಂತ್ರಚಂದನಗತೋದಕಶೀಕರಮೋ ಮುದಾಳಿವೃಂ |
ದದ ಕೃತಪುಣ್ಯದೊಂದುರುಳಿಯೋ ಪೊಸಮಲ್ಲಿಗೆ ತಾಳ್ದಮೊಗ್ಗೆಯೋ || ೬೭

ವ|| ಎನಿಸಿರಂಜಿಸೆ

ಕಂ|| ಕಳೆದುದು ಮಧುಮದಮಧುಪಂ |
ಗಳ ವಿಪುಳಭ್ರಾಂತಿಯುಂ ನಿಜಪ್ರಸವರಸಂ ||
ಗಳಿನಾವಿಚಕಿಲಲತೆ ನಿ |
ರ್ಮಳರೆಡೆಗೈದಿದೊಡೆ ಮಾಡರೇ ಪರಹಿತಮಂ || ೬೮

ವೃ|| ತರುಣಾಮ್ರಕ್ಕೊಳಗಾದಮೋಲ್ತೊಲಗಳೆಂದುಂ ಬಂದತಂಗಾಳಿಯಂ |
ಭರದಿಂದಪ್ಪುವಳಲ್ಲಿ ಜಾರೆ ವಸನಂಬೋಲ್ಜೀರ್ಣಪರ್ಣಂ ಸುಮಾ ||
ಧರಮುಂ ಚುಂಬಿಪತುಂಬಿಗೀವಳಿವಳಾಗಳ್ಪಾಟಳೀನಾರಿ ಪಾ |
ದರಿಯೆಂದೊಳ್ವೆಸರಿಟ್ಟನೀಕೆಗಜನೆಂದಂಗೋದ್ಭವಂ ಮುಚ್ಚುವಂ || ೬೯

ವ|| ಆನಂದನಾಂತರಾಳದಲ್ಲಿ

ವೃ॥ ತಿಳಿಗೊಳದಲ್ಲಿ ಸುತ್ತಿ ಸುಳಿದೆತ್ತಿ ಸರೋಜಪರಾಗಪೂಗಮಂ |
ಗಳಿಲನೆ ಪೊತ್ತು ಬಪ್ಪೆಡೆಯೊಳುಯ್ಯಲನಾಡುವ ಗಾಡಿಕಾರ್ತಿಯ ||
ರ್ಕ್ಗಳ ಪೊರವಾಗ್ಗಳಪ್ಪಳಿಸೆ ತೂಪ್ಪನೆ ಬೀಳ್ದಲರೆಯ್ದೆ ನೊಂದು ಸಂ |
ಚಳಗತಿಯಿಂ ಮದಾಳಿನಿನದಚ್ಛಲದಿಂ ನರಳುತ್ತೆ ಬಪ್ಪನಂ || ೭೦

ಗಿಳಿವಾತಿಂದುಪಚಾರಮಾಡಿ ತಳಿರ್ಗೈಯಿಂದಿತ್ತಬಾರೆಂದು ಕೋ |
ಕಿಳಚಂಚೂದಳಿತೋರುಕೋರಕರಸಸ್ನೇಹಂಗಳಿಂ ನೀವಿ ನಿ ||
ಶ್ಚಳಭೃಂಗೀರವದಿಂದೆ ಮಂತ್ರಿಸಿ ರಸಾಲಂ ರಕ್ಷೆಗೈದಾತನಂ |
ಕಳೆಗೊಂಡಂ ತನಗಾತನಂದೆಸಗೆ ಲೇಸಂ ಮುಯ್ಯನೀವಂತೆವೋಲ್ || ೭೧

ಮಾವಿನೊಳೇರಿ ಮಲ್ಲಿಗೆಗೆ ಪಾರಿ ಮರಂದದೊಳಳ್ದು ಜಾರಿ ಕೆಂ |
ದಾವರೆಗೋಡಿ ಕೇಸರದೊಳಾಡಿ ಕರಂ ಮಧುವೀಂಟಿ ಪಾಡಿ ಮೆ ||
ಲ್ಲಾವರಮೆತ್ತಿ ಮಾಧವಿಯನೊತ್ತಿ ಮಹೋತ್ಸವದಿಂದೆ ಸುತ್ತಿ ಭೃಂ |
ಗಾವಳಿ ಧೂಳಿಯುತ್ತಕುಸುಮಾಳಿಯೊಳಾಂತುದು ಚಾರುಕೇಳಿಯಂ || ೭೨

ವ॥ ಮತ್ತಮನಂಗತೇಜದೊಡನೆ ಚಂಪಕನಿಕಾಯುಂ ಪೆಂಪುವಡೆಯೆ ರತಿಯ
ಮೊಗದೊಡನೆ ಸುರಯಿ ಸೊಂಪುವಡೆದಲರೆ ಜತಿಗಳ ಧೃತಿಯೊಡನೆ ಜಾತಿ ಬೀತಿ
ಮುನಿದಿನಿಯಳ್ಗೆ ಕಾಲ್ಗೆರಗಿ ಪಲ್ಗಿರಿವ ಕಾಮಿಜನವದನದೊಡನೆ ದಾಡಿಮಂ ಬಿ
ಯೆ ಪಥಿಕರ ಮುಖದೊಡನರಸೇರಿಲ್ಪಣ್ತು ಕಳ್ತಲಿಸೆ ಕೊಳದ ಜಳಂಗಳೊಡನೆ ತಿ
ವೆಳ್ದಿಂಗಳುಜ್ಜ್ವಲಿಸೆ ವಿರಹಿಸಂತಾಪದೊಡನೆ ತಪನದ್ಯುತಿ ಕಷುವಿಸುಪುದಳೆವ
ವಿಜೃಂಭಿಸೆ ಬಂದಭುವನಜನಮನೋಜ್ಞಮಾದಮಧುಮಾಸದಲ್ಲಿ

ವೃ॥ ಆಳಿಮುಳಿಸೆಂಬಪಣ್ಗೊಲೆ ಕಳಲ್ದುದು ಸದ್ರತಿಯುತ್ಸವಾಂಕುರಂ |
ಪೊಳೆತುದು ರಾಗಮೆಂಬತಳಿರೊತ್ತಿದುದುನ್ಮದಕುಟ್ಮಳಾಳಿ ಸಂ ||
ಗಳಿಸಿದುದಲ್ಲಿ ಮೋಹಕುಸುಮಂ ಪೊಸತಾಗಲರ್ದತ್ತು ಸಂಗಸ |
ತ್ಫಳಮುಮರ್ದತ್ತು ಕಾದಲಜನಂಗಳೊಳೆಯ್ದೆ ಮನೋಜಮಾರುತಂ || ೭

ವ॥ ಅದಲ್ಲದೆಯುಮಲ್ಲಿ

ವೃ॥ ಕೊನರಸೆ ಕೊಕ್ಕಿಸಿಂ ಸೆಳೆದು ಖಂಡಿಸಿ ಸೋರ್ವರಸಪ್ರವಾಹಮಂ |
ಮನಮೊಸದೀಂಟಿ ಗಂಟಲೊಳೆ ನುಣ್ದನಿ ಪೊಣ್ಮೆ ವಿಯೋಗಿವೀಧಿಜೀ ||
ವನಮುದು ಕಂಪನಂಗೊಳೆ ಪುಗಿಲ್ಪುಗಿಲೆಂಬಪಿಕಸ್ವನಂಗಳಂ |
ಮನಸಿಜನೊಲ್ದು ಕೇಳ್ದು ಭುಜವೊಯ್ದು ಬೆರಲ್ಮಿಡಿದಾವಸಂತನಂ || ೭

ಪೊಗಳ್ದಿಂದಂ ಚತುರಂಗಸೈನ್ಯಮನಿತಂ ನೀಂ ಕೂಡು ನೀಡಿತ್ತ ಮೂ |
ಜಗಮಂ ಮೋಹಿಪಪುಷ್ಪಚಾಪಸುಮನೋಬಾಣಂಗಳಂ ಕಯ್ಗ ಯೋ ||
ಗಿಗಣಂ ಮಾರ್ಮಲೆತಿರ್ಪುದೆತ್ತ ಬಿಡದತ್ತಲ್ಪೋಪಮೇಳೆಂದು ಸಂ |
ಪಗೆಜೋಡಂ ಮಿಗೆತೊಟ್ಟು ದಿಗ್ವಿಜಯಯಾತ್ರಾರಂಭಮಂ ತಾಳ್ದಿದಂ|| ೭೫

ವ|| ಆಗಳ್

ವೃ|| ವಸಂತಪನಪಾಲಕಂ ತಳಿರ ತೋರಣ ಶ್ರೇಣಿಯಿಂ |
ರಸಂಬಿಡಿದಪಣ್ಗಳಿಂದಲರ್ದ ಪುಷ್ಪಗುಚ್ಛಂಗಳಿಂ ||
ಮುಸುಂಕಿ ವನಮೆಲ್ಲಮಂ ಕರೆದು ಕಾಮನಂ ಪ್ರೇಮದಿಂ |
ಜಸಂಬಡೆದಬಾಣಮಂ ಪಿಡಿದು ಕಾಣ್ಕೆಯಂ ನೀಡಿದಂ || ೭೬

ವ|| ಇಂತು ವಿಶ್ವಜನಮನಮಂ ಬನಮನೊರ್ಮ್ಮೆ ಸೊಂಪೇರಿಸುತ್ತುಂ ಬಂದಬಸಂತಮಾಸನೊಳೊಂದುವಾಸರದುಷಃಕಾಲಗೊಳುಮಾಕಾಂತನಂ ಪೂಜಿಸಿದನಂತರಂ

ವೃ|| ರಮಣೀಸಸ್ಮೇರವಕ್ತ್ರಾಂಬುರುಹವಿಸರದೊಳ್ಕಾಮಿನೀನೋರ್ಲ್ದತಾವಿ |
ಭ್ರಮದೊಳ್ಕಾಂತಾಕಚಾಳಿಪ್ರಚಯದೊಳಬಲಾಂಘ್ರಿಪ್ರವಾಳೌಘದೊಳ್ಚಂ||
ದ್ರಮುಖೀಸಂಗೀತಚಂಚತ್ಕಿಕಕಳರುತಿಯೊಳ್ಕಾಮಿನೀ ಮಂದಹಾಸೋ |
ದ್ಗಮದೊಳ್ಕಾನಿದ್ರ ನಾಸ್ತಾನದೊಳತುಳವನಸ್ಪರ್ಧಿಯೊಳ್ಪ್ಭವಸಂತಂ|| ೭೭

ಕುಂದಮಂದಹಾಸಮಂಜುಳಾಂಬುಜಸ್ರಭಾನನೇ |
ಚಂದನೇಂದುಗೌರಶಂಕರಾಂಕಪೀಠಕಾಶ್ರಿತೇ ||
ಸಂದಿತೇಂದಿರಾದಿಶಕ್ತಿವಂದಿತಾಂಘ್ರಿಪಂಕಜೇ |
ಚಂದಮೊಂದೆ ರಕ್ಷಿಸೆನ್ನನಿಂದು ಸರ್ವಮಂಗಳೇ || ೭೮

ಗದ್ಯ|| ಇದುವಿನಮದಸುರವರಮಕುಟತಟಘಟಿತಮಣಿಗಣಮಹಾಪ್ರ
ಭಾಪಟಲಪರಿವೃತಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿರುಂ
ದ್ರಚಂದ್ರಿಕಾಚಂಚಚ್ಚಕೋರಾಯಮಾನಸರಸಜನಮಾನಿ
ತೋಭಯಕವಿತಾವಿಶಾರದಶ್ರೀಷಡಕ್ಷರದೇವವಿರಚಿ
ತಮಪ್ಪರಾಜಶೇಖರವಿಳಾಸವಿಪುಳಪ್ರಬಂಧ
ದೊಳ್ಗೇಮಂತವಸಂತಋತುವರ್ಣ
ನಂ. ನವಮಾಶ್ವಾಸಂ.
ಸಂಪೂರ್ಣಂ.

# ದಶಮಾಶ್ವಾಸಂ

ಕಂ|| ಶ್ರೀಗಿರಿರಾಜಸುತಾಸುಖ |
ಸಾಗರರಾಕಾಶಶಾಂಕನಕಳಂಕನಶೇ ||
ಷಾಗಮನುತನಘನಂ ಬಿಡ |
ದೀಗೆಮಗೆ ನಿಜಾಂಘ್ರಿಭಕ್ತಿಯಂ ಶಿವಲಿಂಗಂ ||

ವ|| ಅಂತುಮಾಯುವರಾಜಂ ರಾಜಿಸುತ್ತಿರ್ಪ್ಪಿನಮೊರ್ವ್ವಂ ದ್ವಾರಪಾಪಾಲನಿವಾರಿತಂ ವೇತ್ರಧರನಿವೇದಿತನಾಮಹಾಸ್ಥಾನಮಂ ಪೊಕ್ಕು ಮೆಯ್ಯಿಕ್ಕಿ ಕಯ್ಯಂ ಮುಗಿದುನಿಂದು

ವೃ|| ವನಪಾಲಂ ಕಾಣ್ಕೆಗೊಟ್ಟಿದಂ ವಿಚಕಿಲದಲರಂ ಪಚ್ಚೆಯಂ ಬಾಳೆವಣ್ಣೊ|
ಳ್ಗೊನೆಯಂದಾಳಿಂಬವಣ್ಣಂ ಸುರಯಿಯನುರುಚಾಂಪೇಯಮಂ ಚೈತ್ರದೂತೀ||
ಘನಗುಚ್ಛವ್ರಾತಮಂ ಪಾಟಳಿಯನೆಸೆವಶೋಕಪ್ರಸೂನಾಳಿಯಂ ಮಾಂ |
ಗೊನರಂ ಮಾಧೂಕಶ್ರೇಣಿಯನರೆವಿರಿದಂಭೋಜಮಂ ಕೂರ್ಮ್ಮೆಯಿಂದಂ||

ವ|| ಅಂತಿತ್ತು ಸಂತಸಂ ಮಿಗೆ

ವೃ|| ಮುಗುಳ ತೊಡಂಬೆ ಮಾಧವಿಗೆ ಮಾಮರದೊಳ್ಕಳಿಕಾಳಿ ಚೆಲ್ವಮ |
ಲ್ಲಿಗೆಗೆ ಪೊದಳ್ದಪೂಗುಡಿ ಪಯೋಜಿನಿಗುಳ್ಳರಲಿಂಪುವೆತ್ತಸಂ ||
ಪಗೆಗಲರ್ಜೊಂಪಮುದ್ಗಮದಮಂಜರಿ ಪಾಟಳಿಗಾಗೆ ಬಂದನಿಂ |
ದಗಣಿತಕೋಕಿಳಾಳಿಕುಳಸಂಮುದಕಾರಿ ಮನೋಜ್ಞಮಾಧವಂ || ೩

ಎಳದಳಿರಿಂದ್ರಗೋಪಮಳಿಮಾಲಿಕೆ ನೀಲದಮಾಲೆ ಮಲ್ಲಿಕಾ |
ಸುಳಳಿತಕುಟ್ಮಳಸ್ತಬಕವೊಪ್ಪುವಮುತ್ತಿನಕುಚ್ಚು ಕೀರಮಂ ||
ಡಳಿಯಮುಖಂ ಪ್ರವಾಳಮದಿಮೂರ್ತ್ತಿಯಪೂಗುಡಿ ಚಾಮರಂ ಸಮು |
ಜ್ಜ್ವಳಿಸಿರೆ ಚೈತ್ರವಾರ್ಧಿಯವಹಿತ್ರಮಿದೆಂದೆನಿಸಿತ್ತು ನಂದನಂ || ೪

ಕಂ|| ಆನಂದನವುಂ ವಿಜಿತವು |
ಹಾನಂದನಮಂ ನಿಜಾಂತರಾಳಾಶ್ರಿತಲಕ್ಷ್ಮೀ |
ಕಾನಂದನಮಂ ತೋಷಿತ |
ಮಾನಂದನಮಂ ನಿರೀಕ್ಷಿಸಲ್ಕಡೆನೃಪತೀ || ೫೫

ವ|| ಎಂದು ಬಿನ್ನಪಂಗೆಯ್ದು ತೋಟವಾಳಂಗೆ ಪಸಾಯನಮನಿತ್ತು ಪಟ್ಟವಣೆಯಿಂದೆಳ್ದೋಲಗಮುಂ ಪರೆಯಿಸಿ ವನಕೇಳೀಲೋಲಮಾನಸಂ ಮಾನವೇಶ್ವರಂ ಮಹೋತ್ಸವಂಬೆರಸಂತಃಪುರಕ್ಕೇಳ್ತಂದು ಸರ್ವಮಂಗಳಾಮಹಾದೇವಿಯಿಪ್ಪ ಮಣಿಮಯಮಂದಿರದೊಳಗನೆ ಪೊಕ್ಕು ನಿರೀಕ್ಷಿಪಾಗಳ್

ವೃ|| ತೊಳಗುವಭೂಷಣಪ್ರಭೆ ಮುಖೇಂದುಲಸದ್ದ್ಯುತಿ ಕಾಯಕಾಂತಿ ಕಂ|
ಗೊಳಿಸೆ ಕರಾಗ್ರಕಂಕಣಝುಣತ್ಕೃತಿ ಪೊಣ್ಮೆ ಮೃಗಾಕ್ಷಿಯೊರ್ವಳು ||
ಜ್ಜ್ವಳತರ ಮಾದಪೊಂದೆರೆಯನೋಸರಿಸುತ್ತಿರೆ ಕಂಡನಿಂದುಮುಂ |
ಡಳಮುಖಿಯಂ ಮನೋರಮೆಯನಾನೃಪರೂಪಿನ ಮೀನಕೇತನಂ || ೬

ವ|| ಅಪ್ರಸ್ತಾವದೊಳ್

ಕಂ|| ಉಲಿಯೆ ಕಲಕಾಂಚಿ ಮುಡಿಯಿಂ |
ದಲರುಗೆ ಒಡನಡು ಬಳುಂಕೆ ಪೊಡರೆ ನಿತಂಬಂ ||
ನೆಲೆನೊಲೆಗಳಲುಗೆ ಬಿಡದೇ |
ಳ್ವಲತಾಂಗಿಯಕೈಯನೊಯ್ಯನರಸಂ ಪಿಡಿದಂ || ೭

ವ|| ಅಂತು ಪಿಡಿದೇಳಲೀಯದೆ ಮಣಿಮಂಚದೊಳವಳ್ಗೂಡಿ ಗಾಡಿಯಿಂ ಸುಳ್ಳಿದ್ದರ್

ಕಂ|| ಕುರುಳಂ ಕೂರುಗುರಿಂ ನೇ |
ವರಿಸುತೆ ಮಣಿಹಾರಮಂ ಕರಾಬ್ಜದೆ ತಿರುಪು||
ತ್ತರಸಿಯ ಮೊಗದಾವರೆಯಂ |
ನರಪತಿ ನಡೆನೋಡಿ ನೇಹದಿಂದಿಂತೆಂದಂ || ೮

ವಿನುತಮಧುಲಕ್ಷ್ಮಿ ನಿಜನಂ |
ದನಾವಲೋಕನಮನೆಳಸಿ ಮಾಧವಯುತೆ ಭೋಂ ||
ಕನೆ ಒಂದು ನಿಂದು ಚಂದ್ರಾ |
ನನೆ ನಿನ್ನಂ ಕರೆದಪಳ್ಪಿಕಸ್ವನಮಿಷದಿಂ || ೯

ವ|| ಅದುಕಾರಣದಿಂ

ವೃ|| ಕಳರವಮಂ ಪಿಕಾಂಗನೆಗೆ ಮಂಜುಮೃದೂಕ್ತಿಗಳಂ ಪೊದಳ್ದಪೆ |
ಣ್ಗಿಳಿಗೆ ಸವಿಲಾಸಯಾನಮನನೂನಮರಾಳಿಗೆ ಶಿಕ್ಷೆಗೈಯಲೋ ||
ಪಳೆ ನಡೆ ನಂದನಕ್ಕೆ ವನಲಕ್ಷ್ಮಿಗೆ ಕೌತುಕಮಪ್ಪಿನಂ ನಿರಾ |
ಕುಳಮೆನಗುತ್ಸವಂ ಬಳೆವಿನಂ ಮೃಗಶಾಬವಿಲೋಲಲೋಚನೇ || ೧೦

ವ|| ಎನೆ ನಿಜವಲ್ಲಭೆಯುತಿಪ್ರಸನ್ನಮಧುರತರಕಟಾಕ್ಷಪಾತದಿನುಚಿತವಚನನಿಚಯದಿನೊಡಂಬಟ್ಟುದಂ ಪ್ರಕಟಿಸಲೊಡನವಳ್ಗೊಡಿ ಗಾಡಿಯಿಂದೆಳ್ದನಂತಕಾಂತಾಜನಂಬೆರಸು ಪೊರಮಟ್ಟು ಚೈತ್ರೋದ್ಯಾನಕೇಳೀಪ್ರಸ್ಥಾನಭೇರಿಯಂ ಪೊಯ್ಸಲೊಡಂ

ಕಂ|| ಘನರಾಜಹಂಸಗಮನ
ಕ್ಕನುಕೂಲಮಿದೆಂದು ಗಗನದೊಡನುಸಿರ್ವವೊಲಾ ||
ಘನರಾಜಹಂಸಗಮನಮ |
ನೆನಸುಂ ಪರ್ಬಿದುದು ಪಟಹಪಟುರವಪಟಲಂ || ೧೧

ವ|| ಆಗಳ್ಪಣ್ಣಿಬಂದಸಿಂಧುರೇಂದ್ರಮನಿಂದ್ರಾಣಿವೆರಸು ಕಾಮುರ್ಗಿಲನಾರೋಹಿಪಮಹೇಂದ್ರನಂತೆ ನರೇಂದ್ರಚಂದ್ರಂ ನಿಜಮನೋಹರಿಯೊಡನಾರೋಹಿಸಿ ರಾಜವೀಧಿಯೊಳ್ಬರ್ಪಾಗಳ್

ವೃ|| ಇದು ಮಧುಮಿತ್ರಮತ್ತಗಜರಾಜಿಯೊ ನೋಡಿದು ಪುಷ್ಪಚಾಪನಾ |
ಖ್ಯದ ಸುರವಲ್ಲರೀತತಿಯೊ ಭಾವಿಪೊಡಿಂತಿದು ಕಾಮತತ್ವನಾ ||
ರದ ನವಕೋಶರಾಶಿಯೊ ವಿಚಾರಿಪೊಡಿಂತಿದು ದರ್ಪಕಪ್ರತಾ |
ಪದಪರಿಜೊಂದುಸಂದಣಿಯೊ ಪೇಳೆನೆ ಬಂದುದು ಭಾಮಿನೀಜನಂ || ೧೨

ಕಂ|| ಪಿಡಿಗಳನೇರಿ ಕೆಲಂಬ |
ರ್ಮೃಡದಿಯರರೆಬಸ್ಸುರ್ಖಾಸನಂಗಳೊಳೆ ಕೆಲರ್ ||
ಪಿಡಿಗುದುರೆಗಳೊಳ್ಪೆರವ |
ರ್ಪ್ಪೊಡವಿಯೊಳಡಿಯಿಟ್ಟು ತಳರ್ದರತಿಸಂಭ್ರಮದಿಂ || ೧೩

ವೃ|| ಪರಿಕಿಪುದೀಗಳೀಗಜದ ಕುಂಭದ ಚೆಲ್ವುಮನೆನ್ನದೊಂದುಭಿ |
ಸುರತೆಯನೆಂದು ತದ್ಗುರುಪಯೋಧರಮೆಳ್ಚರಿಪಂತೆ ಬೆಸ್ನೆನೂ ||
ತ್ತೆ ರುಚಿರತನ್ಮುಖೇಂದುವನಭೀಕ್ಷಿಸಲೈದಿದ ಚಂದ್ರಬಿಂಬದಂ |
ತಿರೆ ಧವಳಾತಪತ್ರಮಿಭದಗ್ರದೆ ಬಂದನವಂ ವಧೂಯುತಂ || ೧೪

ವ|| ಅಂತನಂತಸಂಭ್ರಮಪಿಂಬುವಡೆಯ ಕುಂಭಿನೀಕಾಂತನಾವನೋಪ ಕಂರ್ಠಮುಂ ಮುಟ್ಟೆವರೆ ತೊಟ್ಟನೆ ಕಟ್ಟಿದಿರೊಳ್

ವೃ|| ಅಳಿಕುಳಪಕ್ಷತಿಕ್ಷಪಿತ ಪದ್ಮಪರಾಗರಜೋಂಕಮುದ್ಧಕೋ |
ಕಿಳಕಳನಾದಜೃಂಭಿತಮಮಂದಮರಂದಮದಾಂಬು ತತ್ಸರ ||
ಸ್ಥಳಜಳಕೇಳಿಗೆಯ್ದು ಪೊರಮಟ್ಟುಪಿಡೆಂಬುದನಿಂಬುಕೈದು ಕೋ |
ಮಳಮಳಯಾನಿಳಾಂಗಜಗಜಂ ಪರಿದತ್ತಿದಿರೊಳ್ಮಹೀಶನಾ || ೧೫

ವ|| ಅದಂ ಮನದೆಗೊಂಡು ಮದಗಜಸ್ಕಂಧದಿನಿಳಿತಂದು ಫಳಕುಸುಮ ಪರಿರಚಿತಚಾರುತರತೋರಣಾನ್ವಿತಮಾದುದ್ಯಾನಪ್ರತೋಳಿಕಾದ್ವಾರಮಂ ಪೊಕ್ಕು ಸವ್ಯಪಾರ್ಶ್ವಗಸರ್ವಮಂಗಳಾಪಾಂಗಸಂಗತನುಂ ವನವಿಹರಣಸಮುಚಿತಪರಿ ಮಿತಪರಿಜನಾವೃತನುಂ ವನಪಾಲಪುರಃಪ್ರದರ್ಶಿತಾನಂತತರುಲತಾಸಂದೋಹಸಂ ದರ್ಶನಾನಂದಕಂದಳಿತಹೃದಯಾರವಿಂದನುಂ ನಿಜವದನತನುಸಹಜಸೌರಭ್ಯ ಸಮಾಕೃಷ್ಟಮದವದಳಿಪರಿಸರಣಕರಣಚಣಚರಕರಪರಿವೀಜ್ಯಮಾನಧವಳಚಾಮ ರಜನಿತಪವನಪರಿಪತಿತಾನೇಕಸರಜಃಕುಸುಮರಸವಿಸರಕರ್ದಮಿತಧರಣೀಭಾಗನುಂ ನರ್ಮಸಚಿವಪ್ರಸಾರಿತಕರಪಲ್ಲವನ್ಯಸ್ತಹಸ್ತಕಮಳನುಂ ಲೀಲಾವಲೋಕನ ಸಾಂ ದ್ರಚಂದ್ರಿಕಾನಿರಸ್ತನಿಬಿಡತರತರುಪಲ್ಲವಪಕರಯವನಿಕಾಂತರ್ಗತತತತಮಸ್ತೋ ಮನುಮಾಗಿ ನಡೆತಪ್ಪಾಗಳ್

ಕಂ|| ನಗೆಮೊಗಮುಲರ್ದಂಬುಜಮಂ |
ನಗೆ ನಗೆಗಣ್ಣಗೆ ನವೀನದಳಿತೋತ್ಪಳಮಂ ||
ನಗೆ ಬೆಳ್ದಿಂಗಳಸಿರಿಯಂ |
ನಗೆ ನಡೆತಂದಳ್ನರೇಂದ್ರವಧು ನಂದನದೊಳ್ || ೧೬
ವ|| *ಮತ್ತಂ
ವೃ|| ಮಣಿಯನೆ ಕಾಂತಕಲ್ಪಲತೆ ಸಿಂಜಿನಿಯಂ ತೆಗೆದಿಟ್ಟಪುಷ್ಪಮಾ |
ರ್ಗಣನ ಧನುಶ್ಶಲಾಕೆ ಮುಗುಳ್ನೆರಿದ ಮಲ್ಲಿಗೆ ಸುತ್ತುತುಂ ನಭೋ ||
ಮಣಿರುಚಿಯಂ ತೆರಂಬೊಳೆವಪನ್ನಿನಿ ತಾನೆನಿಸುತ್ತೆ ತಾಳ್ದಸ |
ನ್ಮಣಿಪಣಿಲಜ್ಜಮುತ್ತು ಕನಕಾಂಬರದಿಂ ಕಮಳಾಕ್ಷಿ ತೋರಿದಳ್ || ೧೭
ವ|| ಇಂತೊಪ್ಪಿಬಪ್ಪಾರ್ಸಿಬವಲ್ಲಭೆವೆರಸು ಬರೆವರೆ
ವೃ|| ತಳಿರ್ಗಳನಾಂತು ನಿಂದಸುಗೆ ಕುಟ್ಮಳಪಙ್ಕ್ತಿ ಪೊದಳ್ದಚಂಪಕಂ |
ವಿಳಸಿತಮಾದ ಪೂಗುಡಿಗಳಿಂದೆಸೆಗೊಂಡದಿರ್ಗಂತಿ ಕಾಯ್ಗಳಂ ||
ತಳೆದು ನಿಲುಂಬನಿಂದ ಪೊಸತೆಂಗು ಫಳಂಗಳಬಿಣ್ಪನಾಳ್ದು ಸಂ |
ಗಳಿಸಿದಮಾವು ತೀವಿದಬನಂ ಬಗೆಗೊಂಡಿರೆ ಕಂಡನಾನೃಪಂ || ೧೮
ಸುರಯಿಯ ಸೊಕ್ಕುಗಂಪು ಪೊಸಸಂಪಗೆಯೊಳ್ಪಿಸುಗಂಪು ತೋರ್ಪಪಾ |
ದರಿಗಳ ತಣ್ಪುಗಂಪು ಸರಸೀರುಹದೊಳ್ತನಿಗಂಪು ಮಲ್ಲಿಕೋ ||
ತ್ಕರದಬೆಡಂಗುಗಂಪು ಮಧುದೂತಿಯ ತಳ್ತನಿಗಂಪು ಚೂತವ |
ಲ್ಲರಿಯಲರಜ್ಜಗಂಪು ಬಗೆಗೊಂಡುದು ತದ್ವನದೊಳ್ನರೇಂದ್ರನಾ || ೧೯
ಕಂ|| ಎಲರಲೆಯೆ ನೆಗೆದು ಬಾಗೊಲೆ |
ಪಲ್ಲೊರ್ಗಂಜಲ್ಧವಳಚಾಮರಕ್ಕೆಣೆವರೆ ಸ ||
ಲ್ಲಲಿತಮಧುದೂತಿ ತಾನಿದು |
ಗೆಲೆವಂದುದು ಚೈತ್ರಚಾಮರ ಗ್ರಾಹಿಣಿಯಂ || ೨೦
ವ|| ಎಂದರಸಿಯುಕೆಳದಿಯುಪ್ಪಕಳಾರಮೆ ನುಡಿಯೆ ನೋಡುತ್ತುಂ ನಡೆ
ಯೆ ಸೌಂದರ್ಯಶಾರದೆಯೆಂಬಳಿಂತೆಂದಳ್

ಕಂ|| ಮಲ್ಲಿಗೆಯ ಮುಗುಳಕುಳಮಿಡಿ |
ದೆಲ್ಲೆಡೆಯೊಳ್ತೋರೆ ಮಿಳಿರ್ದುವ ಬಳಸಿರೆ ವಿಳಸ ||
ತ್ಪಲ್ಲವತತಿ ಮೆರೆವುದು ರತಿ |
ವಲ್ಲಭಮುಕ್ತಾತಪತ್ರಮೆನೆ ತರುಣಾಮ್ರಂ || ೨೧

ವ|| ಮತ್ತಂ

ಕಂ|| ಕಾಮನ ಸಾಮಜಮಿದು ಮಧು |
ಭೂಮೀಶನ ಕೋಶಮತುಳವಿಚಕಿಲಲತಿಕಾ ||
ಕಾಮಿನಿಯುರಸಂ ಮಾಮರ |
ಸೀಮರಮುಸ್ಕಕ್ಷಿತೀಜಮೇಂ ಮಾಮರನೇ || ೨೨

ವ|| ಅವಳ ಚಾಣ್ಮಾತುಗೇಳ್ದು ಚೆನ್ನಾದುದೆಂದು ಮಚ್ಚುತ್ತುಂಬರ್ಪ್ಪಲ್ಲಿ

ವೃ|| ಪ್ರಿಯದಿಂದಪ್ಪಿರ್ದಮಲ್ಲೀವಧುವ ತನುಸುಖಕ್ಕೊಲ್ದು ಮೆಯ್ಯಿತ್ತು ಚೂತ|
ಪ್ರಿಯನಾಗಳ್ಕೋರಕಂ ಪೊಂಪುಳಿಯೆಸೆಸೆ ಕರಂ ಕಂಪಸಂ ಪೊಣ್ಮೆ ಘರ್ಮೋ||
ದಯಕೋಯುಂಬೋಲ್ಮರಂದಂ ಸುರಿಯೆ ತವೆ ತದೀಯಾಳಿಮಾಲಾಳಕಶ್ರೇ|
ಣಿಯನಾದಂ ತಿರ್ದುವಂತೊಪ್ಪಿದುದಲೆವತರೆತ್ತಿರ್ಕ್ಕಿರಲ್ಪಾಣಿಯಿಂದಂ|| ೨೩

ವ|| ಅದಂ ನಿಂದು ನೋಳ್ಪರಸಂಗೆ ನರ್ಮಸಚಿವನಿಂತೆಂದಂ

ವೃ|| ಅಳಿ ನೀಲಂ ಮಿಡಿ ಪಚ್ಚೆ ಕೀರಮುಖಮುದ್ಯತ್ಪದ್ಮರಾಗಂ ಕೊನ |
ರ್ವ್ವೆಳಸದ್ವಿದ್ರುಮಮಲ್ಲಿ ತಳ್ತೆಸೆವಮಲ್ಲೀಕುಟ್ಮಳಂ ಮುತ್ತು ಜೆಂ ||
ದಳರಂದಂಬಡೆದಿರ್ದಪಟ್ಟೆಯೆನೆ ಚೈತ್ರಂ ಪಂಚರತ್ನಂಗಳಿಂ |
ಕೆಳೆಯಂ ಪಂಚಶರಂಗೆ ನಿರ್ಮಿಸಿದಗೂಡಾರಂಬೊಲೀಮಾಮರಂ || ೨೪

ವ|| ಮೆರೆದಪುದೆಂಬ ನುಡಿಯನವಧರಿಸಿ ನಡೆವಾಗಳ್ಮತ್ತೊಂದುಕುಸುಮ ಮಿಳಿತರಸಾಲರಸಾರುಹದ ಕೆಳಗೆ

ವೃ|| ಅರಲಪರಾಗಮೆಂಬ ಪೊಸಬೇಳ್ವೆಯ ಬೂದಿಯನಿಟ್ಟುಮಲ್ಲಿಕಾ |
ತರುಣಿಯ ಭೃಂಗನೀಲಮಣಿಮಾಲೆಯನೊಯ್ವೆಲರೆಂಬ ಜೋರನಂ ||
ಪರಭೃತನಂದು ಕಂಡು ಮಿಗೆ ಕೂಗೆ ಭಯಂಬಡೆದೇಳ್ದು ಕಣ್ಣನೀ |
ರ್ಸ್ಸುರಿವವೊಲಾಕೆ ತದ್ವಿಕಚಪುಷ್ಪಗಳನ್ಮಧುಬಿಂದು ತೋರುಗುಂ || ೨೫

ವ|| ಅದಲ್ಲದೆಯುಮುದರ ಕೆಲದಲ್ಲಿ

ಕಂ|| ತಳಿರ್ಗೊಂಬಿಂ ಮೇಗಣ್ಗೊಗೆ |
ದಳಿಮಾಲೆ ಮನೋಜ್ಞಮಾದುದಾಮ್ರಂ ಮಲ್ಲೀ ||
ಲಳನೆಯೊಡವೆರೆದೆಲರನುರೆ |
ಮುಳಿದಿರಿಯಲ್ಬಿಡಿದಕೈದುವೆನೆ ಕರತಳದಿಂ || ೨೬

ವ|| ಅದಂ ನಿರೀಕ್ಷಿಸನೃಪಂಗೆ ದೇವಿ ನುಡಿದಪಳೆಂದು ಕಳಾರಮೆಯಿಂತೆಂದಳ್

ಕಂ|| ಎಲರಲುಗಿದೊಡಲರ್ವಡಿ ತ |
ನ್ನಲರ್ಗಣ್ಗೊಳ್ವಸೆ ಮಲ್ಲಿಕಾವಧು ಬಂದುಂ ||
ಒಲಿಯೂದುವಂತೆಸೆಯೆ ಬಾ|
ಷ್ಪಲವಂ ಸುರಿವಂತೆ ಮಧುಕಣಂ ಬಿಡೆ ಮೆರೆದಳ್ || ೨೭

ವ|| ಎಂಬುದುಮದಕ್ಕೆ ಮೆಚ್ಚುತ್ತಪ್ರಿಯಸಂ ಪೆರತೊಂದು ಮಲ್ಲಿಕಾವಲ್ಲಿಯಂ ತೋರಿತಾನುಮಿಂತೆಂದಳ್

ವೃ|| ಅಳಿವಿಂಡಿಂಗಲರ್ವಂಡನಲ್ಲಿ ಗಿಳಿಗಳ್ಗಿಂಬಾದಪಣ್ಣಂ ಪಿಕಾ |
ವಳಿಗಾಕೋರಕಮಂ ಪ್ರಸೂನಪಿಳಸತ್ಸೌರಭ್ಯಮಂ ಮಾರುತಂ ||
ಗೆಳವಾವಿತ್ತುದಿದಕ್ಕೆ ಮಿಕ್ಕಮರನೊಂದುಂ ಸಾಟಿಯಲ್ತೆಂದುಮಂ |
ಜುಳಮಲ್ಲೀವಧು ಬಣ್ಣಿಪಳ್ಭ್ರಗತಭೃಂಗೀನಿಸ್ವನವ್ಯಾಜದಿಂ || ೨೮

ವ|| ಎನೆ ಚೆನ್ನಾದುದೆಂದು ಮುಂದಣ್ಗೆ ನಡೆತಂದೊಂದುರಸಾಲಸರಳಶಾಖಾಗ್ರದೊಳ್ತನಿವಣ್ಣಂ ಮನದನ್ನಳೊಡನೆ ಸವಿವರಗಿಳಿಯಂ ನಿಜಾಪಾಂಗಪಲ್ಲವದಿಂ ನಲ್ಲಳ್ಗೆ ತೋರಿ

ವೃ|| ಎಳದಳಿರಂ ಕರ್ದುಂಕಿ ಕಸರೊಂದಿದತದ್ರಸವಿಾಂಟಿದತ್ತು ಕೋ |
ಕಿಳನಳಿ ಧೂಳಿಯೊಳ್ಬೆರೆದ ಪುಷ್ಪರಸಂಗಳನುಂಡುದಿಲ್ಲಿ ಕೇಳ್ ||
ಗ್ಗಿಳಿಯುವೊಲೇನಿವೆಲ್ಲವಿನಿವಣ್ಣಿನಿದಂ ಸವಿದಪ್ಪುವೇಯೆನು |
ತ್ತೆಳಸಿ ಮನೋಜನಿಟ್ಟನಿದು ಪಂಡಿತವಕ್ಕಿಯೆನುತ್ತೆ ನಾಮಮಂ || ೨೯

ವ|| ಎಂದದರ ಪರಿಸರದೊಳ್ನೊಂಪುವಡೆದಲರ್ದ ಚಂಪಕಮಂ ತೋರಿ

ವೃ|| ಪಾರುವ ಪಾಯ್ವ ಸಂದಣಿಪ ಸುತ್ತುವ ಪತ್ತುವ ಭೋಂಕನೈದುವಿಂ |
ಪೇರಿದಪೂದೊಡಂಬೆಯನೆ ನೋಡುವ ಪಾಡುವ ಜೋಲ್ವಬೀಳ್ವಬಾ ||
ಯಾರುವ ಮತ್ತೆಮತ್ತೆ ಮಧುವೀಂಟುವ ಸೊರ್ಕ್ಕುವಳಿಪ್ರತಾನಮಂ |
ಜಾರಿಸಿದತ್ತು ಸಂಪಗೆ ಮಧುಪ್ರಿಯರುಜ್ಜ್ವಲಸೇವ್ಯರಕ್ಕುಮೇ || ೩೦

ವ|| ಎಂದು ಚತುರಜನಚಕ್ರೇಶ್ವರಂ ಸುಡಿದು ನಡೆವಾಗಳದರ ಮುಗುಳಂ
ಬಗೆದು ಭಾವಿಸಿ ನಿಜಸಖಿಗೆ ದೇವಿಯಿಂತೆಂದಳ್

ಕಂ|| ಅಳಿಸೀಶಿಂಜಿನಿಗಿದು ತಾ |
ನಳವಡದೆಂದುಳಿದು ಕಳೆದು ಚಂಪಕದಲರಂ ||
ಕೆಳದಿ ಮನೋಜಂ ತಳ್ವದೆ |
ತಳೆದಂ ಮಿಕ್ಕಲರ ತಳಿರ ಶರಸಮುದಯಮಂ || ೩೧

ವ|| ಎಂಬ ಸುಡಿಯಂ ಕೇಳ್ದು ಮೆಚ್ಚಿ ತಲ್ಲಿಂ ತಳರ್ದು ಮಧುಲಕ್ಷ್ಮೀಮ
ಧುರತರವಿಳಾಸಮಂ ಬಗೆಗೊಂಡು ಪೊಗಳುತ್ತುಂ ಬರೆವರೆ ವನಮಧ್ಯದ ತೆರಂಬೊ
ಳೆವ ತೆರಪಿನೊಳಳವಟ್ಟ ಕೋಳವೇಗ್ಗೆಳ ಕೇಗ್ಗೆಳೊಳಗೆ ತಮಾಲದೆಳದಳಿರಂ
ಕೊರೆದು ಚಿತ್ರಪತ್ರಮಪ್ಪಂತೆ ಪತ್ತಿಸಿ ನಟ್ಟಪೊಂಬಾಳೆಯ ಬಾಳ್ಗಂಬಂಗಳಿಂ ಸೋ
ಗೆವೆರಸಿದ ಪುಂಡ್ರೇಕ್ಷುದಂಡಂಗಳನಮರ್ಚಿ ಬಾಳವೇಗ್ಗೆಳಿಂ ಪಿಗಿಪೆಡೆಯೆಡೆಯೊ
ಳ್ಸಂಪಗೆಯ ಬಿರಿಮುಗುಳ್ಗಳಂ ತೆತ್ತಿಸಿ ನಿಬಿಡಮೆನಿಸಿ ನಿಮಿರ್ಚಿದ ಪೊಂಗೇದ
ಗೆಯ ನುಣ್ಗರಿಯ ಒಲ್ಬಂತೆಗಳಿಂ ಚಂದನರಸಂಗಳಿಂ ತೊಯ್ದೆಳೆಯ ದವನದ
ಮೇಲ್ವೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರಮೊಳೊಂದಿ ಸಂದುವಿಡ
ದಂತೆ ತರಂಗೊಳಿಸಿ ರಚಿಸಿದ ಕರ್ಣಿಕಾರದ ಪಲಗೆಗಟ್ಟಿನೆಡೆಯೆಡೆಯೊಳರೆಯೊಸ
ಳ್ಗಳಂ ನೆಗಪಿ ಕೀಲಿಸಿದಪೊಂದಾವರೆಯ ಮೊಗ್ಗೆಗಳ ನುಣ್ಬೊಗರಿಗಳಿಂ ಮಲ್ಲಿಗೆ
ಮುಗುಳಸೂಸಕಂಗಳಂ ತೊಡರ್ಚಿ ನಿಮಿರ್ಚಿದ ಚೂತಪಲ್ಲವದ ಚುಂಚುಲೋ
ವೆಯಿಂ ಸರಸಪರಿಮಳಕೆ ಸಾಲ್ಗೊಂಡೆರಗಲ್ವಳಿಪಳಿಪ್ರತಾನಮನೊಳಗಣ್ಗೆ ಪೋ
ಗಲೀಯದೆ ಸೋದುಕಳೆವೆಳಗಾಂಗಿನ ಬಾಗಿಲ್ವಾಡದ ಕಾಪಿನ ಚೌಂಪೇಯನಿ

ರ್ನಿರ್ಮಿತವಾದ ಜಂತ್ರದಪುತ್ತಳಿಗಳಿಂ ಕುಂಕುಮರಸದೊಳಳ್ದಿದಕುಮುದಮುಕು ಳದ ಮೊಳೆಗಳಂ ತೊಡರ್ಚಿ ಮಾಡಿದ ಮೃಣಾಳನಾಳದಮಳ್ಗದಂಗಳಿಂ ರಂಜಿಸಿ ಕಂಪಿನ ಕರಂಡಕಮುಂ ತಣ್ಪಿನ ತವರ್ಮನೆಯುಂ ಸಿಂಗರದ ಲೀಲಾಭವನಮು ಮೆನಿಸಿರ್ದವಸಂತಮಂಟಪದ ಮಧ್ಯದ ಮಕರಂದರಸದ ತುಂತುರಂ ತೂರುವಪ ಜ್ಜಳಿಪಗೊಜ್ಜಗೆಯುರಲ ಜಂತ್ರದ ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯುರಲ ಪರಾಗದ ಪೊಂಜಗಲಿಯ ಮೇಲಣಸುಗೆದಳಿರಲರ್ವಾಸಿನೊಳರಸಿವೆರಸಿ ಕುಳ್ಳಿ ರ್ದ್ದ ನರೇಂದ್ರಂ ಚಂದ್ರಧರಪೂಜೆಗೆ ಮನಂದಂದು ಸುಂದರೀಜನಮಂ ಬನದೊ ಳ್ಪೂಗೊಯ್ಯಲ್ಬೆಸಸಿ ಗಾನವಿದ್ಯಾಧರಿಯೆಂಬ ವೀಣಾಪಾಣಿಯ ನಗೆಮೊಗಮಂ ನಡೆನೋಡಿದಾಗಳ್

ವೃ|| ಗಮಕಂ ತಳ್ತಿರೆ ರಾಯೆ ಮಿಂಚಿರೆ ಚಮತ್ಕಾರಂ ಕರಂ ಪೊಣ್ಮೆ ದೇ |
ಸೆ ಮನಂಬೊಕ್ಕಿರೆ ಮೂರ್ಛನಾಪ್ರಸರಮುಂ ಚೆಲ್ವಾಗೆ ಪಂಚಪ್ರಪಂ ||
ಚಮದಿಂಬಾಗಿರೆ ತೇನಕೇನವೊಡವಲ್ತಾನಂಲಯುಂ ಮುಂಚೆ ಸಂ |
ಭ್ರಮದಿಂ ಬಾಜಿಸಿದಳ್ಸಬಾವಣೆಯನಂದಂಬೆತ್ತವಳ್ವೀಣೆಯಂ || ೩೨

ವ|| ಅದಂ ಕೇಳ್ದು ಮುಚ್ಚರ್ತಿರ್ದನಿತ್ತಲ್ವಿಳಾಸಿನೀಜನಂ ಪರಿತಂದು ಪೂಗೊಯ್ಯಲೆಂದು ಮನಂದಂದು ಸಂದಣಿಸಿ ನಿಂದು

ವೃ|| ನಡು ನಸುಬಳ್ಕೆ ನೇತ್ರರುಚಿ ನಿಳ್ಕೆ ಮುಖೇಂದುಮರೀಚಿ ತುಳ್ಕೆ ಪೊಂ |
ಗೊಡವೊಲೆ ಪೊಣ್ಮೆ ಘರ್ಮಜಳಮುಣ್ಮೆ ಮನೋಭವನಣ್ಮೆ ಬಟ್ಟಬ ||
ಲ್ಮುಡಿ ಕಡುಜಾರೆ ಮಂದಗತಿ ಮೀರೆ ಮದಾಳಿಗಳೊಂದಿ ಪಾರೆ ಮೇ |
ಣ್ಗುಡಿಯೆ ನಿತಂಬಮೈದಿದುದಳುಂಬಮುದಾತ್ತವಧೂಕದಂಬಕಂ || ೩೩

ವ|| ಅಂತೈದಿವಂದು ಕುಸುಮಾಕರವನಮಧ್ಯದೊಳ್ನಿಂದು

ಕಂ|| ಚೆಂದಳಿರ ಕರಂಡಕಮುರ |
ವಿಂದದಳಸ್ಫುಟಿಕೆ ಕದಳಿಯೆಲೆವಡಲಿಗೆ ಚೆ ||
ಲ್ವೊಂದಿರೆ ಕರದೊಳ್ತಳೆದೊಲ |
ವಿಂದಂ ನೆರೆನೆರೆದು ಪರೆದು ಪೂಗೊಯ್ವೆಡೆಯೊಳ್ || ೩೪

ಕರತಳದೆರುಣದ್ಯುತಿ ತ |
ಳ್ತಿರೆ ಬಂದುಗೆಗೆತ್ತು ನೋಡೆ ಕಣ್ಗದಿರಳುರ್ದೊ ||
ಪ್ಪಿರೆ ಶಂಕೆ ತೊಲಗೆ ಮಲ್ಲಿಗೆ |
ಯರಲಂ ಮನವೊಲ್ದು ಕೊಯ್ದಳೆಳವೆಣ್ಗೊರ್ವಳ್ || ೩೫
ವ|| ಮತ್ತಂ
ಕಂ|| ವನವಸಧಿಯಲ್ಲಿ ಜನಿಸಿದ |
ಘನಮೌಕ್ತಿಕದಂತೆ ಮೆರೆವಮಲ್ಲಿಗೆ ಮುಗುಳಂ ||
ವನಜಾಲಯೆಯಂತೊಪ್ಪುವ |
ವನಜಾನನೆಯೊರ್ವಳಾಯ್ದಳತಿಸಂಭ್ರಮದಿಂ || ೩೬
ಅಳಿಗೆ ಪಗೆಯಾದೊಡೇನೆ |
ನ್ನಳಕಾಳಿಗೆ ಕೆಳೆಯಿದೆಂದು ಸಂಪಗೆಯ ಸಮು ||
ಜ್ಜ್ವಳಮುಕುಳಕುಳಮನಾಯ್ದ |
ಳ್ಕಳಶಸ್ತನೆ ಕರಜರುಚಿರರುಚಿ ತುಳ್ಕುವಿನಂ || ೩೭
ಮಿಸುನಿಯೊಳೆಸಗಿದವೂಪೆನೆ |
ಮಿಸುಗುವ ನವಕರ್ಣಿಕಾರಮಂ ಕೊಯ್ವಳವೆ||
ಳ್ಪೆಸೆವಕರಜಾಂಶು ತಳ್ತಿರೆ |
ರಸಲಿಪ್ತಂ ಕನಕಜಪಕಮೆನೆ ಕಣ್ಗೊಳಿಕುಂ || ೩೮
ಮೊದಲೊಳ್ಸಂಪಗೆಯುರಲಂ |
ಸುದತಿ ಕರಂ ಕೊಯ್ದು ಮುಡಿದು ಒಳಿಕುಳಿದಲರಂ ||
ಚದುರೆಸವಿನಮೊರ್ವಳ್ಮೃಗ |
ಮದಗಂಧಿ ಗಜೇಂದ್ರಯಾನೆ ತಿರಿದಳದೊರ್ವಳ್ || ೩೯
ವ|| ಪೆರತೊಂದುಜಂದನಮಹೀಜದಲ್ಲಿ
ಕಂ ಜಡೆ ಮರವಾವೆಂದು ನವಿ |
ಲ್ಪಿಡಿಯಲೊಡಚ್ಚೇರಿರೆ ವರಾಂಗಿ ಬೆದರ್ದೀಕ್ಷಿಸೆ ಕ ||
ಣ್ಗಡೆವೆಳಗುಗಂಡು ಮಿಂಚೆಂ |
ದೊಡನದು ಗರಿಗೆದರ್ದು ನಲಿದುನರ್ತಿಸಿತಾಗಳ್ || ೪೦

ವ|| ಮತ್ತಮೊಂದೆಡೆಯೊಳ್

ಕಂ|| ಮರದೆಲೆವೊದರೊಳ್ಮೃಗರೆ |
ದಿರುತರಲಂ ಕೊಯ್ಯಲೊರ್ವ್ವಳಿಡೆ ಕಯ್ಯನದಂ ||
ತರುಣಿ ಪೆರಳ್ತಳಿರ್ಗೆತ್ತೇಂ |
ಕರಮುಟ್ಟಳೊ ಕೆಲದ ಕೆಳದಿಯರ್ನ್ನಗೆ ಬನದೊಳ್ || ೪೧

ವ|| ಮತ್ತಮೊರ್ವ್ವಳ್

ಕಂ|| ತಳಿರ್ಗೊಯ್ಯಲೆಂದು ಕನಕೋ |
ಜ್ಜ್ವಳ ರುಚಿತನುವಡರ್ದು ನವತಮಾಲದ ತರುವಂ ||
ಸೆಳೆಮಿಂಚು ಜಳದಮಂಡಲ |
ದೊಳೆ ಧಳಧಳಿಪಂತೆ ಕಣ್ಗೆ ದೇಂ ತೊಳಗಿದಳೋ || ೪೨

ವ|| ಅಶೋಕಭಾವತಿಯಲ್ಲದೆಯುಂ

ಕಂ|| ತರುಣತಮಾಲದ ತರುವಂ |
ತರುಣಿ ಕರಂ ಪತ್ತಿಪೊಕ್ಕವಳ್ನೆಯಿಸಿದಳ್ ||
ಸ್ಮರನಸಿಲತೆಯುಂ ಕಾರೊರೆ |
ಗಿರಪೊಳಪುಗಿಪ್ಪೊಂದುಭಾವಮಂ ಬನದೆಡೆಯೊಳ್ || ೪೩

ಜಂಬಳರೋಳೊಂದೆ ಮ್ಯ ಮೊಗ |
ಮೊಂಪೊಗೆದುದು ಕುಂಕುಮಾಂಕಿತಂ ಸಂಜೆಯ ಕೆಂ ||
ಪೊಂದಿದ ಮೂಡುವ ಪಬ್ಬು |
ಣೇಂದುಗೆ ಪಡಿಯೆಸಿಸುತಸುಗೆ ಯಡರ್ದಂಗನೆಯಾ || ೪೪

ವ|| ಪೆರತೊಂದೆಡೆಯೊಳೊರ್ವ್ವ ಪೃಥುನಿತಂಬೆ

ಕಂ|| ಒಡಿವನಿತಂಬಂ ಮುಡಿನೊಲೆ
ಯುಡರಲ್ಬಿಡದಿರೆ ವರಾಂಗಿಯುಸುಗೆಯುಮರದೊಳ್ ||
ಪಡೆದಳ್ಬುಡದೊಳ್ಪಡೆದೊದೆ |
ದೊಡನಿಡಿದೆಳದಳಿರ ನದರೊಳವಳತಿಭರದಿಂ || ೪೫

ವ|| ಆತಳಿರಂ ತನ್ನಸೋವಮ್ಮ್ರ್ಡಿಯೊಳ್ಮಡಿದು ನಳಿನಾಕರಕ್ಕೆ ಬಂದು

ಕಂ|| ಕೊಳದೊಳಲರ್ದಬ್ಜದಲರಂ |
ನಳಿನೇಕ್ಷಣೆ ಮುರಿವೆನೆಂದು ಪುಗೆ ತೆರೆವೊಯ್ಲಿಂ ||
ಮುಳುಗುತ್ತೇಳುತೆ ಭಯದಿಂ |
ತಳವಮಳಗೊಳ್ವಂತೆ ಕಣ್ಗದೇಂ ರಂಜಿಸಿತೋ || ೪೬

ವ|| ಪೆರಕೊಂದು ತಾಣದೊಳ್ಮುರಸಂ ಪರ್ಬಿದಮಲ್ಲಿಗೆಯಲ್ಲಿಗೈತಂದು

ವೃ|| ಜಿಡುಮುಡಿ ಸೂಸೆ ಮುಂತಳೆದ ಪೂಗಳನೀಗಳೆ ನವ್ಯಪುಷ್ಪಮಂ |
ಮುಡಿಸೆನಗೆಂಬವೋಲ್ಕಲಿತಕಂಕಣ ಸಿಕ್ವಣ ಮುಣ್ಮೆ ತತ್ಕರಂ ||
ಜಡಿವವೊಲಲ್ಲಿ ಪಲ್ಲವಮನಾಲತೆಯೊಳ್ಪರುಡಿಂದೆ ಕೋರಕಂ |
ಬಡಿವವೊಲೇಳೆ ಮ್ಬೆಬಿಮುರದೊರ್ವಳರಲ್ದಿರದಳ್ವಿಳಾಸದಿಂ || ೪೭

ವ|| ಪೆರತೊಂದೆಡೆಯೊಳ್

ವೃ|| ಮಲ್ಲಿಗೆ ಮೇಲೆಪರ್ಬೆ ಮುಗುಳೊತ್ತಿರೆ ಕೊಯ್ಯಲೊಡರ್ಚಿನಿಂದಸಂ |
ಫುಲ್ಲಸರೋರುಹಾಕ್ಷಿಯ ಘನಸ್ತನಮಂಟಿರೆ ಕೊಂಬುವೋಳಸ ||
ತ್ಪಲ್ಲವಪಾಣಿಯಂ ತರುಣಚೂತಮುವಾಂಗನೆ ಕಂಪಿಸಂತದೇಂ |
ಸಿಲ್ಲದೆ ಪಾಯೆ ಕಂಪಿಸುತೆ ಕಣ್ಗೆಸೆದಿರ್ದುದೊ ನೋಟಕರ್ಕಳಾ || ೪೮

ಕಂ|| ಅಳಿವೆರಸಿದಲರ ಗೊಂಚಲ |
ನೆಳವೆಣ್ಣಡಿದಿರೆ ಕರಾಗ್ರದೊಳ್ಕೆದರುದು ಮಂ ||
ಜುಳಶಶಿಮಂಡಳಮಂ ನವ |
ನಳಿನಂ ಸೆರೆವಿಡಿಯೆ ತೋರ್ಪವೊಲ್ಬನದೆಡೆಯೊಳ್ || ೪೯

ಪೂಗುಡಿಯಸುಡಿವೆಡೆಯೊಳೆ ಪ |
ರಾಗಂ ಪರಕಲಿಸೆ ನೊಯ್ಯೊಳಾಮರಗೊಂಬಂ ||
ಬಾಗೊತ್ತಿ ತಳಿರನುಡಿವ |
ಳ್ಬೊಗಣೆಯನ ಕರಿಣಿಯಂತಿರೇನೊಪ್ಪಿದಳೋ || ೫೦

ವೃ|| ನಲ್ಲಳೊರ್ವ್ವಳೆಳವಾವಿನಲ್ಲಿ ಸ |
ತ್ಪಲ್ಲವಪ್ರಕರಮಂ ಕರಾಗ್ರದಿಂ ||
ಮೆಲ್ಲನೊತ್ತಿ ಮುರಿದಾನೆ ಕಂದಿತಾ |
ಪಲ್ಲವಕ್ಕೆ ಮೊದಲಾ ಕರಾಂಬುಜಂ || ೫೧

ಕಂ|| ಮುಗಮುಗಿಪ ಬೆಮರನಾಂತೀಂ |
ಸೊಗಯಿಸಿದಳೊ ಕಣ್ಗೆ ಕಮಳೆ ಕಮಳಮರಂದಂ ||
ಮಿಗೆ ಪತ್ತಿರೆ ತೋರ್ಪ್ಪವೊಲಾ |
ಮೃಗಾಕ್ಷಿ ಮೈಗೆರೆಗೆ ಪರಮೆಗಳ್ಪಸದೆಡೆಯೊಳ್ || ೫೨

ವೃ|| ಕರದಿಂದೊಕ್ಕೊಂಬನಿಂಬಾಗಿರೆ ಪಿಡಿದೆಳೆಯುಳ್ಳಿಕ್ಕಿ ಮತ್ತೊಂದು ಕೈದಾ|
ವರೆಯಂ ಮೇಲೆತ್ತಿ ಪೂಗೊಯ್ವೆಡೆಯೊಳವಳ ವಕ್ತ್ರಾಬ್ಜಮಂ ಮುತ್ತೆ ಭೃಂಗೋ||
ತ್ಕರಮಾಗಳ್ಬೆಚ್ಚಿ ಕೊಂಬಂ ಬಿಡೆ ತರು ಕರುಣಂಬೆತ್ತ ಪೋಲ್ಪಲ್ಲವಶ್ರೀ |
ಕರದಿಂದಂ ಸೋಂದದಂ ಪಾಯ್ದೊಲೆವ ಸೆವದೆ ಪುಷ್ಪೌಘಮಂ ಸೂಸಿತಾಗಳ್ ||

ವ|| ಮತ್ತಮೊಂದಾಮ್ರಮಹೀಜದಲ್ಲಿ

ಕಂ|| ತಳಗೊಯ್ಯೋಳೆಯಾಳ ಚೆಂದುಟಿ |
ದಳಿರಂ ತಳಿರ್ಗೆತ್ತು ಕರ್ಚಿಕಿದುದು ಪಿಕನೀವಂ ||
ಜುಳಪಲ್ಲವಮೆಲ್ಲಮುಸೀ |
ಗಳೆ ಪರಿದಪಳೆಂದು ಮುಳಿಸಿಸಿಂ ಕರ್ದುಕುವವೋಲ್ || ೫೪

ವ|| ಮತ್ತಮೊರ್ವ್ವಳ್ಮತ್ತಕಾಶಿನಿ ಪೆರತೊಂದು ಸರಳಜೂತಶಾಖಾಂತರಾಳದೊಳ್

ಕಂ|| ಪೂಗೊಯ್ಯಲೆತ್ತೆ ತೋಳಂ |
ಮೋಗಣ್ಗೆನಿಸೂಗೆದ ದಕ್ಷಿಣಸ್ತನಮುಕುಳಂ ||
ಪೂಗಣೆಯನೀಕ್ಷಿಪರಸಿಸ |
ಲಾಗಳ್ತೆಗೆದಬ್ಜಬಾಣಮೆನೆ ಕಂಗೊಳಿಕುಂ || ೫೫

ವ|| ವಿಳಾಸವತಿ ಮತ್ತೊರ್ವ್ವಳ್

ವೃ|| ಸೆಳೆನಡು ಬಳ್ಕೆ ತೋರಮೊಲೆ ಮೇಲ್ವುದನೊಯ್ಯನೆ ನೂಂಕೆ ಕಣ್ಣನು |
ಣ್ಬೆಳಗಡರ್ದೊಪ್ಪೆ ಪೀನಜಘನಂ ಜಡಿಯುತ್ತಿರೆ ಬಾಹುಮೂಲಮುಂ ||
ಪೊಳೆಯೆ ಬಳಲ್ದು ಜಾರೆ ಮುಡಿ ಮುಗ್ಧೆ ಪದಾಗ್ರದೆ ನಿಂದು ನಿಳ್ಕಿ ಕೆಂ |
ದಳಮನಮರ್ಚ್ಚಿ ಕೊಯ್ದಳೆಳಮಾವಿನಕೆಂದಳಿರಂ ವಿಳಾಸದಿಂ || ೫೬

ಕಂ|| ಎಳೆಯಳೆಳದಳಿರಿನುಜ್ವ್ವಳ |
ಕಳಶಮನರ್ಚ್ಚಿಪವೊಲಳಿಪಿದಳ್ಕುಚದೊಳ್ಮಂ ||
ಜುಳಹೃದಯಸ್ಥಿತಮದನಂ |
ಗೆಳಸಿತ್ತಪಳೆನೆ ರಸಾಲಪಲ್ಲವಶರಮಂ || ೫೭

ವ|| ಅವಿಳಾಸಸ್ಥಿತೆಯರುಮಲ್ಲದೆ ಪತ್ತೆ ಕೆಲಂಬರ್ಪದಗ್ಧೆಯನ್ನರೆದು ಲಲಿತರಗಳೆ || ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ | ಯೆಳತಿಸುಗೆಮರದಲ್ಲಿ ಜಳರುಹಾಕರದಲ್ಲಿ | ಸಂಪಗೆಯತರುಗಳೊಳ್ಪೊಂಪಡಿದಸುರಯಿಯೊಳ್ | ಪಾದರಿಯಬನದಲ್ಲಿಮಾಧವಿಯ ಲತೆಯಲ್ಲ | ತಿಳಕವಕುಳಾವಿತರುಸಿವಪದಾರನೆಗಳೊಳ್ | ದಳಫಳಕುಸುಮವಿಸರವಿಗಿತಪಟಪಂಗಳೊಳ್ | ಪೂಗೊಯ್ಯಲೆಂದಎಲೆಯನ್ನರೆದುಬಗೆದಂದು | ಬೇಗದಿಂ ಪರಿತಂದು ಪರಿತೋಷದಿಂ ನಿಂದು | ಕಡೆಗಣ್ಣಕುಡಿವೆಳಗು ಪಿಡದಡರೆ ನಡೆನೋಡಿ | ನಿಡುಗೊಂಬನೆಡಗಯ್ಯೊಳಡಸಿಪಿಡಿದೊಲ್ಗಾಡಿ | ವೆರಸಿನೆಲೆವೊಲೆಯೊಗೆಯೆ ಬಲಗೈಯನಿವಿರ್ದೆತ್ತಿ | ಕರಕರಜರುಚಿರರುಚಿ ತಳಿರಲರ್ಗಳಂಮುತ್ತಿ | ಮುಸುಕುತಿರೆ ಮುಡಿ ಸಡಿಲೆ ಪೊಸಮುಗುಳ್ಗಳಂ ತಿರಿದು | ಮಿಸುಪಕಿಸಲಯಚಯಮನೊಸಗೆ ಮಿಗೆ ನೆರೆ ಪರಿದು | ನನೆಗೊನೆಯನಲರ್ದಲರಕೊನರ್ಗಳಂ ಕೊಯ್ಕೊಯ್ದು | ವನಜದಳದೊಳ್ಕದಳಿಯೆಲೆಯೆಲೆಗಳೊಳ್ಪೊಯ್ದು | ಕುಳಿರ್ವಹಿಮಜಳದೆ ಜಳೆಯಂಗೊಟ್ಟು ಬೇರಾಯ್ದು | ನಳಿನದೆಎಳೆಗಳಿಂ ಗಳಿಲನೆ ಸರಂಗೆಯ್ದು | ಸುಯ್ಗಂಪು ಮೆಯ್ಗಂಪು ಬಾಯ್ಗಂಪು ಬೆರಸುರೆ | ಕಯ್ಗಂಪು ಕೆಂದಾವರೆಯ ಸಿರಿಯನೊರಸುತಿರೆ | ಮಲ್ಲಿಗೆಯ ಹಾರಮಂ ಪಲ್ಲವದ ಪದಕಮಂ | ಸಲ್ಲಲಿತಮಂಜರಿಯ ಕರ್ಣಾವತಂಸಮಂ | ಸುರಯಿಯರರಿದಲರ ಮುಡಿಯ ಮುತ್ತಿನ ಬಲೆಯ | ನುರುತರದ ಸರಸಿಜದಕರ್ಣಿಕೆಯ ಮು

ದ್ರಿಕೆಯ | ನೆಸೆವಪೊಸಬಂದುಗೆಯ ಮಿಸುಪಮುಗುಳಂದುಗೆಯ | ನಸುಗೆಯರ ಲುಂಗುರಮನುತ್ಪಳದ ಮಂಟಿಗೆಯ | ನುಜ್ಜ್ವಳಿಪಗೊಜ್ಜಗೆಯ ಸಜ್ಜುಕದ ಚಳಿಕಿಗೆಯ | ನಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ | ನಾಂಪರೊಳಲಂಪೆಸೆವಸಂಪಗೆಯ ಮೇಖಲೆಯ | ನಿಂಪಡರ್ದ ಸುರಹೊನ್ನೆಮುಗುಳ ಮೃದುಕಂಠಿಕೆಯ | ನೆಸಗಿ ಮಿಕ್ಕಲರ್ಗಳಿಂ ಬಾಸಿಗಗಳಂ ರಚಿಸಿ | ಪೊಸಜಾವನೆಯರಲ್ಲಿ ಪೋಗಲುರೆಸಡಗರಿಸಿ | ಶಿವಪೂಜೆಗಳವಟ್ಟಕುಸುಮಮಂ ಬೇರಾಯ್ದು | ತವೆ ಬಹುವಿಚಿತ್ರತರಮಾಲಿಕೆಗಳಂ ಸವೆದು | ಮುಡಿಯಳಿಯೆ ನಡುಸೆಳೆಯೆ ಸುಯ್ಮಿಮಿರೆ ಮೆಯ್ಬೆಮರೆ | ತೊಡೆ ಸೆಡೆಯೆ ಅಡಿ ಪಡೆಯೆ ಪುಗುಳ್ಗಳಂ ಮುಗುಳ್ಗಳಂ | ಸೂಸುತುಂ ಬೀಸುತುಂ ನಳಿತೋಳನಳಿಜಾಳ| ಮೆಳಸಿ ಬರೆ ಬಳಸಿ ನೆರೆದಾವರಿಸಿಗಾವರಿಸಿ | ಕರದಿಂದಮುರವಿಂದದರಲಿಂದೆ ಭರದಿಂದೆ | ಪೊಡೆಯುತುಂ ನಡೆಯುತುಂ ಬಳ್ಕುತುಂ ತುಳ್ಕುತುಂ | ಕಣ್ಬೆಳಗತಣ್ಬೆಳಗನ್ನೆತಂದು ಸೈತಂದು| ಭೂಪತಿಗೆ ಕೈಮುಗಿದು ಪೂಪುಟ್ಟಿಯುಂ ತೆಗೆದು | ಹರುಸದಿಂ ನೋಡುತಿರೆ ಕರತಳಕೆ ನೀಡುತಿರೆ

ವ|| ಆಗಳಾರಾಜಶೇಖರನರೇಂದ್ರಂ ಪ್ರಭಾತಪದ್ಮದಂತಿರಾಪೋದಾಂತರಂಗನಾಗಿ ಕಲ್ಪತರುಸ್ಕಂದಂತೆ ಸುರಭಿಪಯದೊಳ್ಮುಳುಂಗಿ ಶಾರದಶಶಾಂಕನಂತೆ ವಿಮಳಾಂಬರದಿನಳಂಕರಿಸಿ ಯಾಮಿನೀವ್ಯೋಮದಂತೆ ಭಸಿತರುಚಿದಾಳ್ದು ಧನಂಜಯನಂತೆ ರುದ್ರಾಕ್ಷದಿಂ ರಂಜಿಸಿ ಪರಮೇಷ್ಠಿಯಂತೆ ಪದ್ಮಾಸನಮನವಷ್ಟಂಭಿಸಿ ಬೃಹಸ್ಪತಿಯಂತಸುಮನೋಜಯಮೂಲಮಂತ್ರಮಂ ಬಗೆಯೊಳನುಗೊಳಿಸಿ ನಗರಾಜನಂತಜಲಾಂಗನಾಗಿ ಧನಿಯಂತೆ ಲಕ್ಷ್ಮೈಕಾಗ್ರಚಿತ್ತನೆನಿಸಿ ಕಲ್ಯಾಣಗೃಹದಂತೆ ಶಿವಪ್ರಭಾವಮುಂ ಪಡೆದಿನಿಸಾನುಂ ಬೇಗಮಿರ್ದ್ದು

ವೃ|| ಶಿವಲಿಂಗಾಘ್ರಿಯನೊಲ್ದು ಪೂಜಿಸಿದನುದ್ಯತ್ಸೌರಭಾಂಭಸ್ಸರೋ |
ಭವಮುಖ್ಯಪ್ರಸವಾತಿಶೋಭಿತಸುಗಂಧಾಚ್ಛಾಕ್ಷತಸ್ನಿಗ್ಧಧೂ ||
ಪವಿರಾಜದ್ರುಚಿದೀಪಸತ್ಫಳಮಹಾ ನೈವೇದ್ಯಮುದ್ವೀಟಿಕಾ |
ಳಿವಿಳಾಸಾಸ್ಪದಗೀತವಾದ್ಯರವದಿಂ ಭೂಭಾಮಿನೀ ಭೂಷಣಂ || ೫೮

ವ|| ಅಂತು ಪೂಜಿಸಿ ಪರಮಭಕ್ತಿಯಿಂ ಪ್ರದಕ್ಷಿಣನಮಸ್ಕಾರಂಗಳಂರಚಿಸಿ

ವೃ|| ಧನಪತಿಮಿತ್ರ ಗಾತ್ರರುಚಿನಿರ್ಜಿತಮಿತ್ರ ಕರಾಲಕಾಲಮ |
ರ್ದನ ಗರಕಾಲಕಂಧರ ಧರಾಧರಧನ್ವ ಶಶಾಂಕಖಂಡಮಂ ||
ಡನ ಸದಖಂಡಚಿನ್ಮಯ ನತವ್ರಜಪಾಲ ಕಪಾಲಶೂಲರಂ |
ಜನಕರ ದೇವದೇವ ಜಗತೀಧರಮಂದಿರ ಮಂಗಳಾಕರಾ || ೫೯

ವ|| ಎಂದು ಪೊಗಳ್ದು ಪೊಡಮಟ್ಟು ಮುದಂದಳೆದು

ವೃ|| ಅನರನಾಥನಾಕುಸುಮಭೂಷಣಮಂ ಪದೆದಿತ್ತು ಪಾರ್ವತೀ |
ಜಾಸಿಗೆ ತಾನುಮಾತ್ಮರಮೆಯುಂ ಬಳಿಯಂ ತಳೆದಿರ್ಪ್ಪನಂ ಪರಿ ||
ವಮ್ಲಾನಸಖೀಮುಖಾಬ್ಜಮನಭೀಕ್ಷಿಪ ಸಲ್ಲಳಪಾಂಗದಿಂಗಿತಂ |
ಮಾನಸದೊಳ್ತೊಡರ್ಚಿದುದು ತಣ್ಗೊಳದೊಳ್ಜಳಕೇಳಿಯಾಂಪುದಂ || ೬೦

ವ|| ಆಗಳಾಯುವರಾಜಂ ನಿಜರಮಣಿಯಾನನಾಬ್ಜಮಂ ನಿರೀಕ್ಷಿಸಿ

ವೃ|| ಸರಸಿಜವಕ್ತ್ರೆ ಚಕ್ರಮಿಥುನಸ್ತನೆ ಬಾಳಮೃಣಾಳಬಾಹುವ |
ಲ್ಲರಿ ಕುಮುದಾಕ್ಷಿ ಭೃಂಗಕಚೆ ಶೈವಲಮಂಜುಳರೋಮರಾಜಿ ಬಂ ||
ಧುರಪುಳಿನೋಲ್ಲಸಜ್ಜಘನೆ ನಿನ್ನಿರವಂ ತಳೆದೊಪ್ಪುತಿರ್ಪ್ಪ ತ |
ತ್ಸರಸಿಗೆ ಮಾಡಲಿಂದು ನವಸಂಗತಿಯಂ ನಡೆ ಮನ್ಮನೋರಮೇ || ೬೧

ವ|| ಎಂಬುದುಮತೀವಹರ್ಷೋದಯಮನೊಳಕೊಂಡು ತೊಳಪಕಟಾ
ಕ್ಷರುಚಿ ಮಂದಸ್ಮಿತದ್ಯುತಿಗೂಡಿ ತದ್ವಾಣಿಗೆ ಪಸಾಯಮನಿತ್ತಂತೆ ಮೇಲ್ವಾ
ಯ್ದು ಪಸರಿಸೆಯುಂ ತನ್ನ ಮೆಲ್ನಡೆಗೆ ಮಚ್ಚರಿಪಂಚೆಯೊಳ್ಪಳಂಚುವೆನೆಂದು
ಷೆಗುಡುವಂತೆ ಪಾಯುವಟ್ಟಂ ದನಿಗುಡುತ್ತುಮಿರೆಯುಂ ಪೂದುರುಂಬಿಂಗೆ
ಗಿ ಪಾಡುವಪರಮೆವರಿಗಳಿಂಚರಕ್ಕೆಮಚ್ಚಿ ತಲೆವೊಲೆದಪುದೆಂಬಂತೆ ಕರ್ಣಪೂರಂ
ಂಪಿಸೆಯುಂ ಜಳಕೇಳಿಯ ಪೊಕ್ಕುಳಿಯೊಳ್ಗುರುಪಯೋಧರಭಾರಮನಾಂಪು
ನಗಸದಳಮೆಂದು ಬಳುಂಕುವಂತೆ ಬಡನಡುಬಳುಂಕೆಯುಂ ಸರಸಿಯಂ ಪೊಕ್ಕ
ವೆಂಬಸಂಮದದಿಂ ಕುಣಿವಂತೆ ಕುಚಚಕ್ರಯುಗಂ ಕದಕ್ಕದಿಸೆಯುಮುಮರ
ಳವ.ಜದೊಡನನೇಕಕರಿಣಿಗಳ್ವೆರಸು ನೀರಾಟಕ್ಕೆ ತಳರ್ವಭ್ರಮುವೆಂಬಂತೆ ಮ

ನಃಪ್ರಿಯನೊಡನನೇಕಸಖಿಯುರ್ವ್ವೆರಸು ಸಂಭ್ರಮಂ ಮಿಗೆ ಸಲಿಲಕೇಳಿಗೆಳಸಿ ಸರ್ವಮಂಗಳಾದೇವಿ ತನ್ನಂದನದೊಳ್ನಡೆತಂದು ಕಾಸಾರದ ತೀರದ ನುಣ್ಬಸಲೆಯ ನಲಂಕರಿಸಿ ನಿಂದು ನೀಡುಂ ನಿರೀಕ್ಷಿಸಾಗಳ್

ವೃ|| ಮರುದುದ್ಧೂತಪಯಃಪ್ರಕೀರ್ಣಕಣಜಾಲಂ ಮೇಲೆ ಸಾಲಿಟ್ಟ ಷ |
ಟ್ಚರಣ ಶ್ರೇಣಿಯುವೊಂದೆ ರತ್ನರಚಿತೋದ್ಯತ್ತೋರಣಶ್ರೀಯನೂ ||
ರ್ಮಿರವಂ ವಾದ್ಯಮದಾಗಲಾರತಿಯ ಚೆಲ್ವಂ ಪೋಲೆ ಪದ್ಮಂ ಮಹೀ |
ಶ್ವರನಂ ತಾನಿದಿರ್ಗೊಂಬುದೆಂಬಬಗೆಯಂ ತಾಳ್ದತ್ತು ಪದ್ಮಾಕರಂ || ೬೨

ವ|| ಮತ್ತಮಾತಿಳಿಗೊಳಂ

ಕಂ|| ಲಲಿತಜಲಲವಲಲಿತನವ |
ಜಲರುಹದಳವಿಸರಲಸಿತಮಿಮುಳಮರಾಳಾ ||
ವಲಿಕಲಿತ ನಳಿನಮಧುಮದ |
ಜಲದಳಿಕುಲಮಿಲಿತ ಮಂದಮಾರುತಮಹಿತಂ || ೬೩

ವ|| ಮತ್ತಂ

ವೃ|| ಬಾಲಮಧುವ್ರತಪ್ರತತಿ ಪಾಡೆ ರತೋದ್ಧತ ಚಕ್ರಚಕ್ರಪ |
ಕ್ಷಾಳಿಯೆ ತಾಳಮಾಗಿರೆ ಸರೋಜಿನಿ ನರ್ತಿಸೆ ನೀರಪಕ್ಷಿಗ ||
ಳ್ಗೀಲೆಯೊಳೊಂದುತುಗ್ಘಡಿಸೆ ಸೀಗುರಿಯಾಗಿರೆ ವೀಚಿಮಾಲೆ ತಾ |
ನೋಲಗಶಾಲೆಯಾದುದು ಕೊಳಂ ಕಮಳಾಸನರಾಜಹಂಸನಾ || ೬೪

ದರದಳದರವಿಂದಬೃಂದಗಂಧಾ |
ದರಸರದುನ್ಮದಭೃಂಗನಾದಗೀತಂ ||
ತರಳತರತರಂಗರಂಗದಂಗಂ |
ಸರಸಿ ಸುಲಾಸಿನಿಯಂತೆ ಕಣ್ಗೆ ತೋರ್ಕ್ಕುಂ || ೬೫

ತಡಿಯೊಳ್ನಿಂದತಟಿತ್ಕಟಾಕ್ಷಿಯ ಕಟಾಕ್ಷಜ್ಯೋತ್ಸ್ನೆಯಿಂ ತೀವಿ ಪಾ ||
ಲ್ಗಡಲಂ ಪೋಲ್ತಿರೆ ತತ್ಸರಂ ನೊರೆಯ ಸಾಲ್ಶೇಷಾಹಿಯಂ ಪೋಲೆ ಮೇ ||
ಲೆಡೆಗೊಂಡೊಪ್ಪುವನೀಲನೀರಜವನಂ ಸ್ವರ್ಣಾಂಬುಜೋದ್ಯದ್ರಜಂ |
ಕುಡೆ ಪೀತಾಂಬರಲಕ್ಷ್ಮಿಯಂ ಮಲಗಿದಂಭೋಜಾಕ್ಷನಂತೊಪ್ಪುಗುಂ|| ೬೬

ವ|| ಮತ್ತಮಲ್ಲಿ

೦|| ಬಿರಯಿಗಳನೆಚ್ಚು ರಕ್ತಂ |
ಬೊರೆದರಲಂಬಂ ಸರೋಂಬುವೊಳ್ತೊಳೆಯಲ್ಕೆಂ ||
ದರಲಂಬಸಿಳಿಪಿದಂತಿರೆ |
ತರುಣಿಯುರ ಸರಕ್ತಕೇಕರಂ ಮಾರ್ಪೊಳೆಗುಂ || ೬೭

ವ|| ಅಂತದಂ ನೋಡಿ ಕಾಂತಾಜನಂ ಸಂತಸಂ ಮಿಗೆ ಪುಗಲೆಳಸಿ ಮೆಲ್ಲ ಳಿತರುತ್ತಮಿರ್ಪಲ್ಲಿ

೦|| ಎಳವಳಿಕಿನ ಸೋಪಾನದೊ |
ಳಿಳಿವಳ ಪದಯಾವಕದ್ರವಂ ಪತ್ತಿರೆ ಕಂ ||
ಡೆಳೆಯುಳದೊರ್ವಳ್ತಳಿರೆಂ |
ದೆಳಸಿ ಕರಂ ತುಡುಕಿ ನಗಿಸಿದಳ್ಕೆಳದಿಯರಂ || ೬೮

ಗುರುಕುಚಭರದಿಂ ಬಳ್ಕುವ |
ಧರಾಧಿಪತಿಪತ್ನಿಗೀವವೋಲ್ಕೈಲಾಗಂ ||
ಸರಸಿ ತೆರೆದೋಳ ತುದಿಯೊ |
ಳ್ಕರವೊಗೆವರವಿಂದದಿಂದದೇಂ ರಂಜಿಸಿತೋ || ೬೯

||ಕರದೊಳ್ಪೊನ್ನಂಡೆಯುಂಚೀಕರ್ಕ್ರೊಳವಿಯೆಸೆಯೆಕಾಂಚೀರವಂಚಾರುವಂಜೀ|
ರರವಂ ಕೈಗಣ್ಮೆಕಾಸಾರದ ಪರಿಸರದೊಳ್ನಿಂದು ನಿಂದೀಕ್ಷಿಸುತಾತ್ತ ||
ದರಿಸುತ್ತಂದಂ ಮಿಗಲ್ಮೆಲ್ನಗೆ ಮಿಸುಗೆ ಮೊಗಂನೋಡಿ ನೀರಾಟಕೆಂದೊ |
ರ್ವ್ವರನೊರ್ವರ್ಚ್ಚಲ್ಲದಿಂದಂಕರೆದುಸರೆದು ಕಾಂತಾಳಿನೀರ್ವ್ವೊಕ್ಕುದಾಗಳ್||

೦|| ತರುಣೀನಿತಂಬಕುಚಗಿರಿ |
ವರಂಗಳಿಟ್ಟಣಿಸೆ ತತ್ಸರಶ್ಶರಧಿ ಕರಂ ||
ಪರಿವರ್ಧಿಸಿದಂತುರ್ವಿದು |
ದರರೆ ತದಾನನಸುಧಾಂಶುಬಿಂಬದ್ಯುತಿಯಿಂ || ೭೧

ವೃ|| ಕರದಿಂ ನೂಂಕಿ ತುಳುಂಕಿ ಕೂಂಕಿ ಜಳಮಂ ತೇಂಕಾಡಿ ಮೇಲೊರ್ವ್ವರೊ|
ರ್ವ್ವರೊಳಿಟ್ಟಾಡಿ ಮುಳುಂಗಿ ಮೂಡಿ ಪೊಳೆದಾ ಪೊನ್ನಂಡೆಯಿಂ ಪೊಯ್ವುದಾ||
ಯ್ದಿರದೀಸಾಡಿ ಸಡಂಗಿ ಚೀಕೆರ್ದ್ಕೊಳವಿಯಿಂ ಮೇಲೊತ್ತಿ ಬೆಂಬತ್ತಿ ಮುಂ |
ಬರಿದಬ್ಜಾಕರದಂಬು ಕೇಳಿವಡೆದರ್ಪ್ಪಂಕೇಜಪತ್ರಾಕ್ಷಿಯರ್|| ೭೨

ಕಂ|| ಅರಸನೆಸಪಸಿತರೊಳೆ ಕ |
ಪ್ಪುರದಂಬುವನೊತ್ತಲೆಂದು ಕಮುಳಾಕ್ಷಿ ಕಟಾ ||
ಕ್ಷರುಚಿಪಿಮುವಿಮುಳಜಳಮಂ |
ಪರಪಿದಳೊಮ್ಮೊರ್ದಲಾಳಾಸ್ಯಶಿರುಚಿಸಜಿತಂ || ೭೩

ವ|| ಮತ್ತಮದಲ್ಲದೆಯುಂ

ಕಂ|| ಚಂದನ ಚಂದ್ರಿಕೆಯುಂ ರಮ |
ಣೇಂದುಕರಂ ಸೂಸೆ ಮುಗಿದುದದು ಕಾಂತೆಯನೇ ||
ತ್ರೇಂದೀವರಮಾಸ್ಯಾಂಬುಜ |
ಮುಂದಲರ್ದುದು ಕೊಳದೊಳೆಗಿದೇನಚ್ಚರಿಯೋ || ೭೪

ವ|| ಮತ್ತಮೊರ್ವ್ವಳ್

ವೃ|| ನೃಪಕರವಾರಿಯಂತ್ರಮುಖಮುಕ್ತಮೃಗೋದ್ಭವಮಿಶ್ರಧಾರೆಗ |
ಳ್ದ್ವಿಪಪತಿಕುಂಭಸನ್ನಿಭಕುಚಾಚಲಮಂ ಮುಗಿಲಂತೆ ಮುತ್ತೆ ತ ||
ಚ್ಚಪಲಕಟಾಕ್ಷಮಲ್ಲಿ ಸಳೆಮಿಂಚೆನೆ ಮಿಂಚಿರೆ ಚಂದನೋದಕ |
ಸ್ನಪಿತೆ ತದೀಯಬಿಂದು ಮಳೆಯಂತಿರೆ ಕಾಸ್ಮಿರಿಯಂತಿರೊಪ್ಪಿದಳ್ || ೭೫
ಮುಡಿಮುಗಿಲಲ್ಲಿ ಬಲ್ಮಳೆ ಮುಖೇಂದುಗೆ ಚಂದ್ರಿಕೆ ತೋಕ್ಕೆರ್ವೆತ್ತಪೊಂ|
ಗೊಡಮೊಲೆವೆಟ್ಟುಗಳ್ಗೆ ನವನಿರ್ಝರಮೊಪ್ಪುವಬಾಹುವಲ್ಲಿಗಿಂ ||
ಪಿಡಿದಡರ್ದಚ್ಚಗುಚ್ಛಮೆನಿಸಿತ್ತು ನರೇಶ್ವರನಾತ್ಮಹಸ್ತದಿಂ |
ಪಿಡಿದಲರ್ದೊರ್ಟ್ಟೆಯಿಂ ಸುರಿಯೆ ಸೂಸುವಚಂದನವಾರಿ ನಾರಿಯಾ || ೭೬

ಕಂ|| ವರನೊತ್ತೆ ಕುಂಕುಮಾಂಬುವ |
ನರವಿಂದಾನನೆಯ ಮೊಗದೊಳಿಳಿಯುತ್ತೆಸೆದ ||
ತ್ತರವಿಂದದರಲ ಮಕರಂ |
ದರಸಂ ಸುರಿವಂತೆ ಕಣ್ಗೆ ಕಮಳಾಕರದೊಳ್ || ೭೭

ಲೋಲಾಕ್ಷಿಯ ನಗೆಮೊಗದೊ |
ಳ್ಮೇಲೆಯಿನಿನನೊತ್ತೆ ಕತ್ತುರಿಯ ಧಾರೆ ಕರಂ ||
ಕಾಲಾಹಿ ಚಂದ್ರಬಿಂಬಮ |
ನಾಲಂಬಿಸಿ ತುಡುಕಿದಂತದೇನೊಪ್ಪಿದುದೋ || ೭೮

ಮೊಗಸಸಿಯ ಹಸನಚಂದ್ರಿಕೆ |
ಗಗಿವ ವೊಲದಪ್ಪನಿಯುಳುರುತರಸ್ತನಚಕ್ರ ||
ಕೈಕ್ಕೊಗುಮಿಗೆಯಿಂದೆಳವಿಸಿಲಂ |
ನೆಗಳ್*ವಂತಿನನೊತ್ತಿದಂ ಸಕುಂಕುಮಜಳಮಂ || ೭೯

ರಮಣಿಯ ಕಬರಿಯೊಳರಸಂ |
ಹಿಮಜಳಮಂ ಸುರಿಯೆ ಮುಗುಳ್ಗಳೊಡವೆರೆದಿಳಿದ ||
ತ್ತಮದಾಳಿವರಲೊಡನೆ ಕಾ |
ರ ಮುಗಿಳೊಳಿತಪ್ಪವಿಮಳಜಳವೃಷ್ಟಿಯವೋಲ್ || ೮೦

ಹಿಮಮಿಶ್ರಾಂಬುವನೊಯ್ಯನೋಪನಿದಿರೊಳ್ನಿಂದಂಗನಾಚಂದನಾಂ |
ಕಮನೋಜ್ಞಾಂಗದೊಳೊತ್ತೆ ನಾಂದು ಪನಿಯಂ ಸೂಸುತ್ತದಿಂಬಾದುದಾ ||
ಹಿಮರೋಚಿಷ್ಕರಪಾತದಿಂ ಹಿಮರುಚಿಗ್ರಾವಸ್ಫುರತ್ಪುತ್ರಿಕಾಂ |
ಗಮೆ ತಾನೊಲ್ದೊಸರ್ದುಕ್ಕುವಂತೆ ವಿಳಸನ್ಮುಕ್ತಾಚ್ಛವಾರ್ಬಿಂದುವಂ || ೮೧

ಒಡಬಾಸೆಯೆಂಬಜಗುನೆಯೊ |
ಳೊಡವೆರೆಯಲ್ಕುಚಹಿಮಾದ್ರಿಯಿಂದೈದುವಬಾಂ ||
ಗಡಲೆನೆ ಹಿಮಾಂಬು ಪೊಸಪೊಂ |
ಗೊಡದಿಂ ವಧು ಸೂಸೆ ಸುರಿಯುತುಂ ಸೊಗಯಿಸುಗುಂ || ೮೨

ಕೆಳದಿಯ ಮೇಲೆ ಹಿಮಾಂಬುವ |
ತುಳುಂಕಲೆಂದೊರ್ವ್ವಳಟ್ಟೆ ಮುಳುಗಿರೆ ಕೊಳದೊ ||
ಳ್ಜಳದುಹಮನವನ ಮೊಗಮೆಂ |
ದೆಳಸಿ ಕರಂ ಪೊಯ್ದಳಂಬುವಂ ಸಂಭ್ರಮದಿಂ || ೮೩

ನಳಿನಿಯುನಾಲಿಂಗಿಸಿ ಪೂ |
ಗೊಳಲೆಂದುರೆ ಬಾಗಿ ಸಿಂದಳಂಗದೊಳೋರ್ವ್ವಳ್ ||
ತಳಿಯೆ ಘುಸೃಣಾಂಬುವಂ ತಂ |
ಗೊಳಮುಗಿಲಮರೇಂದ್ರಚಾಪಲತೆಯೆನೆ ಮೆರೆದಳ್ || ೮೪

ಅರಸನಿರದೊತ್ತೆ ಕತ್ತುರಿ |
ಯ ರಸಂ ಕಿರುವಾಸೆವಿಡಿದು ಮೇಲಿಳಿದಿಳಿಪಿ ||
ತ್ತರರೆ ಕರಿವಾವು ಕರ್ಪ್ಪುಡಿ |
ದುರಗನನುರೆ ನುಂಗುವಂದಮಂ ತಿಳಿಗೊಳದೊಳ್ || ೮೫

ವರನೊತ್ತಿದ ಘುಸೃಣರಸಂ |
ಗುರುಕುಚನಗಧಾತುನಿರ್ಝರಪ್ಲವಮಿಳಿವಂ ||
ತಿರೆ ನುಸುಳ್ದೈತರೆ ತಳ್ತೀಂ |
ಕರಮೆಸೆದುದೊ ಬಾಸೆವಳ್ಳಿ ತಳಿರೇರಿದವೋಲ್ || ೮೬

ಯಾಮಿನಿಯಂಗದೊಳುದಯಿಪ |
ಸೋಮಂ ಕೆಂಗದಿರನಿದಿರೊಳುರೆ ಕರೆವವೊಲಾ ||
ಶ್ಯಾಮಾಂಗಿಯಂಗಲತೆಯೊ |
ಳ್ಭೂಮೀಶ್ವರಚಂದ್ರನೊತ್ತಿದಂ ಕುಂಕುಮಮಂ || ೮೭

ಹೃದಯಸ್ಥಿತಮದನಂ ಸಂ |
ಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆ ||
ತ್ತಿದಪೊನ್ನಕಳಸಮೆನಿಸಿದು |
ದದರೊಳಿದಿರ್ಚ್ಚಿದವಧೂಜನದ ಕುಚಕಳಶಂ || ೮೮

ಓಪಳ ಕುಚದೊಳ್ಕುಂಕುಮ |
ಲೇಪಂ ಜಲದಿಂದೆ ತೊಲಗೆ ನಖಪದಮಪರಾ ||
ಶಾಪರ್ವತದಗ್ರದೊಳೆ ಕ |
ಲಾಪತಿಕಲೆ ಸಂಜೆ ಸರಿಯೆ ತೋರ್ಪ್ಪವೊಲೆಸೆಗುಂ || ೮೯

ವ|| ಆಗಳರಸಿ ಸರಸಿಯೊಳ್ನಿಂದು ಸರಿಸದೊಳರಸನಂ ಸರಸದಿಂ ನಿರೀಕ್ಷಿಸಿ

ವೃ|| ಸೂಸಿದುದೊಂದು ಚಂದನಮೆ ಕಾಮಿನಿ ತನ್ನ ಮುಖಪ್ರಕಾಶಮಂ |
ಸೂಸದೆ ನೀಳ್ದ ಕಣ್ಮರಲ ಕೋರೆಯನುಣ್ಗದಿರೆಂಬಜೊನ್ನಮಂ ||
ಸೂಸದೆ ಕೂಡೆ ಕುಂದಣದ ಕುಂಭಮನೇಳಿಪುರೋಜದಂಶುವಂ |
ಸೂಸದೆ ಮಂದಹಾಸರಸಮಂ ಸಲೆ ಸೂಸದೆ ನಲ್ಲನಂಗದೊಳ್ || ೯೦

ವ|| ಮತ್ತಂ

ವೃ|| ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದು ಕಂ |
ಗೊಳಿಸಿದನರ್ಕಜಾಂಬು ಮುಸುಕಿರ್ದ್ದಮರೇಂದ್ರಗಜೇಂದ್ರದಂತೆ ಮೋ ||
ಣ್ತುಳುಕೆ ಹಿಮಾಂಬುವಂ ನನೆದು ಚಂದ್ರಿಕೆತೀವಿದ ಚಂದ್ರನಂತೆ ಮಂ |
ಜುಳಘುಸೃಣೋದಮಂ ಸುರಿಯೆ ತಳ್ತು ತಳಿತ್ತರ್ನವಾಮ್ರದಂತೆವೋಲ್ ||೯೧

ಕಂ|| ಲಲನಾಕುಚದೊಳ್ಮೃಗಮದ |
ಜಳಬಿಂದುಗಳೆಸೆದುವರಸನೊತ್ತಲೊಡಂ ತ ||
ಳ್ತಲರ್ವುದನೆ ಪಾರ್ದ್ದು ಸಾರ್ದ್ದ |
ಬ್ಜಲಸತ್ಕೋಶಮನೆ ಮುತ್ತಿದಳಿಗಳವೋಲ್ || ೯೨

ವ|| ಆಗಳ್

ಕಂ|| ವನಜಿನಿ ಕರದಿಂ ಮೃಗಮದ |
ವನಧಾರೆಯನೆತ್ತಿ ಸೂಸಿದಳ್ತಾನುಮೊರ ||
ಲ್ದನೆ ವನಜದಿಂದೆ ರಮಣೀ |
ಜನಾಸ್ಯಕಂಜಕ್ಕೆ ಕವಿದುವಳಿಗಳ್ಕೊಳದೊಳ್ || ೯೩

ಎಳೆಯಳ್ನಳಿನೋಜ್ಜ್ವಳಕು |
ಟ್ಮಳಮಂ ಕೊಯ್ಯಲ್ಕೆ ಸಾರ್ದ್ದು ನಳಿನಾಕರದೊಳ್ ||
ಮುಳುಗುವಳ ಮೊಲೆಯನಬ್ಜದ |
ಕಳಿಕೆಯಿದೆಂದೆಳಸಿ ಪಾಯ್ದು ನಗಿಸಿದಳೊರ್ವ್ವಳ್ || ೯೪

ವೊಲೆಯುಲರ್ದಬ್ಜದೊಳಿರೆ ತನು |
ವೆಲೆವರೆಯೊಳಡಂಗೆ ಬಾಗಿ ಪೂಗೊಯ್ವಳ ತೋ ||
ಪ್ಪ್ಗಲಘುತರಜಘನಭರಮೇಂ |
ಗೆಲೆಪಂದುದೊ ಕೊಳದೊಳೇಳ್ವಕರಿಶಿರದಿರವಂ || ೯೪

ವೃ|| ಸ್ಮರನಬಾಣಸರೋಜಕೆ ಕೊಪ್ಪ್ಗನಾ |
ತರುಣಿ ಕಣ್ಗಡೆಯಿಂದುಪದೇಶಿಪಂ ||
ತರರೆ ಪೂಗೊಳದೊಳ್ಮುರಿದಾಂತು ಪಂ |
ಕರುಹಮಂ ನಡೆನೋಳ್ಪವಳೊಪ್ಪಿದಳ್ || ೯೬

ವ|| ಇಂತನಂತಸಂಭ್ರಮಂ ಮಿಗೆ ಸಲಿಲಕೇಳಿಯಂ ತಳೆದನಂತರಂ

ಕಂ|| ಅರೆವಿರಿದಂಬುಜದಲರಂ |
ಕರತಳದೊಳ್ತಳೆದು ಕನಕವನಜರಜಂಗ ||
ಳ್ಪೊರೆದಿರೆ ನಿಜತನುಲತೆಯೊ |
ಳ್ಸಿರಿಯೆನೆ ನಿಂದರಸಿ ಸರಸಿಯಂ ಪೊರಮಟ್ಟಳ್ || ೯೭

ವ|| ಮತ್ತಮಾಗಳ್

ಕಂ|| ಎಳವಾಸೆ ತೊಡರ್ದುದೆನೆ ಮಿಸು |
ಪೆಳವಾಸೆಯುಡೆಸೆಯೆ ನಿಂದಳಂ ಕೈವಿಡಿದೊ ||
ರ್ದ್ದೆಳವಾಸೆಯೊಂತನಂಬುಜ |
ದೆಳವಾಸೆಡೆಗೊಂಡ ಪುಳಿನದೆಡೆಗವನೀಶಂ || ೯೮

ವೃ|| ಸನೆಗಳ್ಸೋರ್ವ್ವಪೊಲುವ್ವ್ಗ ಸೂಸೆ ಮುಡಿಯಿಂ ವಾರ್ಬಿಂದುಗಳ್ಗಂಡದೊ|
ಳ್ವನದಶ್ಯಾಮಳಕುಂತಳಂ ಶಶಿಯೊಳಂಕಂ ತೋರ್ಪ್ವ ಪೋಲ್ತೋರೆ ಕ ||
ಣ್ಗೊನೆ ರೋಡಾಡೆ ವಿಲೋಹಿತಂ ವಿರಹಿರಕ್ತಾಕ್ತಾಂಗಜಾಸ್ತ್ರಂಗಳಂ |
ವನಿತಾನೀಕಮದಿಂಬುವೆತ್ತು ಪೊರಮಟ್ಟೈದಿತ್ತು ಕಾಸಾರಮಂ || ೯೯

ಕಂ|| ಅಂಗನೆಯುರಂಗಕಾಂತಿಯು |
ಪಾಂಗದ್ಯುತಿ ಮುಸುಕಿದಂತಿರೆಸೆದುದು ಕೊಳದೊಳ್ ||
ಪಿಂಗದವರೆತ್ತಿ ಸೂಸೆ ತ |
ರಂಗಿಪಕುಂಕುಮಮುಮಮುಳಚಂದನರಸಮುಂ || ೧೦೦

ತಳಿರ್ವರ್ಣ್ಣವಾಂತಕಡೆಗ |
ಣ್ಬೆಳರ್ವರ್ಣ್ಣಂಬಡೆದತುಟಿದಳಿರ್ಪ್ಪರೆದಳಕಂ ||
ಮಿಳಿರ್ವ ನಿರಿವಿಣಿಲುಮೆಸೆದುದು |
ತಳರ್ವೆಳವೆಣ್ಗಳ್ಗೆ ಕುಳಿರ್ವ ಕೊಳದಿಂದಾಗಳ್ || ೧೧೧

ವೃ|| ಪೋಗಲೆಂಬು ತಡಿಯೊಳ್ಧರಣೀಶ |
ಸ್ತ್ರೀಗಣಂ ನೆಲಸಿ ನೋಳ್ಪುದುಮಾಗಳ್ ||
ರಾಗದಿಂ ಸರಸಿಗೊಳ್ಪುಡೆಯಿಾವಂ |
ತಾಗಿ ಪಬ್ಬಿರ್ತಲರ್ಗಣ್ಬೆಳಗೆತ್ತಂ || ೧೦೨

ಕಂ|| ಅಂಬರಮುದಮುರೆ ಸಾಂದು ನಿ |
ರಂಬರೆಯಂತಿರ್ದ್ದ ಯುವತಿಗಿತ್ತಪಳೆನೆ ಪೀ ||
ತಾಂಬರಮುಂ ಸರಸಿ ಸುವ |
ರ್ಣಾಂಬುಜರಜಮೆಲರ ಪೊಯ್ಗಳಿಂ ನೆಗೆದೆಸೆಗುಂ || ೧೦೩

ತರಳೆಯುರೆಮುಗುಳ್ಗಂಬುಜ |
ದರಲಂ ಕೊಯ್ದೊಯ್ದರೆಂದು ಮುಳಿದುಂಬಿಗಳಾ ||
ಸರಸಿಯೊಡನಳ್ತುದೂರುವ |
ಸರಮೆಸೆ ಕರಮೆಸೆದುದವರಗಾವರಮುದರೊಳ್ || ೧೦೪

ತೆರೆ ಮುಸಗೆ ನೆಗೆದು ನಿಂದಂ |
ಬುರುಹದೊಳೆಳವಿಾಂಗಳಿರೆ ವಿರಾಜಿಸಿದುದು ತ ||
ತ್ಸರಸಿ ಪೊರಮಟ್ಟು ಪೋಪಾ |
ತರುಣಿಯುರಂ ನಿಕ್ಕಿನೀಕ್ಷಿಪಂತಿರೆ ಕೊಳದೊಳ್ || ೧೦೫

ವೃ|| ಕರದಿಂದಂ ಪಿಕ್ಕಿಬಲ್ಪಿಂದಲರ್ದಕುಮುದಮುಂ ಸೂಡೆ ಕಂಜಾಕ್ಷಿ ಕಾಶ್ಮೀ|
ರರಸಂ ಕಸ್ತೂರಿಯುಂ ಕೂಡಿರೆ ಬಿಡದದರೊಳ್ಕೇಳಿಯಿಂ ಪೀಲಿಗಣ್ಣಂ ||
ತಿರೆ ತಾಂ ತತ್ಕೇಶಬಂಧಂ ನವಿಲೆನೆ ಕರಮೊಪ್ಪಿತ್ತು ಕಚ್ಚಿರ್ದ್ದಕಾಕೋ |
ದರನೆಂಬಂತಾಗೆ ನೇಲುತ್ತೆಸೆವನವಸರಃ ಪ್ರಾಪ್ತಶೈವಾಲಪಾಶಂ || ೧೦೬

ಕಂ|| ಕುರುಳೆಂಬಮಾಲೆದುಂಬಿಗ |
ಳರವಿಂದಾಕರಸರೋಜದೊಳ್ಮಧುಕಣಮಂ ||
ಬರೆಪೀರ್ದ್ದಳ್ಕಿಸಲಾರದೆ |
ಭರದಿಂ ಕಾರುವವೊಲಿವಜಳಕಣಮೆಸೆಗುಂ || ೧೦೭

ವ|| ಇಂತುಮಾಸಾರ್ವಭೌಮಲಲಾಮಂ ನಿರ್ವರ್ತಿತಜಲವಿಹಾರನಾಗಿ ಕಾಸಾರತಟದೊಳ್ಕಾಸಾರಘನಕಚಭರೆಯರೊಡಗೂಡಿ ನಿಂದಿರ್ಪ್ಪಾಗಳ್ಕೋಶರಕ್ಷಕರ್ನಿಕ್ಕಿಡಿದವಿಮಳ ವಸನಸುಗಂಧಮಾಲ್ಯಮಣಿಭೂಷಣಂಗಳಂ ತಾನುಮರಸಿಯುಮಾಪೃಥುನಿತಂಬೆಯರುಂ ಪರಿಗ್ರಹಿಸಿ ಬೇರೆಬೇರೆ ಪಸದನಂಗೊಂಡು ಪರಮಹರ್ಷದಿಂದಿನಿಸಾನುಂಬೇಗಮಿರ್ದ್ದು ವನಮುಹತ್ತರನಂ ಕರೆದು

ಕಂ|| ಇದು ಮಾಮರಕಿದು ಮಲ್ಲಿಗೆ |
ಗಿದು ಸಂಪಗೆಗಿದು ಸರೋವರಕ್ಕಿದಶೋಕ ||
ಕ್ಕಿದು ಲತೆವನೆಗೆಂದಿತ್ತಂ |
ಪದಪಿಂ ಬಹುಭೂಷಣಾಂಬರಂಗಳನರಸಂ || ೧೦೮

ವ|| ಅಂತಿತ್ತು ಮತ್ತಮಿರದೆ

ಕಂ|| ಆವನನಂದನಮಧ್ಯದ |
ದೇವಾವನಿಜಾತಮಾತನೆಂಬವೊಲಿತ್ತಂ ||
ಶ್ರೀವಿಬುಧತತಿಗೆ ವಸುರತ್ನಾ |
ವಳಿಯಂ ರಾಜಶೇಖರಕ್ಷಿತಿಪಾಲಂ || ೧೦೯

ವ|| ಅಂತು ವಿತರಣವಿಳಾಸಮಂ ನಿರ್ವರ್ತಿಸಿ ಕೆಳದಿಯರಂ ಕರಿಣಿಗಳನೇರಲ್ನಿಯಾಮಿಸಿ ನಿರತಿಶಯವಿಭವಂ ಮಿಗೆ ನಿಜನಿತಂಬಿನಿವೆರಸು ವನಮಂ ಪೊರಮಟ್ಟು ಕರೀಂದ್ರಕಂಧರಾರೂಢನಾಗಿ ಪಟುಭಟಪಟಲಪರಿವೃತಜಯರವಮುಖರಮುಖವಂದಿಸಂದೋಹವಂದ್ಯಮಾನನಮಂದದುಂದುಭಿಮೃದಂಗಢಕ್ಕಾಕಹಳಾದಿವಾದ್ಯಾನವದ್ಯರವಪೂರಿತದಶದಿಶಾವಳಯನಾನರೇಂದ್ರವೃಂದಾರಕಂ ನಡೆತಂದು ನಿಜರಾಜಧಾನಿಯಂ ಪುಗುವಾಗಳ್

ವೃ|| ವಿಳಸತ್ಸೌಧಂಗಳೊಳ್ಸೆಜ್ಜೆಗಳ ನೆಲೆಗಳೊಳ್ದೇವಕೂಟಂಗಳೊಳ್ನಿಂ |
ದೆಳವೆಣ್ಗಳ್ಕಂತುವಿಂತೊಪ್ಪುಗುಮೆ ಹರಗವಿಾಚೆಲ್ವು ಕೈಸಾರ್ಗುಮೋ ಕೇ ||
ಳ್ಕೆಳದೀ ನೋಡೆಂದು ನೋಡುತ್ತೆ ಸೆಯೆ ಬಿಡದೆ ತನ್ನಂದಮಂ ಬಂದು ಪೊಕ್ಕಂ|
ಲಳನಾಯುಕ್ತಂ ನಿಜಾಂತಃಪುರಮನುರುಶಿವಾದ್ವೈತವಿದ್ಯಾಸಮುದ್ರಂ ||

ಅಳಿಪ್ರಭಲಲಾಟಗಜಳಾಳಕೆ ಖಳಾಪಹೆ ಒಳಾನ್ವಿತೆ ವಿಳದ್ಘನಗುಣೆ |
ಬಳಾನುಜಬಲಿಪ್ರಿಯೆ ತಳಾಂಚಿತಜಳೋದ್ಭವೆ ಬಳಾಹಿತ ಮುಖಾಮರನತೆ ||
ಗಳಾನ್ವಿತ ಹಲಾಹಲಬಿಲೇಶಯಕಳೇವರವಿಳಾಸದೆ ಕಳಂಕರಹಿತೆ |
ಕಳಾಧರಕಳಾಧರೆಸುಲೋಚನೆ ಕಳೋಜ್ವಳಿಶಿಲೋಚ್ಚಯಸುತೇ ಜಯಜಯ||

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣಮಹಾಪ್ರ
ಭಾಪಟಲಪರಿವೃತಪರಶಿವಶ್ರೀಪಾದನಖಚಂದ್ರಸಾಂದ್ರರುಚಿರುಂದ್ರ
ಚಂದ್ರಿಕಾಚಂಚಚ್ಚಕೋರಾಯಮಾನಸರಸಜನಮಾನಿತೋ
ಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿ
ತಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂ
ಧದೊಳ್ ರಾಜಶೇಖರವನವಿಹಾರಾದಿ
ವರ್ಣನಂ. ದಶಮಾಶ್ವಾಸಂ
ಸಂಪೂರ್ಣಂ.



# ಏಕಾದಶಾಶ್ವಾಸಂ.



ಕಂ|| ಶ್ರೀಚಂಡಿಕಾಮುಖೇಂದುವಿ |
ಲೋಚನರುಚಿಚಂದ್ರಿಕಾಚಕೋರಂ ನತರ ||
ಕ್ಷಾಚತುರಂ ಭವಪಾಶವಿ |
ಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ ||

ವ|| ಅನಂತರಮರಸನಮಾತ್ಯಸುತಂಬೆರಸು ರಾಜಗೃಹದ್ವಾರದ ಪಜ್ಜಳಿಪ ಬಜ್ಜರದಸೆಜ್ಜೆವನೆಯೊಳೊಡ್ಡೋಲಗಂಗೊಟ್ಟಿರುತ್ತುಮಿರೆಯಿರೆ

ಕಂ|| ಗಗನಗಜನಿಟಿಲತಟದಿಂ |
ಜಗುಳ್ದಂತೆ ಪುರಾಣರಶ್ಮಿ ಮಣಿಮಯಮುಕುರಂ ||
ಮಿಗೆ ಮೆರೆದುದರರೆ ಪಶ್ಚಿಮ |
ನಗದಗ್ರದೊಳಿಳಿದು ತೋರ್ಪ್ಪದಿನಕರಬಿಂಬಂ || ೨

ವ|| ಅಂತುಮಲ್ಲದೆಯುಂ

ಕಂ|| ಪಡುವೆಟ್ಟಸಜೆಯೊಳೊಪ್ಪುವ |
ಕಡಲೊಡೆಯನ ಮಡದಿ ತೀದಸಿಂದೂರದ ಕೆಂ ||
ಪಿಡಿದೆಸೆವಸಾಣೆಗೆಯಿದೆಸೆ |
ಬೆಡಂಗುವಡೆದಿದ್ದುದಸ್ತಭಾಸ್ಕರಬಿಂಬಂ || ೩

ವ|| ಮತ್ತಂ

ಕಂ|| ಇದು ಸಂಧ್ಯಾನಟರುದ್ರನ |
ವಿದಿತಜಟಾಕ್ಷುಬ್ಧಫಣಿ ಮಹಾಬಿಲಮಂ ತ ||
ಳ್ವದೆ ಪುಗಲೊಗೆದಿರೆ ಪೊಳೆವ |
ಗ್ಗದಫಣಮಣಿಯೆನಿಸಿತರುಣರುಚಿವಿಬಿಂಬಂ || ೪

ಶರಧಿಗತಪ್ರತಿಬಿಂಬಂ |
ಸರಿಸದೊಳಿರೆ ಬದ್ಧರಶ್ಮಿಯುತರವಿಬಿಂಬಂ ||
ಹರನಾಟ್ಯಕೆ ಕಾಲನಟಂ |
ಕರಮೆತ್ತಿದ ಪೊನ್ನತಾಳವೆನೆ ಕಣ್ಗೊಳಿಕುಂ || ೫

ಒಡೆಯೆ ನಭೋಲಕ್ಷ್ಮೀವಧು |
ಪದಪಿಂ ವರುಣಾಶೆಯೆಂಬಶೋಕೆಯುಲತೆ ಕೆಂ ||
ಪೊದವಿದ ತಳಿರಂ ತಳೆದಂ |
ದದೆ ತಳ್ತಿಸೆದಿರ್ದುದಿದರರೆ ಸಂಧ್ಯಾರಾಗಂ || ೬

ಅರುಣಂ ಬಳಲ್ದತುರಗೋ |
ತ್ಕರಮಂ ಮೈದೊಳೆಯಲಬ್ಧಿಯೊಳ್ತೆಗೆದು ಕೆಲ ||
ಕ್ಕಿರಿಸಿದರನ್ನದ ಪಲ್ಲಣ |
ದಿರವೆನೆ ನರೆನೆಗೆದಸಂಜೆಗೆಂಪೆಸೆದಿರ್ಕ್ಕುಂ || ೭

ವ|| ಅಂತುಮಲ್ಲದೆಯುಂ

ಸ್ರ|| ಗಗನಾಂಭೋರಾಶಿಯೊಳ್ತಳ್ತೆಸೆವಪವಳನೋ ಪಶ್ಚಿಮಾಶಾಂಗನಾಂಗ |
ಪ್ರಗತೋದ್ಯತ್ಕುಂಕುಮಕ್ಷೋದಮೊವರುಣಗೃಹದ್ವಾರಸೌವರ್ಣಹರ್ಮ್ಯ ||
ಸ್ಥಗಿತಶ್ರೀಪದ್ಮರಾಗಪ್ರಭೆಯೊ ಮದನ ಯಾತ್ರಾದಿಯೊಳ್ಪೊಯ್ದಕೆಂಬ |
ಟ್ಟೆಗಳೊಳ್ಗುಡಾರವೋ ಪೇಳೆನೆ ಪಸರಿಸಿ ಸಂಧ್ಯಾರುಣದ್ಯೋತಿ ತೋರ್ಕ್ಕುಂ||

ಎನ್ನತನೂಜೆ ನಿನ್ನರಸಿಯೊಳ್ಕೆಳೆಗೊಂಡೊಡನಿರ್ಪ್ಪಳಾಗಳುಂ |
ನಿನ್ನತನೂಜೆಯೆನ್ನರಸಿ ಕೇಳದರಿಂದೆಮಗಿಲ್ಲಭೇದಮಿ ||
ನ್ನೆನ್ನಮಗಂಗೆ ಕಾಯದಿರೆನುತ್ತೆ ಸರೋಸಿಧಿ ಬಂದಭಾನುಪಂ |
ಮನ್ನಿಸುತಿತ್ತ ಪೀತವಸನಂ ನಿಜಮೆಂದೆನೆ ಸಂಜೆ ರಂಜಿಕುಂ || ೯

ವ|| ಮತ್ತಮಾಗಳ್

ಕಂ|| ಇನವಿರಹಿಣಿ ಪದ್ಮಿನಿಕಾಂ |
ತನಗಲ್ಕೆಯನಾಂತಿರಸುಗೆಮುಳಿವನಿಶಾಕಾಂ ||
ತನ ಕರಕೆ ಬೆಚ್ಚಿ ಮುಚ್ಚಿದ |
ಳೆನೆ ಮೊಗಮಂ ಮುಗಿವಪಂಕಜಂ ಕರಮೆಗುಂ || ೧೦

ಅಲರಂಬಂಗಂಬಾಗದಿ |
ದಲರ್ದಂಬುಜವೆಂದು ಬಂದು ತಜ್ಜಯಯಾತ್ರಾ ||
ವಿಲಸತ್ಸಮಯದೆ ಮುಗಿಯಿಪು |
ದೆಲರೆನೆ ಮುಗಿವಂಬುಜೋತ್ಕರಂ ಕರಮೆಸೆಗುಂ || ೧೧
ಹರನೇತ್ರಸಖಂ ಗಡ ಮುರ |
ಹರನೇತ್ರಂಗಡ ವಿಧಾತೃಜನಕಂಗಡ ತಾ ||
ಪರೆಯುದಕರೆಯಾದುದುಗಡ |
ಸಿರಿಯೆನೆ ತಿಳಿ ಕಾಲವಶಮನಾರ್ಕ್ಕಳಿದಪರೋ || ೧೨
ಎಲೆನೈದಿಲೆ ಸಿರಿಯಿದರೊ |
ಳ್ನೆಲಸಿದೆಯೆನೆ ಮೊರೆವನೆವದಿ ನಳಿಯದು ನೋಳ್ಪಂ ||
ತಲರ್ದುದದನರಿದು ಭಯದಿಂ |
ಜಲಜಿನಿ ಮುಚ್ಚುವವೊಲಲ್ಲಿ ಮುಗಿದುದು ಕಮಳಂ || ೧೩
ಎಳಲುತ್ತಿರೆ ಪಕ್ಷಂ ತನು |
ಬಳಲುತ್ತಿರೆ ಚಿತ್ತಮಿನಿಯಳಂ ನೆನೆನೆನೆಯು ||
ತ್ತಳಲುತ್ತಿರೆ ಜೀವನಮದು |
ತೊಳಲುತ್ತಿರೆ ಸುಳಿದು ಸುಯ್ದುದೊಂದುರಥಾಂಗಂ || ೧೪
ನಲ್ಲಳಗಲ್ದಳಲುವ್ವಿರ್ದರೆ |
ಮೆಲ್ಲನೆ ಬಾಯಲ್ಲಿ ಪಾಸೆದಳೆದು ರಥಾಂಗಂ ||
ಫುಲ್ಲಶರಸಿಸುಗೆಗಾರದೆ |
ಫುಲ್ಲಂ ಕರ್ಚ್ಚಿದವೊಲಾಗಳೇನೊಪ್ಪಿದುದೋ || ೧೫

ವೃ|| ನಳಿನದಳಂಗಳಲ್ಲಿ ಪುಳಿನಸ್ಥಳದಲ್ಲಿ ಲತಾವಿತಾನದೊ |
ಳ್ತಿಳಿಗೊಳದಲ್ಲಿ ತನ್ನಮನದನ್ನಳನೊಲ್ದರಸುತ್ತೆ ಸುತ್ತಿಕ ||
ಣ್ಗೊಳಲಿ ಕರಂಗಿ ಕಂಪಿಸಿ ಪಲುಂಬ ಬಳಲ್ದು ತೊಳಲ್ದಳಲ್ದು ಮೇ |
ಲ್ಪಳಿವಳಿಸಿಪ್ಪ ಕಾಂತೆಯನಗಲ್ದಿಣೆವಕ್ಕಿ ನಿಶಾಪ್ರವೇಶದೊಳ್ || ೧೬

ಕಂ|| ಇಲ್ಲಿ ನಡೆತಂದೆವಪ್ಪಿದೆ |
ವಿಲ್ಲಿ ಬಿಸಂಗೊಂಡೆವಿಲ್ಲಿ ಬಾಯುೞ್ಗಿಡಿದೆವಿ ||
ಲ್ಲಿಲ್ಲಿ ನೆರೆದಿರ್ದೆವೆಂದ |
ಲ್ಲಲ್ಲಿ ಕರಂ ನಿಂದು ನೆನೆದು ಸುಯ್ದುದು ಕೋಕಂ || ೧೭

ಪೊಸಕಳ್ತಲೆಯುದು ತನುವಂ |
ಮುಸುಂಕೆ ಕರ್ಬಕ್ಕಿಗೆತ್ತಗಲ್ವುದು ಚಕ್ರ ||
ಪ್ರಸರಂ ರಸೆಯೊಳದಲ್ಲದೊ |
ಡೆಸೆವಿರುಳೊಳಗಲ್ಕೆಯುದಕದೇಂ ಸಮನಿಸುಮೇ || ೧೮

ಸ್ರ|| ಘನಸಂಧ್ಯಾರಾಗತೀವ್ರಾನಲನೊಳೊಲವಿನಿಂ ಕಾಸಿ ತಿಗ್ಮಾಂಶುವೆಂಬೆಂ |
ಬನವೀನಸ್ವರ್ಣಸತ್ಪಿಂಡಮನಮಳನಭಶ್ರೀಗಲಂಕಾರಮಂ ಮಾ ||
ಳ್ಪೆನೆನುತ್ತಿಟ್ಟಿಸಿ ಪೂರ್ವೇತರಶರನಿಧಿಯೊಳ್ಕಾಲಮೆಂಬೋಜನಳ್ದ |
ಲ್ಚನಿಸುತ್ತುರ್ಬೇಳ್ದುದೋ ಕರ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ||

ನಿಜಕರದಿಂದೆ ರಾಜವಸುವೆಲ್ಲಮನೊಯ್ಯನೆ ಕಳು ನೀಲನೀ |
ರಜನಿಯ ಬಾಯ ಮುದ್ರಿಸಿ ಪಿಸುಣ್ಗೆಡೆದಪ್ಪಳೆನುತ್ತೆ ಮತ್ತೆ ನೀ ||
ರಜನಿಯೊಳೊಲ್ದು ಪುಷ್ಪವತಿಯೊಳ್ದಿವದೊಳ್ಪರೆದಿಂತು ಸತ್ಪಥ ||
ತ್ಯಜನಮನಾಳ್ದು ಬಳ್ದಳಿದ ಸೂರ್ಯನ ದುರ್ಯಶಮುಪ್ಪುದೀತಮಂ || ೨೦

ವ|| ಮತ್ತಂ

ಪುರಹರನರ್ತನೋತ್ಸವದೊಳೋಸರಿಸಿರ್ದ ಕರೀಂದ್ರಚರ್ಮವೋ |
ನರನಯನಾಳಿಮತ್ಸ್ಯತತಿಯಾಳಿಪಕಂಮಡುವೋ ನಭಸ್ತವಾ ||
ಲರುಚಿರಪಲ್ಲವಾವಲಿಯೊ ತೀವಿದತಾರಗೆದುತ್ತುಗಳ್ಗೆ ಮೇ |
ಲುರವಣಿಸುತ್ತೆ ಬರ್ಪಬಲಿಭೋಜನಜಾಲನೊ ಮರ್ಬಿನೇಳ್ಗೆಯೋ || ೨೧

ಉಡುವೊಡೆ ನೀಲಚೇಲಮಲರ್ಗಣ್ಗಿರದೆಚ್ಚುವೊಡಂಜನಂ ಬಳ |
ಲ್ಮುಡಿಯೊಳೆ ತಾಳ್ದೊಡುತ್ಪಳದಳಸ್ರಜಮಂಗದೊಳಣ್ಪುಗೈದು ಬೊ ||
ಟ್ಟಿಡುವೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರಮಣೀವಿಭೂಷಣಂ |
ತುಡುವೊಡೆ ಜೋಡೆಯುಗ್ರ್ಗೆ ಪಿರಿದಾದುದು ಪರ್ಬಿದಮರ್ಬು ಲೋಕಮಂ||

ವ|| ದ್ರುತವಿಳಂಬಿತವೃತ್ತಂ ||

ವೃ|| ಬಿಗಿದಬೆಳ್ಳಿಯ ನುಣ್ಮಣಿಯಂತೆವೋ |
ಳ್ಭಗಣಮೊಪ್ಪಿರೆ ಕಾಲವನೇಚರಂ ||
ಜಗದಲೋಚನಮೀನಕೆ ಬೀಸಿದಾ |
ನೆಗಳ್ದಕರ್ಬ್ಬಲೆವೋಲ್ತಮವೊಪ್ಪುಗುಂ || ೨೩

ವ|| ಅಂತಿರ್ಟ್ಟಣಿಸಿ ಪರ್ಬ್ಬಿದಂಧಕಾರದಲ್ಲಿ

ವೃ|| ಬಳೆಗಳ್ಗಲ್ಕೆನದಂತೆ ಕಣ್ಬೆಳಗದೆತ್ತಂ ಸೂಸದಂತಿಟ್ಟಮುಂ |
ಜುಳಭೂಷಾಳಿಯ ಶಿಂಜಿತಂ ನೆಗಳದಂತಾಸ್ಯಾಬ್ಜಗಂಧಕ್ಕೆ ಮುಂ ||
ಡಳಿಗೊಂದಾರಡಿವಿಂಡು ಗಾವರಿಸದಂತೋರಂತೆ ಜಾಣ್ಮೆಕ್ಕು ಪುಂ |
ಶ್ಚಳಿಯುರ್ಬ್ಬುಂದುಪಕಾಂತಸೂಚಿತನಿಶಾಂತಾಂತಂಗಳಂ ಪೊರ್ದ್ದಿದರ್ ||೨೪

ವ|| ಅವರೊಳೊರ್ವ್ವಳ್

ಕಂ|| ಕ್ಷಣರುಚಿರುಚಿರೇಕ್ಷಣೆ ಪಾ |
ರ್ವಣವಿಧುಮುಖಿ ಪಾಣ್ಬೆ ಪೋಗಲಳವಲ್ಲದೆ ತ ||
ಲ್ಲಣಿಸಿ ಪೆಡಂಮೆಟ್ಟುತ್ತಂ |
ಗಣಕ್ಕೈದುತೆ ನುಯ್ಯು ಬೈದಳಾಕಮುಳಜನಂ || ೨೫

ಮಾರನೃಪಂ ಕಾರೊರೆಯೊ |
ಳ್ಕೂರಸಿಯಂ ಪುಗಿಸುವಂತೆ ವೀಧಿಯ ತಮದೊಳ್ ||
ಜಾರೆ ಘನನೀರೆ ತನುರುಚಿ |
ಸಾರಾಂಗೆ ಪೊದಳ್ದು ಪೊಕ್ಕು ಬರ್ಪ್ಪವಳೆಸೆದಳ್ || ೨೬

ರಸೆಯುಂ ಪರ್ಬ್ಬಿದಮುರ್ಬ್ಬನೊ |
ಳಸಮಶರಂ ನಿಜಶರಂಗಳಿಂ ಗುರಿನೋಡು ||
ತ್ತ್ತಸತಿಯುರನಿಸುವನವರ್ಗಳ |
ಬಿಸರುಹದಳಧವಳವಿಪುಳ ಕೇಕರ ರುಚಿಯಿಂ || ೨೭

ವೃ॥ ಉಟ್ಟು ತಮಾಲಪಟ್ಟೆಯನೆ ಕತ್ತುರಿಯಿಂ ನಿಜದೇಹದಲ್ಲಿಗ |
ಣ್ಪಿಟ್ಟು ಸುರೇಂದ್ರನೀಲಮಣಿಭೂಷಣಮಂ ತಳೆದುತ್ಪಳಸ್ರಜಂ ||
ಒಟ್ಟದುರುಂಬಿನೊಳ್ಮೆರೆಯೆ ನೀಲದ ಚೇಲದ ಮೇಲುದಾಂತು ಕ |
ಣ್ಗೆಟ್ಟಳವಾದಳೊರ್ವ್ವಳೆಳೆಯುಳ್ತಮುಮಂ ಪಡೆದಪ್ಪಿದಂತೆವೋಲ್ || ೨೮

ವ|| ಆಗಳೊರ್ವ್ವಳ್ದೂತಿ ಧೂರ್ತನಿರ್ಪ್ಪಸಂಕೇತಸದನಕ್ಕೆ ನಿಜಸಖಿಯ ನೊಡಗೊಂಡೇಳ್ತಂದು ಕಳಿಪುವಲ್ಲಿ

ವೃ|| ಮುಳಿಯದಿರಾಳಿ ನಿನ್ನ ಮನದಾಸರಮಾತುಮನಾಡಿ ಪೊಳ್ತು ನೀಂ |
ಕಳಿಯದಿರಾತನೊಳ್ನಖರದಕ್ಷತಸಂತತಿಯಿಂ ರತಾಂತದೊಳ್ ||
ತ್ತಳೆಯದಿರುಟ್ಟುದಂ ಕಳೆಯದಿರ್ನ್ನೆರೆದೀಗಳೆ ಬೇಗಬರ್ಪ್ಪುದು |
ತ್ಪಳಸಖಿಮುಂಡಳೋದಯಕೆ ಮುನ್ನಮೆನುತ್ತುರೆ ಬುದ್ಧಿವೇಳಿದಳ್ || ೨೯

ವ|| ಅವಳೆಂದುದನಪ್ಪುಕೈದು ಪಕಾಂತನೆಡೆಗೆ ಬಂದು

ವೃ|| ಉಡುಗಣದಂತೆ ಮೈಯೊಳಿಡಿದೊಪ್ಪೆ ಬೆಮರ್ನ್ನಿಜನೇತ್ರಕೈರವಂ |
ಬಿಡದನುರಾಗಮಂ ತಳೆಯೆ ಪೆರ್ಮ್ಮೊಲೆಯೆಂಬೆಣೆವಕ್ಕಿ ಗಾಸಿಯಂ ||
ಪಡೆದಿರೆ ತತ್ಕರಾಹತಿಯಿನಂದಿನನಿಲ್ಲದವೇಳೆಯುಲ್ಲಿರು |
ಳ್ಮಡದಿವೊಲಂಬರಂಬೆರಸು ಪಾಣ್ಬೆ ಕಳಾಸಿಧಿಯೊಂದುಗೂಡಿದಳ್ || ೩೦

ವ|| ಮತ್ತಮೊಂದೆಡೆಯೊಳೊರ್ವ್ವಳ್ಪಾಣ್ಬೆ

ವೃ|| ಉಗುಗೊರ್ನೆನಾಂಟದಂತೆ ಪಿಡಿ ಬಲ್ಮೊಲೆಯಂ ನಿರಿಯಂ ಸಡಿಲ್ಚಿ ನೀ |
ನುಗಿಯದಿರುಟ್ಟುದಂ ಜಡಿದು ಪೊಯ್ಯದಿರೊಯ್ಯನೆ ಮೆಯ್ಯ ಬಾಸುಳಂ ||
ನೆಗಪದಿರೆನ್ನ ಜೆಂದುಟಿಗೆ ಪಲ್ಮೊನೆ ನಾಂಟದವೊಳ್ಕೆಯಿಂದೆ ಮೆ |
ಲ್ಲಗೆ ಮಿಗೆ ಚುಂಬಿಸೆಂದಸತಿ ಶಿಕ್ಷಿಸಿದಳ್ಪೊಸಪಾಣ್ಬನೊರ್ವ್ವನಂ || ೩೧

ವ|| ಅದಲ್ಲದೆ ಪೆರತೊಂದುತಾಣದೊಳೊರ್ವ್ವಜಾತಿಜಾರೆ ಜೌವನದ ಜಾರನಂ ಕಂಡು

ಕಂ|| ಇನನಿಲ್ಲನಿಂದುಬಾರಂ |
ಘನತಿಮಿರಮಿದಪ್ಪುದಕಟ ನೇಹಮದಿಲ್ಲಂ ||
ಮನೆಯೊಳ್ಪೊಡರಿದೆ ಪೋದುದು |
ಜನರಹಿತಂ ನೆರೆಯಿದೆಂದು ಪದಿರಿಂ ಸುಡಿದಳ್ || ೩೨

ಅಂಬರಪುಷ್ಪವಾಟಿಯೊಳರಲ್ದುಡುಪುಷ್ಪಕದಂಬಮಂ ಚಕೋ |
ರಾಂಬಕಿ ಪೂರ್ವದಿಗ್ವಧು ಕರಂ ತಿರಿಯಲ್ಕರಮೆತ್ತಿ ನಿಳ್ಕಿರಾ ||
ಗಾಂಬರದಂತೆ ಸಂಜೆ ನಸುಜಾರೆ ಜಲಕ್ಕನೆ ಪೊಣ್ಮಿದೊಂದುರೋ |
ಜಂ ಬಗೆವಂದು ರಂಜಿಪವೊಲುಜ್ಜ್ವಳಮಾದುದು ಚಂದ್ರಮಂಡಳಂ || ೪೪

ವ|| ಅಂತುಮಲ್ಲದೆಯುಂ

ವೃ|| ಇದು ತಮಮೆಂಬಶಂಬರಧಿಯಂ ಸಲೆ ಪೀರ್ವಮಹಾರ್ವವಹ್ನಿಯೋ |
ಇದು ತಮಮೆಂಬಕಪ್ಪಿಡಿದಕಾನನಮಂ ಸುಡುವಗ್ನಿಪಿಂಡವೋ ||
ಇದು ತಮಮೆಂಬಕೃಷ್ಣಭುಜಗವ್ರಜಮಂ ತವೆಕೊಲ್ವತಾರ್ಕ್ಷ್ಯವೋ |
ಇದು ತಮಮೆಂಬರಕ್ಕಸನಸಿಕ್ಕುವಚಕ್ರಮೊ ಚಂದ್ರಬಿಂಬಮೋ || ೪೫

ವ|| ಮತ್ತಂ

ಕಂ|| ತಿಮಿರಭ್ರಮರವ್ರಜಮಾ |
ಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರದಿಶಾ ||
ರಮಣಿ ತೆಮರಲ್ಕೆ ಚಂಪಕ |
ಸುಮುಕಂತುಕಮಿಟ್ಟಳಿಸಿಕುವಾವಿಧುಬಿಂಬಂ || ೪೬

ಸಿಡಿದಕಿಡಿಬಳಸಿದುಡುಗಣ |
ಮಡದುರ್ರಿ ಸಂಧ್ಯಾಂಶುವೆನೆ ತಮೋಯಮನೊಡಲಂ ||
ಸುಡಲೆಸ[illegible]ಾಲಶೂಲಿಯು |
ಕಿಡಿಗಣ್ಗೆಣೆಸಂದುದರುಣರುಚಿ ವಿಧುಬಿಂಬಂ || ೪೭

ಬಳಸಿದಕೆಂಜೆಳಗಿನಿಸಿಸಿ |
ಸಳಿದುದು ಜೆಳ್ವೆಳಗು ಬಳೆದುದೀಕ್ಷಿಸುವೆಳವೆ ||
ಣ್ಗಳ ಕಣ್ಗಳ ಸುಣ್ಬೆಳಗುಗ |
ಳಳುರ್ದಂತಿರೆ ಮೂಡಿ ಮೋಹಿಸುವಮೃಗಧರನಾ || ೪೮

ಒರಸೆ ಮುದಮೈದೆ ಪೊರೆದಂ |
ತಿರೆ ಕರೆಯುಡುರಾಜಿ ಫೂತ್ಕರಿಸಿದಂಬುಕಣೋ ||
ತ್ಕರದಂತಿರೆ ಚಂದಿರನಿಂ |
ದಿರನಾನೆಯ ಪುಷ್ಕರಂಬೊಲೇನೊಪ್ಪಿದನೋ || ೪೯

ವೃ॥ ನೀಲನಭಸ್ಸ್ಥಳಾಚ್ಯುತಲಲಾಟತಟಚ್ಯುತರಕ್ತಧಾರೆಗ ।
ಳ್ಸಾಲಿಡುತೊಕ್ಕು ಮಿಕ್ಕು ಪರೆದಂತಿರೆ ಪರ್ಬ್ಬಿದಸಂಜೆಗೆಂಪು ತ ॥
ತ್ಕಾಲಕಪಾಲಪಾಣಿಧೃತಚಂದ್ರಕಪಾಲಮೆ ಪೀರ್ದುದೆಂಬಿನಂ ।
ಬಾಲರಸಾಲಪಲ್ಲವಸಮುದ್ಯುತಿ ತದ್ಯುತಿ ಪಿಂಗಿತಾಕ್ಷಣಂ ॥ ೪೦

ಅಮಿತಾಖಂಡಾಂತರಿಕ್ಷೋನ್ನತಸುತಶಿವಲಿಂಗಾಂಘ್ರಿಯಂ ನೋಡಲುದ್ಯ ।
ತ್ತಮುಮೆಂಬಾಸೂಕರಾಕಾರದ ಹರಿ ಧರೆಯೊಳ್ಪೊಕ್ಕನೋಲ್ಪೋಗೆ ತಲ್ಲಿಂ ॥
ಗಮುಹಾಶೀರ್ಷಾಗ್ರಮಂ ನೋಡುವಜವದೆಮಳಾಳಾಂಗಮುಂ ತಾಳ್ದಜಂ ಸಂ।
ಭ್ರಮದಿಂ ಪಾರ್ವ್ವಂತೆಕಣ್ಗೊಪ್ಪಿದುದಮೃತಕಳಾಪೂರಿತಾಂಗಂಸುಧಾಂಗಂ॥

ವ॥ ಮತ್ತಂ

ಕಂ॥ ಚೆನ್ನಾದುದಮೃತಕರಬಿಂ ।
ಬನ್ನೋಳ್ಪರ ಕಣ್ಗೆ ಜೊನ್ನಮೆಂಬಮಹೇಶಂ ॥
ತನ್ನವಿಯಚ್ಚಿಕುರದೊಳೆ ಸ ।
ಮುನ್ನತಸಿತನೀರಜಾತಮಂ ಸೂಡಿದವೊಲ್ ॥ ೪೧

ವೃ॥ ಭಗಣಮೌಕ್ತಿಕಧರಾಭ್ರಕೃಷ್ಣನಂ ।
ದಗಿಯಲಿಂದ್ರಹರಿದದ್ರಿಭಾಂಡದಿಂ ॥
ತೆಗೆದು ತಾಳ್ದನವನೀತಪಿಂಡಮಂ ।
ಬಗೆಯೆ ಪೋಲ್ತುದಮೃತಾಂಶುಮಂಡಳಂ ॥ ೪೨

ವೃ॥ ವ್ಯೋಮಶ್ರೀಪತಿಪಾಂಚಜನ್ಯಮುಡುಮಾಗಾರ್ಗಾರಮುಕ್ತಾಮಯೋ।
ದ್ದಾಮಶ್ರೀಕಳಶಂ ನಭೋಂಬುಧಿಸಿತಾಂಭೋಜಂ ವಿಯದ್ದಂತಿವ ॥
ಕ್ತ್ರಾವೋದಾವಹಚಂದ್ರಕಾಂತಮುಕುರಂ ಚೆಲ್ವಾದುದಾಕಾಶವಾ ।
ರಾಮಾಜಾತಸಿತಾತಪತ್ರಮುವದಾತಂ ಬಿಂಬಮಬ್ಜಾರಿಯಾ ॥ ೪೩

ಕಂ॥ ಚಂಚಚ್ಚಕೋರಪಾಂಥ ।
ಮ್ಮುಗ್ಗಂಚುವಸಂಭ್ರಮದಿನೀಂಟೆ ರಜನೀಸತಿ ಶೋ ॥
ಭಾಂಚಿತಹಿಮಕರಕಲಶದಿ ।
ನೇಂ ಚಂದ್ರಿಕೆಯೆಂಬಜಲಮನೆರೆದಳೊ ನಭದೊಳ್ ॥ ೪೪

ವ|| ಅದಂ ಕೇಳ್ದದಿರದ್ದೈತಂದವಂ ಮದನಕೇಳಿವಡೆದೆಸೆದಿರ್ದ್ದನಲ್ಲಿ ಮತ್ತ
ಮೊಂದೆಡೆಯೊಳ್

ವೃ|| ತೊಡೆ ಕಡುಕಂಪಿಸುತ್ತುಮಿದೆ ಮೈ ಬೆಮರುತ್ತಿದೆ ಕೆತ್ತುಗುಂದದಿ |
ಟ್ಟೆಡೆಮೊಲೆ ಮೋಹಿಸುತ್ತಿದೆ ವಿಲೋಚನಮಂಚಿತಚಂಚಲತ್ವಮಂ ||
ಬಿಡದಿದೆ ಗದ್ಗದಂಒಡೆದವಾತಿದೆ ಭೀತಿಯೊ ಕೂರ್ತ್ತರೀತಿಯೋ |
ಮಡದಿಗೆನುತ್ತೆ ಶಂಕಿಪನ ಸಂದೆಗವಂ ಬಿಡಿಸಿತ್ತು ಮುಂಬದಂ || ೩೩

ವ|| ಮತ್ತಂ

ವೃ|| ವದನೇಂದುಜ್ಯೋತ್ಸ್ನೆಯೆತ್ತಂ ಕವಿದಪುದೆನುತುಂಪಾಣ್ಬನಾಸ್ಯಾಬ್ಜದೊಳ್ಮು
ಚ್ಚಿದಳಕ್ಕುಂ ಕಣ್ಗದಿಮ್ಮಿರ್ಗಂಜುಗುಮೆನುತದನಾವಿಾಲನಂಗೈದಳಕ್ಕುಂ ||
ಮದಭೃಂಗಂ ಬರ್ಕ್ಕುಮೆಂದಳ್ಕುತೆ ಪಿರಿದು ನಿಜಶ್ವಾಸಮಂ ಸೂಸಳಕ್ಕುಂ |
ವಿದಿತಂತಾನೆಂಬಿನಂ ಜಾಣ್ಮೆಗುತುಪಪತಿಯೊಳ್ಕೂಡಿದಳ್ಜೋಡೆಯೊರ್ವ್ವಳ್ ||

ವ|| ಮತ್ತಮೊಂದು ಪಾಳ್ದೇಗುಲದಲ್ಲಿ

ವೃ|| ಗಳಸಿಸದಕ್ಕೆ ಕಾತರಿಪಕಂಠಮನೊಯ್ಯನೆ ಸಂತವಿಟ್ಟು ಮೈ |
ಗಳ ಮಸಪಂಗೆ ಮೈಮರೆವಚಿತ್ತಮನೆಳ್ಚರಿಸುತ್ತೆ ದೈನ್ಯಮಂ ||
ಗಳಪಲೊಡರ್ಚ್ಚೆ ಗದ್ಗದಿಪ ಮಾತುಗಳಂ ಮರೆಸಿಕ್ಕಿ ಪೊಯ್ಕುಲಂ |
ದೆಳಸುವಕಯ್ಯನೋಸರಿಸಿ ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ || ೩೪

ಕಂ|| ಅಗಳೆ ಮುಳಿಸಾಗಳೆ ತಿಳಿ |
ವಾಗಳೆ ಪೊಸಬ್ಬೆಗುಳಾಗಳೇ ಪೊಯ್ಗಳ್ಮ ||
ತ್ತಾಗಳೆ ಸವಿಸುಳಿಲೆಸಗುವ |
ಳಾಗಳೆ ಪಾಣ್ಬಂಗೆ ಸುರತಸುರಲತೆ ನಿಜದಿಂ || ೩೫

ವೃ|| ಮೆಲ್ಲನೆ ಬರ್ಪ್ಪ ಮೆಲ್ಲನಮರ್ದಪ್ಪುವ ಮೆಲ್ಲನೆ ಚುಂಬಿಸಳ್ಕರಿಂ |
ಮೆಲ್ಲನೆ ನೋಳ್ಪ ಮೆಲ್ಲನುಸಿರಿಕ್ಕುವ ಮೆಲ್ಲನೆಲಲ್ಲೆಗೈವ ಮೇ ||
ಣ್ಮೆಲ್ಲನೆ ಪಾಯ್ವ ಮೆಲ್ಲನೊಡಗೂಡುವ ಮೆಲ್ಲನೆ ಸೌಖ್ಯವಾಂಪತ |
ಮ್ಮೆಲ್ಲನೆಗಳ್ತಿದೋಳ್ಪೊಸಜಾಣ್ಮೆಯುಪಾಣ್ಬೆಯರಿರ್ದ್ದರೋಪರೊಳ್ || ೩೬

ಕಂ|| ಇಡಿದತಮಮೆಂಬಜಗುನೆಯ |
ಮಡುವಿನ ಮಧ್ಯದೊಳೆ ಸುಳಿವಮೀಂಗಳಿವೆಂಬಂ ||
ತಿಡಿಕಿರಿದು ತುರುಗಿ ಮಿರುಗುತೆ |
ಕಡುಸೊಗಸಂ ಪಡೆದುವರರೆ ತಾರೆಗಳಾಗಳ್ || ೩೮

ವ|| ಮತ್ತಂ

ದಿನಮಣಿಯೆನ್ನೊಳಗಿರೆ ಮು |
ತ್ತಿನಮಣಿಯೇವಾಳ್ತೆವಯೆಂದು ವನನಿಧಿ ಪೊಸಮು |
ತ್ತಿನಮಣಿಗಳನಿದೆ ಚೆಲ್ಲಿದ |
ನೆನೆ ಮಣಿನಿಭತಾರೆಗಳ್ಮನಂಗೊಳಿಸಿರ್ಕ್ಕುಂ || ೩೯

ಬಿಸಜಾಪ್ತನ ಬಿಸುವಿಸಿಲಿಂ |
ಬಸವಳಿದಾಕಾಶಂಕೇಶವಾಂಗದೆ ಸಿಶೆಸಿಂ ||
ಪಿಸಿದಮಲಯುರುಹರಸಕಣ |
ವಿಸರಂ ತಳ್ತಂತೆ ತಾರೆಗಳ್ಸೊಗಯಿಸುಗುಂ || ೪೦

ವೃ|| ಇನನಪರಾಂಬುರಾಶಿಯೊಳೆ ಬಿಳ್ದಳಿಯುತ್ತಿರೆ ಕಂಡಗಲ್ಕೆಗಿ |
ರ್ಚ್ಚಿನ ಸೆಕೆ ಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣನೀ ||
ರ್ವನಿಗಳನ್ನೆದೆ ಸೆಳ್ಕುಗುರ್ಗಳಿಂ ಮಿಡಿಯಲ್ಕಿಡಿದಲ್ಲಿ ತಳ್ತುವೆಂ |
ದೆನೆ ರಮಣೀಯವಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ || ೪೧

ಕಂ|| ಸುರಪಶಿಖಿಶಮನನೈಋತಿ |
ವರುಣಾನಿಲಧನಪತೀಶರೊಲವಿಂ ಕೆದರ್ದಂ ||
ತಿರೆ ಪುಷ್ಪಾಂಜಲಿಯುಂ ಶಂ |
ಕರಂಗೆ ಸಂಧ್ಯಾನಟಂಗೆ ನೆಗೆದುದು ಭಗಣಂ || ೪೨

ವ|| ಅನಂತರದಲ್ಲಿ

ವೃ|| ನಳಿನಂಕುಂದೆ ವಿಕಾಸವೊಂದೆ ಕುಮುದಂ ಸೊಂಪಿಂದೆ ಚಂದ್ರೋಪಳಂ |
ಜಳಮಂ ಬೀರೆ ಪಯೋಧಿ ಮೀರೆ ವಿರಹಿವ್ರಾತಕ್ಕೆ ಕಾಯ್ಪೇರೆ ಕೋ ||
ಮಳೆಯುಪ್ಪಾಡೆ ಚಕೋರಿ ನೋಡೆ ಮದನಂ ಪಂಚಾಸ್ತ್ರಮಂ ಪೂಡೆ ಚಾ |
ಪಳೆಯುಜ್ಜೀಡೆಯುರೋಡೆ ಮೂಡಿದುದು ತೇಜೋಮಂದಿರಂ ಚಂದಿರಂ ||

ಅಂಬರಪುಷ್ಪವಾಟಿಯೊಳರಲ್ದುಡುಪುಷ್ಪಕದಂಬಮಂ ಚಕೋ |
ರಾಂಬಕಿ ಪೂರ್ವದಿಗ್ವಧು ಕರಂ ತಿರಿಯಲ್ಕರಮೆತ್ತಿ ನಿಳ್ಕಿರಾ ||
ಗಾಂಬರದಂತೆ ಸಂಜೆ ನಸುಜಾರೆ ಜಲಕ್ಕನೆ ಪೊಣ್ಮಿದೊಂದುರೋ |
ಜಂ ಬಗೆವಂದು ರಂಜಿಪವೊಲುಜ್ಜ್ವಳಮಾದುದು ಚಂದ್ರಮಂಡಳಂ || ೪೪

ವ|| ಅಂತುಮಲ್ಲದೆಯುಂ

ವೃ|| ಇದು ತಮಮೆಂಬಶಂಬರಧಿಯಂ ಸಲೆ ಪೀರ್ವಮಹೌರ್ವವಹ್ನಿಯೋ |
ಇದು ತಮಮೆಂಬಕರ್ಪ್ಪಿಡಿದಕಾನನಮಂ ಸುಡುವಗ್ನಿಪಿಂಡವೋ ||
ಇದು ತಮಮೆಂಬಕೃಷ್ಣಭುಜಗವ್ರಜಮಂ ತವೆಕೊಲ್ವತಾರ್ಕ್ಷ್ಯವೋ |
ಇದು ತಮಮೆಂಬರಕ್ಕಸನನಿಕ್ಕುವಚಕ್ರಮೊ ಚಂದ್ರಬಿಂಬವೋ || ೪೫

ವ|| ಮತ್ತಂ

ಕಂ|| ತಿಮಿರಭ್ರಮರವ್ರಜಮಾ |
ಕ್ರಮಿಸಿರೆ ಭಗಣಪ್ರಸೂನಕುಲಕಿಂದ್ರದಿಶಾ ||
ರಮಣಿ ತೆಮರಲ್ಕೆ ಚಂಪಕ |
ಸುಮಕಂತುಕಮಿಟ್ಟಳಿಸಿಕುಮಾವಿಧುಬಿಂಬಂ || ೪೬

ಸಿಡಿದಕಿಡಿಬಳಸಿದುಡುಗಣ |
ಮಡದುರ್ಗಿ ಸಂಧ್ಯಾಂಶುವೆನೆ ತಮೋಯಮನೊಡಲಂ ||
ಸುಡಲೆಸಕಾಲಶೂಲಿಯ |
ಕಿಡಿಗಣ್ಣೆಣೆವಂದುದರುಣರುಚಿ ವಿಧುಬಿಂಬಂ || ೪೭

ಬಳಸಿದಕೆಂಬೆಳಗಿನಿಸಿಸಿ |
ಸಳಿದುದು ಬೆಳ್ವೆಳಗು ಬಳೆದುದೀಕ್ಷಿಸುವೆಳವೆ ||
ಣ್ಗಳ ಕಣ್ಗಳ ನುಣ್ಬೆಳಗುಗ |
ಳುರ್ದಂತಿರೆ ಮೂಡಿ ಮೋಹಿಸುವಮೃಗಧರನಾ || ೪೮

ಒರಸೆ ಮುದಮ್ಮೈದೆ ಪೊರೆದಂ |
ತಿರೆ ಕರೆಯುಡುರಾಜಿ ಫೂತ್ಕರಿಸಿದಂಬುಕಣೋ ||
ತ್ಕರದಂತಿರೆ ಚಂದಿರನಿಂ |
ದಿರನಾನೆಯ ಪುಷ್ಕರಂಬೊಲೇನೊಪ್ಪಿದನೋ || ೪೯

ವೃ|| ನೀಲನಭಸ್ಸ್ಥಳಾಚ್ಯುತಲಲಾಟತಟಚ್ಯುತರಕ್ತಧಾರೆಗ |
ಳ್ಸಾಲಿಡುತೊಕ್ಕು ಮಿಕ್ಕು ಪರೆದಂತಿರೆ ಪರ್ಬ್ಬಿದಸಂಜೆಗೆಂಪು ತ ||
ತ್ಕಾಲಕಪಾಲಪಾಣಿಧೃತಚಂದ್ರಕಪಾಲಮೆ ಪೀರ್ದ್ದುದೆಂಬಿನಂ |
ಬಾಲರಸಾಲಪಲ್ಲವಸಮುದ್ಯುತಿ ತದ್ಯುತಿ ಪಿಂಗಿತಾಕ್ಷಣಂ || ೫೦

ಅಮಿತಾಖಂಡಾಂತರಿಕ್ಷೋನ್ನತನುತಶಿವಲಿಂಗಾಂಘ್ರಿಯಂ ನೋಡಲುದ್ಯ |
ತ್ತಮುಮೆಂಬಾಸೂಕರಾಕಾರದ ಹರಿ ಧರೆಯೊಳ್ಪೊಕ್ಕವೋಲ್ಪೋಗೆ ತಲ್ಲಿಂ ||
ಗಮುಹಾಶೀರ್ಷಾಗ್ರಮಂ ನೋಡುವಜವದೆಮಳಾಳಾಂಗಮುಂ ತಾಳ್ದಜಂ ಸಂ|
ಭ್ರಮದಿಂ ಪಾರ್ವ್ವಂತೆಕಣ್ಗೊಪ್ಪಿದುದಮೃತಕಳಾಪೂರಿತಾಂಗಂಸುಧಾಂಗಂ||

ವ|| ಮತ್ತಂ

ಕಂ|| ಚೆನ್ನಾದುದಮೃತಕರಬಿಂ |
ಬನ್ನೋಳ್ಪರ ಕಣ್ಗೆ ಜೊನ್ನಮೆಂಬಮುಹೇಶಂ ||
ತನ್ನವಿಯುಚ್ಚಿಕುರದೊಳೆ ಸ |
ಮುನ್ನತಸಿತನೀರಜಾತಮಂ ಸೂಡಿದವೋಲ್ || ೫೧

ವೃ|| ಭಗಣಮೌಕ್ತಿಕಧರಾಭ್ರಕೃಷ್ಣನಂ |
ದಗಿಯಲಿಂದ್ರಹರಿದದ್ರಿಭಾಂಡದಿಂ ||
ತೆಗೆದು ತಾಳ್ದನವನೀತಪಿಂಡಮಂ |
ಬಗೆಯೆ ಪೋಲ್ತುದಮೃತಾಂಶುಮಂಡಳಂ || ೫೨

ವೃ|| ವ್ಯೋಮಶ್ರೀಪತಿಪಾಂಚಜನ್ಯಮುಡುಮಾರ್ಗಾಗಾರಮುಕ್ತಾಮಯೋ|
ದ್ದಾಮಶ್ರೀಕಳಶಂ ನಭೋಂಬುಧಿಸಿತಾಂಭೋಜಂ ವಿಯದ್ದಂತಿವ ||
ಕ್ತ್ರಾನೋದಾವಹಚಂದ್ರಕಾಂತಮುಕುರಂ ಚೆಲ್ವಾದುದಾಕಾಶವಾ |
ರಾವಾಜಾತಸಿತಾತಪತ್ರಮುವದಾತಂ ಬಿಂಬಮಬ್ಜಾರಿಯಾ || ೫೪

ಕಂ|| ಚಂಚಚ್ಚಕೋರಪಾಂಥ |
ಮ್ಮಾರ್ಂಚುವಸಂಭ್ರಮದಿನೀಂಟೆ ರಜನೀಸತಿ ಶೋ ||
ಭಾಂಚಿತಹಿಮಕರಕಲಶದಿ |
ನೇಂ ಚಂದ್ರಿಕೆಯೆಂಬಜಲವನೆರೆದಳೊ ನಭದೊಳ್ || ೫೫

ತಮವೆಂದು ವಿಧುಂತುದನಾ |
ಮಮನಿಟ್ಟದರಂಗರುಚಿಯುನಾಂತುದಿದೆಂದಾ ||
ಹಿಮರುಚಿ ಕರದಿಂ ಸದೆದಂ |
ತಿಮಿರಮನಿನಿಸುಳಿಯದಂತೆ ಬಿಡದೆಲ್ಲೆಡೆಯೊಳ್ || ೫೬

ಎಳವಳಿಕಿನ ಕರಗದೊಳು |
ಜ್ಜ್ವಳಜಳಮಂ ತೀವಿ ರಜನಿ ಪರಿಮಳಕೆಂದು ||
ತ್ಪಳಮಿಳಿಪಿದೊಡದು ತೋರ್ಪ್ಪವೊ |
ಲಳಿಮಳಿನಂ ಶಶಿಕಳಂಕವೋಲ್ ರಂಜಿಸಿತೋ || ೫೭

ವೃ|| ಭುವನಮನೆಲ್ಲಮಂ ಪುದಿದು ತೀವಿದಚಂದ್ರಿಕೆಯೆಂಬ ಪಾಲ್ಗಡ |
ಲ್ತವಕದಿನೆನ್ನ ಪುತ್ರನನಿಳಾಜನವೀಕ್ಷಿಸೆ ದೃಷ್ಟಿಪಾತದಿಂ ||
ನವೆದಪನೆಂದು ತೂಪಿರಿದಶೀಕರದಂತಿರೆ ತಾರಕಾಳಿಯೊ |
ಪ್ಪುವಪಣೆಗಿಟ್ಟಕಜ್ಜಳದ ಬೊಟ್ಟಿನಲೊಪ್ಪಿದುದಿಂದುಲಾಂಛನಂ || ೫೮

ತಿಮಿರೋದ್ಯದ್ಯಮುನಾತರಂಗಿಣಿ ಪಿತಂ ತಾನೆತ್ತ ಪೋದಂ ಗಡೆಂ |
ದು ಮಹಾದುಃಖದಿನೆಂಟುದಿಕ್ಕಿನೊಳೆ ನೋಡುತ್ತಿರ್ಪ್ಪದುಂ ಕೂಡೆ ಚಂ ||
ದ್ರಮನಾರಕ್ತತೆವೆತ್ತು ಮತ್ತು ದಿಸೆ ತಾತಭ್ರಾಂತಿಯಿಂದಪ್ಪಿದ |
ಳ್ಕ್ರಮದಿಂಗೆಂಬವೊಲಿಂಬುವೆತ್ತುದು ಕಳಂಕಂ ತತ್ಸುಧಾಧಾಮನಾ || ೫೯

ಗಿರಿಶಲಲಾಟಲೋಚನಧನಂಜಯನಿಂ ಪರಿದಗ್ಧನಾದಭಾ |
ಸುರಕುಸುಮೇಷುಪಂಕರುಹನಾಭನ ನಾಭಿಸಿತಾಂಬುಜಾತದೊಳ್ ||
ಮರಳಿ ಜಲಕ್ಕನುದ್ಭವಿಪನೆಂಬವೊಲೊಪ್ಪಿದುದಭ್ರಮಧ್ಯದೊ |
ಳ್ಕರಮೆಸೆದಿರ್ಪ್ಪಚಂದ್ರಮನ ನುಣ್ಗರೆ ನೋಳ್ಪೊಡದೊಂದುಚೆಲ್ವಿನಿಂ || ೬೦

ಕಂ|| ಇದು ಪೂರ್ವದಿಶಾವಧುವೆ |
ತ್ತಿದಶಿಮಣಿಮುಕುರಮಮೃತಕರಮಂಡಳಮು ||
ಲ್ತಿದು ಚಿಹ್ನಮಲ್ತು ಮಧ್ಯದೊ |
ಳೊದವಿದಮೂರ್ಪ್ಪೊಳವು ವಿಷ್ಣುಪದವಿಷ್ಣುವಿನಾ || ೬೧

ವೃ|| ಚಂದ್ರಿಕಾಜಲಧಿ ತೀವಿ ಲೋಕಮಂ |
ಸಾಂದ್ರಮಾಗಿ ನೆಗೆದುರ್ವ್ವೆ ಭೀತಿಯಿಂ ||
ಚಂದ್ರಮಧ್ಯವಟಪತ್ರದಲ್ಲಿ ಲ |
ಕ್ಷ್ಮೀಂದ್ರನಿರ್ಪ್ಪನೆನೆ ಲಕ್ಷ್ಮವೊಪ್ಪುಗುಂ || ೬೨

ಕಂ|| ದೆಸೆವೆಣ್ಗಳಂಗಮಂ ಮಿಗೆ |
ಮುಸುಕಿದತಿಮಿರಗ್ರಹಂಗಳಂ ಕೂರ್ಪ್ಪಿಂದೋ ||
ಡಿಸಿದಂ ಮೃಗಾಂಕಮಾಂತ್ರಿಕ |
ನಸಮಜ್ಯೋತ್ಸ್ನಾವಿಭೂತಿಯಂ ತಳಿದಾಗಳ್ || ೬೩

ಎರಳೆವರಿ ತನ್ನ ಕೋಡಿ |
ಟ್ಟೊರಸಿದೊಡೆ ಸುಧಾಂಗನಂಗಮಂ ಸೀಳ್ದೆಡೆಯಿಂ ||
ಸುಱಿದು ಪಸರಿಸಿತೊ ಪೊಸಪಾ |
ಲ್ಸರಿಯೆನೆ ಬೆಳ್ಜೊನ್ನಮಿಳಿದದೇಂ ಮುಸುಕಿದುದೋ || ೬೪

ಸ್ರ|| ಮಿಸುಪನಿಶಾನಿತಂಬಿನಿಗೆ ಬೆಳ್ಪುಡೆಯಾದುದು ಭಾಸುರೋಚಿಯಿಂ |
ಬಸವಳಿದೀಧರಾಂಗನೆಗೆ ಚಂದನಲೇಪನಮಾದುದಂಬುಜ ||
ಪ್ರಸರದಗಲ್ಕೆಯಿಂ ನೆಗೆದತುಂಬಿಗೆ ಮಲ್ಲಿಗೆಮಾಲೆಯಾದುದಾ |
ಪಸಿದಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ || ೬೫

ಮೊಗೆಮೊಗೆದೀಂಟಿ ಯೀಂಟಿ ತನುಮಧ್ಯಕೆ ತಳ್ವದೆ ಸುತ್ತಿಸುತ್ತಿ ಮೇ |
ಣಿಗೆ ಮಿಗೆ ಸೂಡಿಸೂಡಿ ಲಲಿತಾಂಗದೊಳೊಯ್ಯನೆ ಪೂಸಿಪೂಸಿ ಮೆ ||
ಲ್ಲಗೆ ಬಿಸದೆರ್ಬ್ಬಿಯೆರ್ಬ್ಬಿ ಬಗೆದಂದು ಮುಳುಂಗಿಮುಳುಂಗಿ ಕೌತುಕಂ |
ಬಗೆಗೊಳೆ ನೋಡಿನೋಡಿ ನಲಿದತ್ತಬಳಾಜನಮಚ್ಚಜೊನ್ನಮಂ || ೬೬

ಧರೆಯೆಲ್ಲಂ ಚಾರುಚಂದ್ರೋಪಳವಿರಚಿತಮಾದಂತೆ ತೋರ್ದ್ದತ್ತು ಮೇಲಂ|
ಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದಾಶೋ ||
ತ್ಕರಮೆಲ್ಲಂ ಚಂದನಾಲೇಪನದೆ ಬಳಿದವೋಲೊಪ್ಪುತಿರ್ದ್ದತ್ತು ಧಾತ್ರೀ |
ನರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದ್ದರ್ || ೬೭

ಗಗನಮೆನಿಪ್ಪಪಾಳ್ಗೊಲದೊಳರ್ಕಸಮುದ್ಧೃತಿಗೈದು ಸಂಜೆಯೆಂ |
ಬಗಿನಿಯನಿಟ್ಟು ಮರ್ಚಿನಿಪಗೊಬ್ಬರವಂ ತಳಿದಲ್ಲಿ ಚೆಲ್ಲಿ ತಾ ||
ರಗೆಗಳೆನಿಪ್ಪ ಬಿಳ್ತುಗಳನಂತವಕೈಂದವಬಿಂಬರೌಪ್ಯಕಂ |
ಭಗತಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರಂ || ೭೮

ಇದು ಚಂದ್ರಾತಪಮಲ್ತು ತೀವಿದಸುಧಾವಾರಾಕರಂ ಮೇಲೆ ತೋ |
ರ್ಪುದಿದಂಭೋಜವಿರೋಧಿಮಂಡಳಮುಮಲ್ತಲ್ಲೀಸುತ್ತಿರ್ಪಂಜೆ ಮ ||
ತ್ತಿದು ತಾಂ ಲಾಂಛನಮಲ್ತು ತದ್ವದನದೊಳ್ಕಚ್ಚಿರ್ದನೀಲಾಬ್ಜಮಿಂ |
ತಿದು ತಾರಾತತಿಯಲ್ತು ಪಕ್ಷಯುಗಳ ವ್ಯಾಕೀರ್ಣಬಿಂದುವ್ರಜಂ || ೭೯

ವ|| ಎಂಬಸಂಭ್ರಮಮನಪ್ಪುಕೈದೊಪ್ಪುವ ಸಾಂದ್ರಚಂದ್ರಿಕಾಸಂಪದಮನಭೀಕ್ಷಿಸಿ

ವೃ|| ಅವಧರಿಸೆನ್ನ ಬಿನ್ನಪವನುರ್ವಿಪ ಪರ್ವಿದಪಾರ್ವಣೇಂದುಸಂ |
ಭವನವರುಂದ್ರಚಂದ್ರಿಕೆಯೊಳಾಂಪುದು ರಾತ್ರಿವಿಹಾರಕೇಳಿಯು ||
ತ್ಸವಮನೆನುತ್ತೆ ಕೈಮುಗಿದ ನಾಗರಿಕಂಗುಡಲಿತ್ತು ತಳ್ವದೇ |
ಳ್ದವನಿಪರೂಪಪಂಚಶರನೋಲಗದಿಂ ನಡೆತಂದನಳ್ತಿಯಿಂ || ೮೦

ವ|| ಅಂತೈತಂದಂತಃಪುರಮಂ ಪೊಕ್ಕು ಸುಗಂಧೋದಕಕೃತಸ್ನಾನನುಂ ವಿಭೂತಿರುದ್ರಾಕ್ಷವಿಳಸಿತಕಳೇವರನುಂ ಪರಿರಚಿತಶಿವಲಿಂಗಸಮರ್ಚನತತ್ಪ್ರಸಾದಪಾದೋದಕಾಸ್ವಾದನಸಂತುಷ್ಟಹೃದಯನುಂ ಸಾರಕರ್ಪೂರಸುರಭಿಪರಿಮಿಳಿತತಾಂಬೂಲನಿಜಮುಖಾಂತರ್ವಳಯನುಂ ಸರಸಪರಿಮಳಮಧುರಮಾಲತೀಮಾಲಿಕಾಲಂಕೃತಮನೋಜ್ಞಕಬರೀಭರನುಂ ಮೃಗಮದಲಲಾಮಲಸಿತಲಲಾಟತಟನುಮಮಳಮೌಕ್ತಿಕಕರ್ಣಾಭರಣಕಮನೀಯಮುಖಮಂಡಳನುಂ ಭಗಣಭಾಸುರರುಚಿನಿಚಯನಿಚಿತರುಚಿರತರ ತಾರಾಹಾರರಮಣೀಯವಿತತೋರಸ್ಥಳನುಮತಿವಿಶದವಜ್ರಮಣಿಖಚಿತಕಂಕಣಾಭಿರಾಮಕರಾಗ್ರನುಮನೇಕಮಣಿಗಣಾಗಣಿತಭೂಷಣಭೂಷಿತಾವಯವನುಮಭಿನವಕಸ್ತೂರಿಕಾಕಾಶ್ಮೀರಕದಂಬಕರ್ದಮಾನುಲಿಪ್ತವಕ್ಷಸ್ಸ್ಥಳನುಮತಿನವೀನದಿವ್ಯಾಂಬರಾವೃತಸೌಂದರ್ಯವಿಗ್ರಹನುಮಾಗಿ

ನಾಗರಿಕಾದಿಭೋಗಸಖರಿಂದನುಕೂಲದಕ್ಷಿಣದುಷ್ಟಶಠರೆಂಬ ಶೃಂಗಾರರಸಪ್ರಧಾನನಾಯಕರಿಂ ಧೀರೋದಾತ್ತಮುಖಸರ್ವರಸಪ್ರಧಾನನಾಯಕರಿಂದಾವೃತನಾಗಿ ರಾಗದಿಂ ಸಚಿವಸುತಸಮೇತಂ ಚಂದ್ರಿಕಾವಿಹರಣಂಗೈಯಲ್ಕೆನಂದೆಂದುನೃಪೇಂದ್ರಚಂದ್ರ ನಿಜಕಟಾಕ್ಷವೀಕ್ಷಣಸಾಂದ್ರಚಂದ್ರಿಕಾದ್ವಿಗುಣಿತ ಚಂದ್ರಿಕಾವಿಳಾಸನುಮಾಗಿ ಮದನಮದಮಧುಕರಮಧುರ ಮಾಲತೀಮಾಲಾನುಕಾರಿಯುಂ ಸೂಳೆಗೇರಿಯುಂ ಪುಗುತಂದಿಂದ್ರದಿಗ್ಭಾಗದೊಳಂದಂಬಡೆದಿಂದುಬಿಂಬಮನವಲೋಕಿಪಾಗಳ್ನಾಗರಿಕಂ ಕೈಮುಗಿದಿಂ ತೆಂದಂ

ಕಂ|| ಜೊನ್ನಂಪಾಲ್ಗಡಲಂತಿದೆ |
ಜೊನ್ನೊಡಲಂ ನಳಿನನಾವೆಯಂತಿದೆ ಚಿಹ್ನಂ ||
ತನ್ನಂಪೆತ್ತಳ ತವರೆನು |
ತುಂ ನೋಡಲ್ತಳರ್ವಮದನನಂತಿದೆ ನೃಪತೀ || ೭೧

ವ|| ಅಂತುಮಲ್ಲದೆ

ವೃ|| ಸಂಜೆಗೆ ರಾಗಮಾಗೆ ನಗೆ ನೈದಿಲಮಂದತಮೋಸಿತಾಂಬರಂ |
ತಾಂ ಜರಿದೊಪ್ಪೆ ರಾತ್ರಿಗುಡುಘರ್ಮಪಯಃಕಣಮೇಳೆ ಮೈಯೊಳೆ ||
ತ್ತಂ ಜವದಿಂ ನಭಸ್ಸ್ಥಳಿಗೆ ಸೋಂಕಿ ಕರಾಗ್ರದೆಕಣ್ಗೆ ರಂಜಿಸೀ |
ಮಂಜುಳಚಂದ್ರಮಂಗೆ ಮಹಿಯಲ್ಲಿ ಕಳಾಸಿಧಿನಾಮನೊಪ್ಪದೇ || ೭೨

ವ|| ಎನೆ ಮುಗುಳ್ದು ಮತ್ತಮೊರ್ವ್ವನಿಂತೆಂದಂ

ವೃ|| ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ |
ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ |
ನಿಜದಿಂದಬ್ಜನಭಂಗಲಕ್ಷಣಯುತಂ ತಾನಾಗಿ ದೋಷಾಕರಂ |
ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ || ೭೩

ವ|| ಎನೆ ಕೇಳ್ದು ಮಿತವಚನನಿಂತೆಂದಂ

ವೃ|| ದ್ವಿಜರಾಜಾಭಿಧೆಯೊಪ್ಪದೇ ಸಸಿತಪಕ್ಷಂಗೇನನಂತಾಶ್ರಯಂ |
ಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾನಂ ಘನಶ್ರೀಯುತಂ ||
ಗೆ ಜನಂ ಮಚ್ಚದೆಯಬ್ಜನಾಮಮನೆ ದಲ್ದೋಷಾಕರಾಹ್ವಾನಮೀ |
ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇನಲ್ಲನೇ || ೭೪

ವ|| ಎಂದು ಮತ್ತಮಿಂತೆಂದಂ

ಕಂ|| ಕುವಲಯುಕಧಿಪತಿಯುಪ್ಪನೆ |
ತವೆ ಲಕ್ಷಣಯುಕ್ತನಲ್ಲದಿದೊರ್ಡೆ ರಾಜಂ ||
ಕುವಲಯುಕಧಿಪತಿಯುಪ್ಪನೆ |
ತವೆ ಲಕ್ಷಣಯುಕ್ತನಲ್ಲದಿದೊರ್ಡೆ ರಾಜಂ || ೭೫

ಸುರತಿವರಚಕ್ರರುಚಿವಿ |
ಸ್ಫುರಿತಸಿತದ್ಯುತಿ ಮಹೋತ್ಪಳಪ್ರಿಯಮಿತ್ರಂ ||
ವರಮಂಡಳಾಂಕನೀಹಿಮ |
ಕರೆನೆಸೆದಪನಾದಿನೇಶನೆನೆ ನೋಡರಸಾ || ೭೬

ವ|| ಎಂಬಚತುರವಚನನಿಚಯಮಂ ಕೇಳ್ದು ಮಚ್ಚುರ್ತ್ತುಂ ಮನುಜಮ ನೋಜನಲ್ಲಿಂ ಮುಂದಣ್ಗೆ ನಡೆತರುತ್ತಿರೆ ತೊಟ್ಟನೆ ಕಟ್ಟಿದಿರೊಳ್

ವೃ|| ನುತವಾರಸ್ತ್ರೀಕುಚಾಗ್ರಚ್ಯುತಮೃಗಮದಕಾಶ್ಮೀರಕರ್ಪೂರಧೂಳೀ |
ಕೃತಧೂಳೀಕೇಳಿಚಂಚದ್ಭ್ರಮರಚಲಶಿಖಂಡಂ ತದೀಯಾಲಯಾಲಂ ||
ಬಿತಘಂಟಾನಾದಕೋಲಾಹಲರುತಿವಿದಳತ್ಕೈರವಾನೀತಮಧ್ವಂ |
ಚಿತಲಾಲಂ ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ ||೭೭

ವ|| ಅಂತು ಸುಳಿವಮಂದಾನಿಲನಂ ಮನದಳ್ಕರಿಂದಾಲಿಂಗಿಸುತ್ತುಂ ಬರೆವರೆ ಮದನಮಹಾರಾಜನ ಮನ್ನಣೆಯ ವಿಳಾಸಿನಿಯರೊಂದುಗೂಡಿ

ವೃ|| ತರಳಾಪಾಂಗಪ್ರಕಾಶಂ ಕೆದರೆ ಮದನಬಾಣಂಗಳಂ ಮಂಜುಮಂಜೀ |
ರರವಂ ಕಂದರ್ಪಬಾಣಾಸನಗುಣರುಚಿಯಂ ಸೂಸೆ ಮಂದಸ್ಮಿತಂ ಶಂ ||
ಬರಸಂಸ್ಪೃತ್ಕೀರ್ತಿಯಂ ಮುಂತಿಡೆ ರತಿಪಲಸತ್ತೇಜಮಂ ಬೀರೆ ಬಿಂಬಾ |
ಧರ ರಾಗಂ ರಾಗಮಂನೋಳ್ಪರೊಳೆಪಡೆಯುತುಂ ಪೋಯ್ತು ಪಣ್ಯಾಪ್ರತಾನಂ||

ವ|| ಅದನಾನಾಗರಿಕನರಸಂಗೆ ತೋರುತ್ತೈತರುತ್ತಿರೆಯಿರೆ

ವೃ|| ಮನೆಮನೆದಪ್ಪದೊಪ್ಪಿದುದು ಮಾರನ ಪೆಂಪು ಮಹೋತ್ಪಲಾಸ್ತ್ರಕೀ |
ರ್ತನೆ ಮಕರಾಂಕಸಂಭ್ರಮಮನಂಗನಕೂರ್ಪುರ್ಮನೋಜ್ಞಪುಷ್ಪಧ ||
ನ್ವನ ಬಿರುದಾಂಕಮಾಲೆ ಮಧುಮಿತ್ರನ ಪೂಜೆ ಮನೋನಿವಾಸನಿಂ |
ಪಿನಕಥೆ ಮನ್ಮಥಕ್ಷಿತಿಪನಾರ್ಪು ಮನೋಜನ ಮಂಗಳೋತ್ಸವಂ || ೭೯

ವ|| ಮತ್ತಮಲ್ಲಿ

ವೃ|| ನಗೆವೆಳ್ಪಿಂಬೆಳಜೊನ್ನಮಂ ಪರಪಿ ಕಾಂತಾಸ್ಯಾಂಬುಜಾತಂಗಳಂ |
ನಗಿಪಭೂಷಣರೋಚಿರಾತಪಮನಾಗಳ್ಬೀರಿ ಕೂತ್ರೋಪರ ||
ಕ್ಷಿಗಳೆಂಬುತ್ಪಳಮಂ ಮರಲ್ಚುವರಜಸ್ರಂ ತಮ್ಮ ಮೂಗೆಂಬಸಂ |
ಪಗೆಯಿಂ ಮುಚ್ಚಿರ್ಪರಾಣ್ಮದುಂಬಿಗಳನೇನಂ ಮಾಡರಬ್ಜಾಕ್ಷಿಯರ್ || ೮೦

ವೃ|| ನಗೆಗಣ್ಣೋ ನವನೀಲನೀರರುಹಮೋ ರಾಕಾನಿಶಾಕಾಂತನೋ |
ಮೊಗಮೋ ಚೆಂದುಟಿಯೋ ರಸಾಲದಳಮೋ ಧಂಮಿಲ್ಲಮೋ ಕಾರಕ |
ಮ್ಮುಗಿಲೋಪೊಂಗಳಸಂಗಳೋ ಮೊಲೆಗಳೋ ಕುಂಭೀಂದ್ರಕುಂಭಂಗಳೋ|
ಬಗೆಗೊಳ್ವೀಜಘನಂಗಳೋ ಎನೆ ವಿಟವ್ರಿಭ್ರಾಜಿಕುಂ ವೇಶ್ಯೆಯರ್ || ೮೧

ಕೊರಲೊಳ್ಕೊಂಕಿನ ಮಾತು ಮುದ್ದುಮೊಗದೊಳ್ಮಂದಸ್ಮಿತಂ ನೋಡದಂ|
ತಿರೆ ನೋಳ್ಪೊಂದುವಿಡಾಯಮಕ್ಷಿಯೊಳೆ ಪುಚ್ಚೊರ್ಳ್ಚುಬ್ಬು ಸೌಗಂಧಬಂ||
ಧುರಮಂದಶ್ವಸಿತಂ ಸುನಾಸಿಕೆಯೊಳೆಂದುಂ ಯೌವನಶ್ರೀವಿಳಾ|
ಸರುಚಿಸ್ಫೂರ್ತಿ ನಿಜಾಂಗದೊಳ್ಮೆರೆಯೆ ಕಣ್ಗೊಪ್ಪಾದರಬ್ಜಾಕ್ಷಿಯರ್ || ೮೨

ನಗೆನೋಟಂ ಪೊಸಮಾತು ರೀತಿ ಗಮಕಂ ಗಾಂಭೀರ್ಯಮೌದಾರ್ಯಮ|
ಜ್ಜಿಗಮುತ್ಸಾಹಮಲಂಪು ಸೊಂಪು ಸೊಗಸೊಯ್ಯಾರಂ ಬೆಡಂಗಕ್ಕರ ||
ಪ್ಪುಗೆಚೆಲ್ಲಂ ಚೆದುರೋಜೆ ಚಾಟುತನಮಂದಂ ಬಂದವೊಳ್ವೇಟಮಿ |
ಜ್ಜಿಗೆಸಂದೊಂದುವ ಕೂಟಮೆಲ್ಲಮವರ್ಗೇಂ ನ್ಯೈಸಂದು ಮುಚ್ಚಿರ್ದುದೋ||

ವ|| ಮತ್ತಮಿಂತೊಪ್ಪುವಸಿಂಗರದ ಸೀಮೆಯೆನಿಪಭಾಮಿನಿಯರೊಳೊ ಪ್ಪುವಕಾಮಿನಿಯೊತ್ತೆಗೊಳಲೆಂದು ನಿಜಗೃಹದ್ವಾರದ ಮಣಿಮಯಸ್ತಂಭಮಂ ನೆಮ್ಮಿ

ವೃ|| ನಗೆಮೊಗಮಿಟ್ಟಕುಂಕುಮದಬೊಟ್ಟು ತುರುಂಬಿದಜಾದಿ ದೋರೆವ |
ಲ್ಮೃಗಮದದಣ್ಪು ತೊಟ್ಟನವಕಂಚುಕಮುಟ್ಟಿಸಿತಾಂಬರಂ ಕರಂ ||
ಝಗಝಗಿಪಜ್ಜರನ್ನದೊಡವೊಪ್ಪುವಮಾಣಿಕಗೊಪ್ಪುಜೊಲ್ಲೆಯಂ |
ಬಗೆಗೊಳಿಸಿರ್ಪ ನೋಮ್ಮುಡಿ ಘನಸ್ತನಮೊಪ್ಪಿರೆ ನೀರೆ ತೋರಿದಳ್ || ೮೪

ವ|| ಮತ್ತಮೊರ್ವ್ವಳಗಣ್ಯಲಾವಣ್ಯ ತಾರುಣ್ಯವತಿ

ವೃ|| ಬಡನಡು ಬಟ್ಟಬಲ್ಮೊಲೆ ಒಳಲ್ಮುಡಿ ನಲ್ನುಡಿ ನೀಳ್ದಕಣ್ಮರ |
ಲ್ನಿಡುವೆರಲಿಂಪು ಸೊಂಪಿಡಿದಚಂದುಟಿ ನುಣ್ದೊಡೆ ಜೆಲ್ವುದಾಳ್ದಮೆ ||
ಲ್ಲಡಿ ಕಡುಬಣ್ಪುವೆತ್ತ ಪೊರವಾತ್ತುರುಗಿರ್ದ್ದವೆ ಸಣ್ಣಪುರ್ಬ್ಬುತೆ |
ಳ್ದೊಡೆ ಸುಲಿಪಲ್ಗಳಂದದಕದಂಪಿರದೊಪ್ಪಿರೆ ಕಣ್ಗೆ ತೋರಿದಳ್ || ೮೫

ವ|| ಮತ್ತಮೊರ್ವ್ವಳಪೂರ್ವಸೌಂದರ್ಯ ಸೌಭಾಗ್ಯವತಿ

ವೃ|| ತೊಳೆದಜವಾದಿಯಿಂ ಮುಡಿದಕಮ್ಮರಲಿಂ ಪಿಡಿದಂಬುಜಾತದಿಂ |
ಜಡಿವಸಿತಂಬದಿಂ ಸುಡಿವಕೈಗಿಳಿಯಿಂ ಕೊಡದಂದವಾಗಿ ಪೆಂ ||
ಪಡರ್ದಕುಚಂಗಳಿಂ ಕುಡಿತೆಗಂಗಳಿನಿಂಪಿಡಿದಾಸ್ಯಬಿಂಬದಿಂ |
ಬಡನಡುವಿಂದೆ ಜೆಲ್ವಿಡಿದಪೆಣ್ಮಣಿಯಂ ನಡೆನೋಡಿದಂ ನೃಪಂ || ೮೬

ವ|| ಮತ್ತಮೊರ್ವ್ವಳ್ಸ್ಫುತ್ತಸ್ತನೆ ಚಿತ್ತಜನಮತ್ತಕಾಶಿನಿಯಂತೆ ಮುತ್ತಿನ
ಮತ್ತವಾರಣಮುಂ ತ್ರಿಭಂಗಿಯಿಂ ನೆಮ್ಮಿನಿಂದು

ವೃ|| ಮೇಳಂಗೈದುರ್ವ್ವಿಸುತೆಸುತಿಯುಂ ವೀಣೆಯುಂವಕ್ಷದೊಳ್ಮೇ |
ಣ್ಮಾಳುತ್ತುಂ ಪೇವೆರ್ಮ್ಮಲೆಗೆ ಮೊಲೆ ತಾಂಪುಟ್ಟಿತೆಂಬಂತೆ ತೋರಲ್ ||
ಕೇಳಲ್ಕೆಂಗೈತರೆ ವಿಟಮೃಗಂ ಬಾಜಿಸುತ್ತಿರ್ದ್ದಳೊರ್ವ್ವ |
ಳ್ವೇಳಾವಳ್ಯಾದ್ಯಖಿಳವಿಳಸದ್ರಾಗಮುಂ ರಕ್ತಿಯಿಂದಂ || ೮೭

ವ|| ಅಲ್ಲಿ ಪೆರಳೊರ್ವ್ವಳ್ವಾಣೆ ವೀಣೆಯುಂಶ್ರುತಿಗೈದು ಸೋರೆಯುಂ ಸ್ತನಾಗ್ರ
ದೊಳಾಂತಿ ಸರಳತರಕರಾಂಗುಲಿಯುನಿಟ್ಟು

ಕಂ|| ಸುಲಲಿತೆ ವರಾಳಿಕುಂತಳೆ |
ವಿಲಸತ್ಕಲ್ಯಾಣಿ ಶಂಕರಾಭರಣಸಮು ||
ಜ್ಜ್ವಲವೇಣಿ ರಾಗರಂಜಿತೆ |
ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ || ೮೮

ವ|| ಅದಂ ಕೇಳ್ದು ಮಚ್ಚುತ್ತುಂ ಸಂಗೀತಸರ್ವಜ್ಞಂ ಮುಂದಣ್ಗೆ ನಡೆ
ತರುತ್ತುಮಿರೆಯಿರೆ ನಿಜಗೃಹದ ಮುಂದಣಮಣಿಯಾಂಕಣ ದೊಳ್ನಿದಗ್ದೆಯನ್ನೆ

ಕೆದೆಳವೆಣ್ಗಳೊಡಗೂಡಿ ಗಾಢಿಯಿಂ ನಿಂದು ಶಶಿಕಾಂತದೊರಲೊಳ್ಕಿಂಬರಲ್ಕೇಸ
ಕ್ಕಿಯುಂ ಪೊಯ್ದಿಂದ್ರನೀಲದೊನಕೆಯುಂ ನಿಡುದೋಳ್ಗಳಿಂನೆಗಪಿ

ತ್ರಿಪದಿ|| ಮದನಂಗೆ ಜಯಮಕ್ಕೆಮಧುಗೆ ಸಂಪದಮಕ್ಕೆ |
ಬಿದುಗದಿರಿಂತು ನೆಲಸಿರ್ಕೆ ರತಿಗೆ ಸಂ |
ಮದಮೆಂದು ತೊಲಗದಿರುತಿರ್ಕೆ ||

ಮನದಿಚ್ಛೆಯಿಂ ಮುಂಚಿ ತನುವಿತ್ತು ನಲ್ಲರೊಂ |
ದನ್ನುವರಿದೊಂದಿ ಸವಿದೋರ್ಪ್ಪನೂಳೆಯುರಾ |
ಮನೆಯು ಮುಂದಿರದೆ ಸುರಧೇನು || ೯೦

ಸುರತಕ್ಕಿಚ್ಛೈಸಿ ಮೇಲ್ವರಿವಕಾಂತನ ಕಂಡು |
ಕರಗಿ ಕಾತರಿಸಿ ನೆರೆವಸೂಳೆಯು ಮನೆ |
ಸಿರಿಗಂಬುಜಾತಮೆನಿಸದೇ || ೯೧

ಪೊರಮಿಂಚುಗೈವನಂ ಬರುವಾತುಗಾರನಂ |
ಕರುಬನಂ ಕಪಟಹೃದಯನಂ ಧೂರ್ತನಂ |
ತೊರೆಯುದುದೆಗ್ಗತನವಲ್ತೆ || ೯೨

ಒರ್ವ್ವನೊಳ್ವಂಚಿಸಿ ಕೊರ್ವ್ವಿದಬೇಟವು |
ನೊರ್ವ್ವನೊಳಿಲ್ಲದದೊರ್ಡಂ ತನಿವೇಟ |
ಮುರ್ವ್ವಿಸಿ ಪಣವಂ ಪಡೆವುದು || ೯೩

ತಾನೇ ಮೇಲಿಕ್ಕದೆ ಮಾನವಂ ಬಲಿದು ಕಾ |
ಮ್ಹಾನುರಾಗತೆಯು ಮನಕಿತ್ತು ಮೇಲಿಕ್ಕ |
ಲಾನೇಮವರಿದು ನೆರೆವುದು || ೯೪

ನಗೆನೋಟನುಡಿಗಳಿಂ ತೆಗೆದು ಭುಜಂಗರ |
ಬಗೆಯು ಬಂದವರೊಳೊಡಗೂಡಿ ಮೋಹಿಪ |
ಳ್ಮುಗುಳಂಬನರಸಿಗೆಣೆಯಲ್ತೆ || ೯೫

ಸ್ತನದ ಬಣ್ಣನೆ ನೋಡಿ ಮನಮಿಕ್ಕುವರ್ವ್ವಿಟ |
ರ್ಕ್ಕನಕಪಂಕಜದ ಬಿರಿಮುಗುಳನೆ ನೋಡಿ |
ಮನಮಿಕ್ಕುವಂತೆ ಮರಿದುಂಬಿ || ೯೬

ಚದುರಂಗನೆತ್ತಮಿಂಪೊದವಿದಪಾಡು ಸ |
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪದಿ ||
ೞ್ದಸೂಳೆವನೆಯೆ ಬರುವನೆ || ೯೭

ವ|| ಎಂದು ಸುವ್ವಿವಾಡನೆವದಿಂ ವೇಶ್ಯಾನೀತಿಯನೆಳವೆಣ್ಗಳ್ಗುಪದೇಶಿಪ ವಿದಗ್ಧೆಯರ ವಿಳಾಸಮನಿಳಾಪತಿತಿಳಕಂ ನಿರೀಕ್ಷಿಸುತ್ತುಂ ಬರುತ್ತಿರೆ ಮುಂದೊಂದೆಡೆಯಲ್ಲಿ

ವೃ|| ಮೊಳೆವೆಳಲಜ್ಜೆವೋೞೆಪಮುಗುಳ್ಮೊಲೆ ಮುದ್ದಿನಿವಾತು ಮಿಂಚನು |
ಜ್ಜ್ವಳಿಸುವಚೆಲ್ಲೆನೋಟಮಳಿಕುಂತಳಮುಜ್ಜ್ವಳಕಾಯಕಾಂತಿ ಮಂ ||
ಜುಳಮಧುರಾಧರಂ ಮಿಸುಪಸುಣ್ಗದಪುಣ್ಮವಬಾಸೆ ಬೇಟಮಂ |
ಬಳೆಯಿಸಿ ನೋಳ್ಪರೊಳ್ಮರೆವಮುಗ್ಧೆಯನೀಕ್ಷಿಸಿದಂ ನರೇಶ್ವರಂ || ೯೮

ವ|| ಆಗಳ್ವಿಟನಿಂತೆಂದಂ

ವೃ|| ನೋಡಿಡೊಜಾಗಳಂತೆ ತಲೆವಾಗುವಸೋಡದೊಡೊಲ್ದು ನೋಳ್ಪಮಾ |
ತಾಡಿಸೆ ಸುಮ್ಮನಿರ್ಪನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಚೆಯಿಂ ||
ಕೂಡಲೊಡರ್ಚೆ ಮೈದೆಗೆವಗಲ್ದಿರಲೊಯ್ಯನೆ ಸಾರ್ವಮುಗ್ಧೆಯೇಂ |
ಮೊಡಳೆ ಮಚ್ಚಿದೋಪನ ಮನಕ್ಕೆ ಮನೋಜಮಹೋತ್ಸವಂಗಳಂ || ೯೯

ವ|| ಎಂಬನುಡಿಗೇಳ್ದವಂ ತನ್ನನುಭವಮಂ ಪ್ರಕಟಿಸಿದಪನೆಂದು ನಸುನಗುತ್ತಲ್ಲಿಂ ತಳರುತ್ತಿರೆ ಮತ್ತೊಂದೆಡೆಯೊಳೊರ್ವಮುಗ್ಧೆಯೊಳಗೊಳಗೆ ಬಳೆದಳವಿಗಳಿದಪಿನಹಾನಳನಿಂದಳವಳಿದು ಕಳವಳಿಸಿ ಕಳೆಗುಂದಿದಂದಮಂ ನೆವಮಿಟ್ಟು ಮರಸಿ ಧೈರ್ಯಂಗುಂದದಿರೆ ಕೆಳದಿ ತಿಳಿದಿಂತೆಂದಳ್

ವೃ|| ಬೆಳರ್*ಗಂಪಂ ತಳೆದಿದ್ದರ್ಚಂತುಟಿದಳಿನ್ನಿಸ್ಸಾರಮಾದತ್ತು ಮೈ |
ಗಳಿ ಕಂಪಂ ಪಡೆಯಲ್ಕೆಬಂದು ಪೆರಪಿಂಗುತ್ತಿರ್ಪ್ಪದೀನಿನ್ನ ಸು ||
ಯ್ಗಳೆ ತಾಗುತ್ತಿರೆ ಕೈಯೊಳಾಂತಕಮಳಂ ಕಂದಿತ್ತಿದೇಂ ಕಾಂತೆ ನಿ |
ನ್ನಳವಂ ಪೇಳೆನೆ ನೀಳ್ದಕಣ್ಮಲರ್*ಗಳಿಂ ಬಾಷ್ಪಾಂಬುವಂ ತುಂಬಿದಳ್ || ೧೦೦

ವ|| ಅಂತು ಕಣ್ಣೀರ್ಗಳಂ ತುಂಬಿ ತನ್ನೊಳಗನರಿದಾಪ್ರಿಯವಯಸ್ಯೆಯೊ
ಳ್ಮರಸಲಾಗದೆಂದಿಂತೆಂದಳ್

ವೃ|| ಎನಗಿನ್ನಾರ್ಹಿತೆಯುಸ್ಸರೋಜಮುಖಿ ಕೇಳ್ನಿನ್ನಿಂದೆ ನೀಂ ಪೋಗಿ ಕಾಂ |
ತನೊಳೋರಂತಿಸಿವಾತನಾಡಿ ಮುನಿಸಂ ಬೇಕ್ಕೆರ್ದು ನೇಹಂ ಮನ ||
ಕ್ಕನುವಪ್ಪಂತಿರೆ ಮಾಡಿ ತಳ್ವದೊಡಗೊಂಡೈತಪ್ಪುದೆಂದಂದು ಕಾ |
ಮಿನಿ ಜನ್ನೆದಿಲಮಾಲೆಗೂಡಿ ಮಣಿಹಾರಂಗೊಟ್ಟು ತಳ್ತಪ್ಪಿದಳ್ || ೧೦೧

ವ|| ಅಲ್ಲಿಂ ಬಳಿಯಿನವಳ್ನಿಜಸಖಿ ಸಖನಿರ್ದೆಡೆಗೆ ಬಂದು

ಕಂ|| ಮುಗ್ಧೆ ಭವದ್ವಿರಹದೊಳೆ ವಿ |
ದಗ್ಧೆಯೆ ತಾನಾದಳಿಂದು ನೀಂ ನೆರೆದೊಡೆ ಕೇ ||
ಳ್ಸ್ನಿಗ್ಧತೆಯಿಂದೆ ವಿದಗ್ಧೆಯೆ |
ಮುಗ್ಧೆಯೆನಿಪ್ಪಳ್ಬಳಿಕ್ಕಿದೇನಚ್ಚರಿಯೋ || ೧೦೨

ವೃ|| ಇದು ಚಿತ್ರಂನಿನ್ನ ಶೈತ್ಯಾಸ್ಪದಹೃದಯದೊಳೊನ್ಮೋರ್ವಮ್ಮೆತಾನಿರ್ದುದೆಂದಂ|
ದದೆ ಕಂದಿರ್ದಳ್ಭವದ್ವಲ್ಲಭೆಯವಳ ವಿಯೋಗಾಗ್ನಿಸಂತಪ್ತಚಿತ್ತಾ ||
ಗ್ರದೊಳಿರ್ದುಂ ನೀನಜಸ್ರಂ ಕೊರಗಿದುದಿನಿತಿಲ್ಲಂಗಜಂ ಪಕ್ಷಪಾತಾ |
ಭ್ಯುದಯಕ್ಕಿಂಬಾದನೆಂದೆಂಬಳಪೊಸನುಡಿಗೇಳ್ದೆದಿದಂ ಕಾಂತನಾಗಳ್ ೧೦೩

ವ|| ಅನಂತರಂ

ವೃ|| ಬರೆತೆಗೆದಪ್ಪಿ ಬಾಯ್ದೆರೆಯನೊಯ್ಯನೆ ಚುಂಬಿಸಿ ಮುದ್ದುಗೈದು ಮೋ |
ಹರಸಮನಂತರಂಗದೊಳಮುಚ್ಚಿ ಸಿಮುಚ್ಚಿ ನಖಕ್ಷತಂಗಳಂ ||
ಗುರುಕುಚದಲ್ಲಿ ಸಕ್ಕಳೆಗಳುಣ್ಮುವತಾಣಮನಂಟಿ ಸಾರ್ದು ಸಾ |
ದರಮುಚಿತೋಕ್ತಿಯಿಂ ನುಡಿದು ಪೊಂಪುಳಿಯಿಂ ಪೊದಿಸುತ್ತೆನಲ್ಲಳಾ ೧೦೪

ನುಡಿನುಡಿಗೊಮ್ಮೆ ಮುದ್ದಿಸಿಮುಖಾಂಬುಜಮಂ ನಡೆನೋಡಿಚುಂಬಿಸು |
ತ್ತೊಡನೊಡನಪ್ಪಿ ನುಣ್ಗುರುಳನೊಯ್ಯನೆ ತಿರ್ದಿಪೊದಳ್ದಲಜ್ಜೆ ಜೇ ||
ರ್ಪುಡೆ ಪಡೆದಲ್ಲಿ ಕಾತರಮನಂದವಳೊಳ್ಕಳೆವೆತ್ತು ಕಾಣ್ಕೆಯಿಂ |
ದಡಿಗಡಿಗುರ್ವೆ ಮನ್ಮಥರಸಂ ನೆರೆದಂ ಮನದನ್ನನೊಲ್ಮೆಯಿಂ || ೧೦೫

ವ|| ಇಂತು ನೆರೆದನಂತರಂ ರತಾಂತಶ್ರಾಂತಿಯಂ ತೀರ್ಚ್ಚಲೆಂದು ನೆಲೆವಾಡದೊಳ್ನಿಂದೆಳಗಾಳಿಗೆರ್ದೆಗೊಟ್ಟು ನಿಂದಮುಗ್ಧೆಯರಂ ನಾಗರಿಕನರಸಂಗೆ ತೋರುತ್ತುಮಿರೆ ಮುಂದೊಂದೆಡೆಯೊಳೊರ್ವ್ವಳೆಳವರೆಯುದನಳಿನಾಕ್ಷಿ

ವೃ|| ಕನಕಸರೋಜಕೋರಕಸಮುಸ್ತನಮಂಡಳಮಧ್ಯದಲ್ಲಿ ಮಾ |
ನಿನಿ ಮನದನ್ನನಿತ್ತನಖರೇಖೆಯನೊಯ್ಯನೆ ನೋಡುವಾಗಳಾ ||
ತನೆ ಬರುತಲ್ಲಿ ಬಂಜಿಸೆ ನಿರೀಕ್ಷಿಸಿ ಬಂಬಮನಪ್ಪಿಕೊಂಡು ಬಂ |
ಮನೆ ಪುಳಕಂಗಳೇಳೆ ರತಿಗೆಯ್ಯಲೊಡರ್ಚ್ಚುವಳೇಂ ಪ್ರಮುಗ್ಧೆಯೋ || ೧೦೬

ವ|| ಅವಳನರಸಂಗೆ ಕರಸಂಜ್ಞೆಯಿಂ ನಾಗರಿಕಂ ತೋರುತ್ತುಮಿರೆಯಿರೆ ಪೆರತೊಂದೆಡೆಯೊಳೊರ್ವ್ವಿಜಗಾತ್ರಿ ಮಗಳ ಮೊಗಮಂ ಕಿಸುಗಣ್ಣಿ ನೋಡಿ ದಾಕ್ಷಿಣ್ಯಮನುಳಿದಿಂತೆಂದಳ್

ವೃ|| ಮೊಗಮಂ ನೋಳ್ಪುದುಮಾಗಳಂತೆ ತಲೆವಾಗುತ್ತಿರ್ಪ್ಪೆ ಸಂಪ್ರೀತಿಯಿಂ |
ಮಿಗೆ ಮಾತಾಡಿಸೆ ಸುಮ್ಮನಿರ್ಪ್ಪೆ ನಗಿಸಲ್ಕೆಂದಲ್ಲಿ ಸಾರ್ತ್ತಂದು ಮೆ ||
ಲ್ಲಗೆವಾತಂ ಬಿಡದಾಡೆ ನೋಡೆ ಕುಚಭಾರಸ್ರಸ್ತಚೇಲಾಂಚಲಂ |
ದೆಗೆಯಲ್ಕೋಪಿಪೆ ಕೂರ್ಪ್ಪರೇ ಪೆರವಿಟನ್ನಿರ್ನ್ನಾಟವಂ ಕಂಡವರ್ || ೧೦೭

ಮತ್ತಮದಲ್ಲದಿತ್ತಲೊಂದುಮಣಿಮಂದಿರದೊಳ್ನಾಣಳಿಯದೆ ನಲ್ಲನೊಳ್ಕೆರೆದುಮಾಗಳ್ಪೊರಮಟ್ಟು ಬಪ್ಪುದುಮರಿದಿರ್ದ್ದಬರ್ದ್ದೆ ಬಳಿಕಿಂತೆಂದಳ್

ವೃ|| ಸೂಳೆತನಕ್ಕಿದೇಂ ಸೊಗಸೆ ಲಜ್ಜೆ ನಿಜಾಲಯಕ್ಕೆದಿದೋಪರೊ |
ಳ್ಮೇಳಕೆ ಮೆಯ್ಯನೀಯದೆ ಕರಾಗ್ರದೆ ಪೊಯ್ಯದೆ ತಳ್ಕೆಗೈಯದು ||
ಬ್ಬೇಳದೆ ತಳ್ತು ಸೀಳದೆ ನಖಾಗ್ರದೆ ತಾಳದೆ ಚುಂಬನಂಗಳಂ |
ಪೇಳದೆ ಮಾರಮಂತ್ರಮನಿದೇಂ ರತಿವಿದ್ಯೆಗೆ ಮುಯ್ಯನಾಂಪುದೇ || ೧೦೮

ವ|| ಮತ್ತಮೊರ್ವ್ವಳ್ಪಿದಗ್ಧೆ ಮಗಳ್ಗೆ ಬುದ್ಧಿವೇಳ್ದಳದೆಂತೆಂದೊಡೆ

ವೃ|| ಗರ್ವಂಗುಂದದಿರಿಂದುವಕ್ತ್ರೆ ಘನಗರ್ವಂದಾಳದಿರ್ಪ್ರೀತಿವ |
ಟ್ಟೊರ್ವ್ವಂಗಂ ಮನಮಿಕ್ಕದಿರ್ಸ್ನೇವಡನೆಂದುಂ ಮಾಡದಿಕರ್ಕ್ಕಟದೊಳ್ ||
ಪರ್ವ್ವಿದರ್ದ್ದಗ್ಗಳದಾಸೆಯುಂ ಬಳಸದಿಕೊರ್ಕ್ಕಟ್ಟಿಲ್ಲದೊಲ್ದಪ್ಪದಿ |
ಸ್ಸರ್ವತಾಪ್ರತಿಶಯಂ ತ್ಯಜೇದೆನಿಪುದಂ ನೀಂ ಮಾರದಿಮ್ಮಾನಿನೀ || ೧೦೯

ನೋಡಿದೊಡಿನ್ನುಮೊರ್ಮ್ಮೆ ನಡೆ ನೋಡಳೆಯೆಂದೆನೆ ಸೋಡು ಸಾದ್ರ್ದಮಾ
ತಾಡಿದೊಡಿನ್ನುಮೊರ್ಮ್ಮೆ ನುಡಿಯುಳ್ಗಡಯೆಂದೆನೆ ಮಾತನಾಡು ಜಾ ||
ಣ್ಗುಡಿ ವಿಳಾಸದಿಂ ಸುಳಿದೊಡಿನ್ನುಮಿವಳ್ಸುಳಿದೆಯ್ದುಳೇಯೆನು |
ತ್ತಾಡೆ ಭುಜಂಗರಲ್ಲಿ ಸುಳಿದಗ್ಗಳಬೇಟಮನುಂಟುಮಾಡು ನೀಂ || ೧೧೦

ವ|| ಮತ್ತಮೊರ್ವ್ವಳ್ತನ್ನ ತನೂಭವೆಯ ಸೌಕುಮಾರ್ಯಮಾಧುರ್ಯಂ
ಗಳಂ ಪೊಗಳ್ದು ತನ್ನ ಕೆಳದಿಗಿಂತೆಂದಳ್

ವೃ|| ಮುಡಿ ಕಡು ಬಿಣ್ಪೆದೆಂದು ಸೆಡೆವಳ್ಮುಡಿದಪ್ಪಳೆ ಪುಷ್ಪಮಾಲೆಯುಂ |
ಜಡಿವಘನಸ್ತನಕ್ಕೆ ಮಣಿವಳ್ಮಣಿಹಾರಮನಾಂಪಳೇ ಕರಂ ||
ಪೊಡರ್ವನಿತಂಬಭಾರಕೆಲಸುತ್ತಡಿ ಯಿಕ್ಕುವಕಾಂತೆ ಕಾಂಚಿಯುಂ |
ತುಡುವಳೆ ಸಿಂಗರಂಬಡೆಯುದೆನ್ನ ಮಗಳ್ಪಿಟರಂ ಮರಳ್ದುವಳ್ || ೧೧೧

ಕಂ|| ಕೂರದ ಕಡೆಗಣ್ನೋಟದೆ |
ಕೂರದನಂ ಕೂರಿಸುವಳುರೋಜಂಗಳ ಬ ||
ಲ್ಭಾರದ ಬಗೆಯುಂ ಕಾಣಿಸಿ |
ಬಾರದನಂ ಬರಿಪಳೆನ್ನಸುತೆ ಮನೆಗಾಗಳ್ || ೧೧೨

ವ|| ಅದಲ್ಲದೆ ಪೆರತೊಂದೆಡೆಯೊಳೊರ್ವ್ವಳ್

ಕಂ|| ಎಳೆಯುಳಿಕಟಾಕ್ಷಪಾಶದಿ |
ನೆಳೆಯೆಳೆಯುವ ಮೃಗಮನಂದದೊಳ್ಕ್ರಿಕಳೆಪ್ರೋಲ್ ||
ಪೊಳೆಯುಳ ಶೃಂಗಾರರಸದ |
ಪೊಳೆಯೊಳೆಯುದರಾರೊ ಪೊನ್ನನಿವಳ್ಗತಿಧನಿಕರ್ || ೧೧೩

ಪಿಡಿನಡೆ ಪಿಡಿನಡು ಪೊಸಕೈ |
ಪಿಡಿವೊಗಮುಡುಪತಿಯ ಕದಿರನಾಳ್ದಲರ್ಗಣ್ಕೆಂ ||
ಪಿಡಿದಧರದಳಂ ಕಡುವಿ |
ಣ್ಪಿಡಿಕಿರಿದನಿತಂಬಮೆನ್ನ ತನುಭವೆಗೆಸೆಗುಂ || ೧೧೪

ವೃ|| ನೋಡದೆ ಪೋದೊಡೊಂದರಿಯೆನೆನ್ನ ತನೂಜೆಯನೊರ್ಮೆ ಕೂರ್ಮೆಯಿಂ|
ನೋಡಿದೊಡಾಗಳಂಗಜಮಹಾಶಿಖಿ ಮೂಡದೆ ಬಲ್ಪು ಬಾಡದ ||
ಳ್ಪಾಡದೆ ಚಿತ್ತಮೋಡದೆ ಮದಂ ಪಿಕಿ ಕೋಡದೆ ಕೂಗಿ ಮೂರ್ಛೆಯಂ |
ಮಾಡದೆ ಕೆಳಯ್ಪುಗೂಡದೆ ಸುಧಾರುಚಿ ಕಾಡದೆ ಕಂತು ಮಾಣ್ಗುಮೇ||೧೧೫

ವ|| ಎಂಬನೇಕವಿಧವಿದಗ್ಧಾಲಾಪಂಗಳಂ ಕೇಳುತ್ತುಂ ಬರುತ್ತಿರೆ ಮುಂದೊಂದು ಮಣಿಮಯದ್ವಾರದೊಳಂದಂಬಡೆದು ನಿಂದಸುಂದರಿಯ ಮುಂಗಯ್ಯೊಳ್ಸಿಂಗರವೆನೆ ಕುಳ್ಳಿರ್ದು

ವೃ|| ಜಡೆಯ ಬೆಡಂಗಿ ನುಣ್ಗೊಸಲನಾಯಕಿ ಚೆಂದುಟಿಯಂದಗಾತ್ರಿ ಮೆ|
ಲ್ನುಡಿಯಮೃಗಾಕ್ಷಿ ತೆಳ್ಗದಪಿನಂಗನೆ ಬಲ್ಮೊಲೆಯಬ್ಜಗಂಧಿ ನು ||
ಣ್ದೊಡೆಯಲತಾಂಗಿ ಮೆಲ್ಲಡಿಯ ಮುಗ್ಧೆ ಸಿತಂಬದನೀರೆ ನಿನ್ನೊಳೋ |
ತೊಡವೆರೆದಿರ್ಪನಾವನವನಂಗಜಪಟ್ಟಮನಾಳ್ದನಾಗನೇ || ೧೧೬

ವ|| ಎಂದು ಸರಸವಚನದಿಂ ಬಣ್ಣಿಪರಗಿಳಿಗೆ ನರುದಂಬುಲಗುಟುಂಕುಗುಡುವವಳ ಬಾಯ್ದೆರೆಯಂ ಕಂಡೆನಗಂ ಬಾಯೊರೆತಪುದೆಂಬವಿದೂಷಕನ ನುಡಿಗೆ ಮುಗುಳ್ನಗೆನಗುತ್ತರಸನಿರ್ಪನಿತರೊಳೊರ್ವ ತುಂಬುಜೌವನದ ಬಿಂಬಾಧರೆ ನಿಜವಿರಹಪೀತಿಹೋತ್ರವಿಧುರಿತೆ ಪೀಥಿಯೊಳ್ಬರ್ಪುದಂ ಕಂಡನ್ಯಭಂಗಿಯಂ ತಳೆದವಳ ಮನದನ್ನಂ ದನಿವಳಿದಪ್ಪಿ ನುಡಿಯಿಸುವಲ್ಲಿ

ವೃ|| ಪನೆಲೆ ಬಾಲೆ ಯೇಕೆಲೆಭುಜಂಗ ಇದೆಲ್ಲಿಗೆ ಪೋಪೆ ಪರ್ಬ್ಬದು |
ದ್ಯಾನಕದೇಕೆ ನೀಮ್ಮುಗಳುಗಲೀಪೊಸಜೊನ್ನದೊಳುಂಟೆ ಉಂಟು ಕಾ ||
ಮಾನಲದಗ್ಧೆಯೇ ನುಡಿಯೆಲೇನೊಡವರ್ಪನೆ ಬೇಡವೊರ್ವಳೇ |
ನೀನೆಲೆಯಾದೊಡೇನಗಿದೆಯಿಲ್ಲೆನೆ ಕೈವಿಡಿದಪ್ಪಿದಂ ವಿಟಂ || ೧೧೭

ಕಂ|| ಕಂಡಿನಿಯನೆಂದು ತಿಳಿದಾ |
ಖಂಡಲಸಂಪದಮೆ ಸಾರ್ದ್ರವೋಲ್ಸಂಭ್ರಮದಿಂ ||
ಪಿಂಡೇಳ್ಪ ಪುಳಕದೊಡನೊಡ |
ಗೊಂಡೊಯ್ವುತ್ತಾತ್ಮಗೃಹದೊಳವನೊಡವೆರೆದಳ್|| ೧೧೮

ವ|| ಮತ್ತೊಂದು ಚಂದನರಸಧವಳಿತಕೇಳೀನಿಳಯಮಧ್ಯಮಂಡಿತಮಣಿಮಯಮಂಚಾಗ್ರದ ಮರಿಯುಂಜೆದುಪ್ಪಳ ಮೇಲೊಂದಿದತಳ್ಪದೊಳೊರ್ವ್ವ ಬೇಟಗಾತ್ರಿ ತೋಟಗಾತ್ರಿಯುಂತೆ

ವೃ|| ಮುಗುಳಂಬಂಗೆಣೆಯಾದನಂ ಬರಿಸಿ ತದ್ಬಾಹಾಜಸತ್ಕಲ್ಪವ |
ಲ್ಲಿಗಡಪ್ಪಂ ಕುಡುವಂತೆ ಕೊಟ್ಟು ತನುವಂ ಸೀರ್ವ್ವಯ್ವವೋಳ್ಪೆರ್ವವಾ ||
ರಿಗಳಿಂ ತೋಯ್ದುದರಲ್ಲಿ ಚಂದಳಿರ್ಗಳಂ ತಾನಾಗಿಪಂತೊತ್ತಿ ಕೂ |
ರುಗುರಿಂ ಪೂಗುಡಿ ಮೂಡಿಪಂತೆ ಮೊಲೆಯಂ ಕೈದೀವಿ ಕಣ್ಗೊಪ್ಪಿದಳ್ ||೧೧೯

ಕಂ|| ತನುರುಹಮುಗೆವೊಯ್ದುವೊಲಿರೆ |
ತನು ತಳ್ತಿರೆ ಲಜ್ಜೆಯೊಂದೆ ತನುತೆಯುನೊಲ್ವಾಂ ||
ತನುನಯಮನತನುಸುಖದ ಸು |
ತನುವಿಂತನುಭವಿಸುತಿರ್ದ್ದಳಿನಿಯನೊಳೊರ್ವ್ವಳ್ || ೧೨೦

ವೃ|| ನೊಸಲ ಲಲಾಮಮುಂ ಸ್ತನದ ಚಂದನಮುಂ ತೊಡೆದಂತೆ ಪೋಗೆ ರಂ |
ಜಿಸುವಲತಾಂಗಮುಂ ಜಘನಮುಂ ಪದಪೆತ್ತಿರೆ ಕರ್ಣಪೂರಮುಂ ||
ಪೊಸಮುಡಿವೂಗಳುಂ ಜಗುಳೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ ||
ಪಿಸೆ ಗಳನಾದಮುಂ ಶ್ವಸಿತಮುಂ ನೆಗಳುತ್ತಿರೆ ತಳ್ತು ಕೂಡಿದಳ್ || ೧೨೧

ವ|| ಅದಲ್ಲದೆ ಬೇರೊಂದೆಡೆಯೊಳೊರ್ವ್ವಳ್ನೆರೆದು ಸೆದೆವಟ್ಟು ಬೆಮರಾರಿಸಲ್ಕೆಂದು ಮಂದಿರದ ಮುಂದಣ ಮತ್ತವಾರಣಮಂ ನೆಮ್ಮಿ ನಿಂದಿರ್ಪ್ಪುದುಮವಳವೊಗದ ಕಳೆಯುಂ ಕಂಡೊರ್ವ್ವಸೊಬಗಬೊಜಗನೊತ್ತೆಗುಡಲೊಡನೆ ಪಿಡಿದುದಂ ಕಂಡು ಪೊರ್ದ್ದಿ ತಿಳಿದಿಂತೆಂದಂ

ವೃ|| ಎಲೆಕಿರುಸೂಳೆ ನೀಂ ನೆರೆದಸೇದೆಯುನಾರಿಸಗೊತ್ತೆಯಾಂತೆಯಾ |
ಕಲೆಗಳೆ ಸೂಚಿಕುಂ ಸುಖಮದೇಂದೊರಕೊಳ್ಳುದೆ ನಿನ್ನೊಳೀಗಳೆಂ ||
ದುಲಿವವಿಟಂಗೆ ಮಾನ್ನುಡಿದಳೊಂದಳಿಪೀದಿರ್ದ್ದೊಡೆ ಪೋಪುದೇ ನವಾ |
ಬ್ಜಲಲಿತಸೌರಭಂ ಬಳಿಕವೊಂದಳಿ ಸಾರ್ದ್ದೊಡೆ ಸೌಖ್ಯಮಾಯದೇ || ೧೨೨

ವ|| ಎಂಬಗಣಿಕೆಯ ಚಾಟುಬಣಿತಿಯಂ ಕೇಳ್ಪರಸನೊಳ್ಪೀರಮುರ್ದಕನಿಂತೆಂದಂ

ಕಂ|| ಸ್ಮರನೆರವಿಲ್ಲದೆ ತೋಳ |
ಲ್ಲಿರುತಿದ್ರ್ದೊಡಮಧಿಕವಿತ್ತಮಿತ್ತಪೆನೆಂದಂ ||
ಬರೊಳೊಡವೆರೆವುದು ವೇಶ್ಯಾ |
ಚರಿತಮಿದಲ್ಲದೊಡದೆಂತು ಸಿರಿವಡೆದಪರೋ || ೧೨೩

ವ|| ಎಂಬವೂತಂ ಕೇಳ್ದು ನಿಜಮೆಂದಲ್ಲಿಂ ಮುಂದಣ್ಗೆ ಬಪ್ಪಾರ್ಗಳೊ ವ್ವರ್ಳ್ಕುಸುಮಕೋಮಳೆ ತನ್ನ ಕೆಳದಿಗಿಂತೆಂದಳ್

ಕಂ|| ಕುಡುವೊಡವೆಗಾಗಿ ಪೋಗೆಂ |
ದೊಡನೊಡನೆಮ್ಮಬ್ಬೆ ನೂಂಕುವಳ್ತನ್ನವೊಲೆಂ ||
ದಡರ್ದಬ್ಬೆ ಬಳೆದಪೊಡೆ ಪೇ |
ರೊಡಲೀಬಟ್ಟೆಗನೊಳೆಂತು ನೆರೆವೆಂ ಕೆಳದೀ || ೧೨೪

ವ|| ಅದಂ ಕೇಳ್ದು ವಿದೂಷಕಂ ಪರಿದು ಪೋಗಿ ನಿಂದು ನಿರೀಕ್ಷಿಸಿ ಕಯ್ಯಂ ನೀಡಿ ನಿಮ್ಮಬ್ಬೆಯುನೆ ನೆವಮಿಟ್ಟು ಕಳಿಪಲ್ವೇಳ್ಕುಮೆಂದು ನರೇಂದ್ರನ ಮೊಗಕ್ಕೆ ಮುಗುಳ್ನಗೆಯುಂ ಸೂಸುತ್ತಿರೆ ಮತ್ತೊಂದುನೆಲೆವಾಡದೊಳ್ಮನದನ್ನನಗಲೆ ಮರುಗುವಚಪಲಚಿತ್ತೆಗೆ ಸಖಿಯಿಂತೆಂದಳ್

ವೃ|| ಬಂದೊಡೆ ನೋಡೆ ಬಾರದೊಡೆ ದೂದವಿಯುಟ್ಟುವೆ ಬೇಡ ಕೋಪಮಿಂ |
ನ್ನೆಂದಡಿಗಾತನೊಲ್ವೆರಗೆ ಗರ್ವಿಪೆ ನೃತಿರೆ ಸುಕ್ಕಿರ್ ಸುಯ್ವೆ ವ್ಯೆ ||
ಸಂದಮುದರ್ಪ್ಪಲಾತುರಿಸೆ ಮ್ಯೆಗುಡೆ ಮೂಣ್ದೊಡೆ ಕಾಮುವಹ್ನಿಯಿಂ |
ಬೆಂದಪೆ ಪೋಪನ್ರೋಲ್ಜಡಿವೆ ಪೋದೊಡೆ ನೈರಿಸೆ ನೀನಿದೇಂಸಖೀ || ೧೨೫

ವ|| ಇವಳ್ಕಲಹಾಂತರಿತೆಯಪ್ಪಳೆಂದು ನಾಗರಿಕಂ ನುಡಿಯುತ್ತಿರೆ ಮತ್ತೊಂದುಪಜ್ಜಳಿಪಬಜ್ಜರದ ಸೆಜ್ಜೆವನೆಯ ಸಿರಿಮಂಚದ ಶಿರೀಷಮೃದುಳತಳ್ಪಸ್ಥಳದಲ್ಲಿ

ವೃ|| ಬಿರಿಮುಗುಳಾದಜಾದಿಯುರಲಂ ಮುಡಿಯೊಳ್ಮುಡಿದಿಟ್ಟು ಮುತ್ತಿನಾ |
ಭರಣಮನುಟ್ಟು ಚೀನಲಲಿತಾಂಬರಮಂ ತೊಡೆದಂಗದಲ್ಲಿ ಕ ||
ಸ್ತುರಿಯನುಲೇಪಮಂ ಗೃಹಮನಾಮಣಿಮಂಚಮನೊಯ್ಯನೊಲ್ದು ಸಿಂ |
ಗರಿಸಿ ನಿಜೇಶನಾಗಮನಮಂ ಮನದೊಳ್ಬಯಸುತ್ತೆ ಬಾಡಿದಳ್ || ೧೨೬

ವ|| ಅವಳಂ ನಿರೀಕ್ಷಿಸುತ್ತಿವಳ್ವಾಸಕಸಜ್ಜಿಕೆಯೆಂದು ನುಡಿವಮಾತನಾ
ಕರ್ಣಿಸುತ್ತುಂ ನರೇಶ್ವರನಿರ್ಪ್ಪವಸರದೊಳೊರ್ವ್ವಭುಜಂಗಂ ನಿಜಸಖಂಗಿಂತೆಂದಂ
ವೃ|| ಮಾನಮಿದೇಕೆ ಮಾನಿನಿ ಮನೋಭವನಾಣೆ ಬಿಡೆಂದೊಡಾಂಕರಂ |
ಜಾನಿಸಿ ಬಾಷ್ಪವಾರಿಗರೆವಳ್ಮೊಗನೋಡಿದೊಡಂತೆ ನಾಣ್ಚುವಳ್ ||
ಟೀನಕುಚಾಂಚಲಂದೆಗೆಯೆ ಕೋಪಿಪಳಪ್ಪಿದೊಡೊಲ್ದು ನಕ್ಕಪ |
ಳ್ಮಾನದರಿಂದೆ ಸಂದಕಿಲಕಿಂಚಿತಮಂಚಿತಮೆನ್ನ ನಲ್ಲಳಾ || ೧೨೭

ವ|| ಎನೆ ಕೇಳ್ದವಂ ಮುಂ ಪೇಳ್ದನೊಡನೆ ತನ್ನನಿಯಳ ವೃತ್ತಾಂತಮಂ
ಮಗುಳ್ದು ಪೇಳ್ದನದೆಂತೆಂದೊಡೆ
ವೃ|| ಮುಳಿದೆನ್ನೊಳ್ಮನದನ್ನಳೊಯ್ಯನೊರಗಿರ್ದ್ದಳ್ನಿದ್ರೆಗೈದಂದದಿಂ |
ತಿಳಿದಾನೆಬ್ಬಿಸಲಲ್ಲಿ ಕೋರಮುಡಿಯೊಳ್ಪೂಮಾಲೆಯಂ ಸೂಡಿ ಮಂ ||
ಜುಳಕಾಶ್ಮೀರವಿಲೇಪಮಂ ಮೊಲೆಗೆ ಲೇಪಂಗೈವುದುಂ ಪೊರ್ದ್ದಿ ಪೊಂ |
ಪುಳಿಪೋದಳ್ಪಟಮೇಳ್ದು ಪೊಯ್ದುಳೊದೆದಳ್ಬಾಯ್ದಪ್ಪಿದಳ್ನಕ್ಕಪಳ್ || ೧೨೮

ವ|| ಎಂಬಮಾತುಗೇಳ್ದಿವಳುಂ ಕಿಲಕಿಂಚಿತೆಯುಕ್ಕುಮೆಂದು ಏಟಂ ನುಡಿ
ಯುತ್ತಿರೆ ಕೇಳ್ದಲ್ಲಿಂ ಮೆಲ್ಲನಿಳಾಧಿಪನಡಿಯಿಡುತ್ತಿರೆ ಮುಂದೊಂದುಮಂದಿರದಲ್ಲಿ
ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯ ಖಂಡಿತೇಕ್ಷ್ಣೆಯಿಂ ನೋಡಿ
ವೃ|| ಬೇಡವಿದೇಕೆ ನಿನ್ನೆರನೆ ನಾಡೆ ನಯೋಕ್ತಿಯನೀಡುತಿರ್ಪ್ಪ ನೀಂ |
ನೋಡಿದೊಡಿಂತುಟಪ್ಪರೊಳರೇ ಯೆನಿಪಂತಿರೆ ನಿನ್ನ ಮೆಯ್ಯೊಳೀ ||
ಬಾಡದಬಾಸುಳೀಯಧರದೊಳ್ಗಲೆಯಿನಾಕರಜಕ್ಷತಂಗಳೀ |
ಪಾಡಳಿದಂಗವೀಯಿರವಿನೆಲ್ಲವನೀಕ್ಷಿಸಿ ನಂಬಲಕ್ಕುಮೇ || ೧೨೯

ವ|| ಎಂಬಳ ನುಡಿಗೇಳುತ್ತಿರ್ಪ್ಪನಂ ಪೆರತೊಂದು ಮಣಿಮಯನಿಳಯಾಂ
ತರಾಳದಲ್ಲಿ
ವೃ|| ಚುಂಬಿಸುತಿತ್ತ ತಂಬುಲವನಲ್ಲದೆ ಮೆಲ್ಲದ ನಲ್ಲಳಂಗಗಂ |
ಧಂಬಗೆಗೊಂಡದೂವಟಮನಲ್ಲದೆ ತಾಳದ ತತ್ಕಚವ್ರಜಾ ||
ಲಂಬಿತಪುಷ್ಪಮಾಲೆಗಳನಲ್ಲದೆ ಸೂಡದ ತತ್ಕುಚಂಗಳೋ |
ಳ್ತುಂಬಿದಯಕ್ಷಕರ್ದಮವನಲ್ಲದೆ ಪೂಸದ ಕಾಂತನೊಪ್ಪಿದಂ || ೧೩೦

ವ|| ಮತ್ತಮವನ ಮನದನ್ನಳ್ಮನೆಗೆ ಬಂದನಿಜ ಸಖಿಗಾತನಂ ತೋರಿ

ವೃ|| ನುಡಿಯೆಮಗೊಂದೆ ನೋಟನುಮಗೊಂದೆ ವಿಳಾಸಮದೊಂದೆ ಜೆಲ್ವನಿ |
ರ್ಮ್ಮಡಿಸುವಸಾರಯೌವನಮುಮೊಂದೆ ಗುಣೋನ್ನತಿಯೊಂದೆ ಕೂರ್ಪ್ಪಬೇ||
ರ್ಪ್ಪಡಿಸದ ಬೇಟವೊಂದೆ ರತಿಯೊಂದೆ ಮನಸ್ಸ್ಥಿತಿಯೊಂದೆ ಸೌಖ್ಯಮಂ |
ಪಡೆದಪೆವಾವಗಂ ಕಳದಿ ಕೇಳದರಿಂದೆಮಗಾರ್ಸ್ಸಮಾನರೇ || ೧೩೧

ವ|| ಎಂದು ತಮ್ಮಿರ್ವ್ವರ ಸಮಾನುರಾಗಸೌಭಾಗ್ಯವಿಭ್ರಮಮುಮಂ ಸಂಭ್ರಮಂ ಮಿಗೆ ಸಮುದಸರಸೋಕ್ತಿಗಳಿಂ ಬಣ್ಣಿಸುತಿರ್ಪ್ಪನ ಮಿವಳ್ಸ್ವಾಧೀನ ಪತಿಕೆಯಕ್ಕುಮೆಂದು ನುಡಿವನಾಗರಿಕನ ನುಡಿಯಂ ಬಗೆಗೊಂಡರಸನಲ್ಲಿಂ ಬರುತಿರ್ಪ್ಪಲ್ಲಿ ಮುಂದೊಂದು ಮಣಿಮಾಗಿಳೊಳೊರ್ವ್ವಸರಸಹೃದಯಂ ತರುಣಿಯುನಗಲ್ದು ಮುಂದುಗೆಟ್ಟವಳಿರವಂ ನೆನೆನೆನೆದು ಸುಯ್ದು ಕಳಿಯನೊಡನಿಂತೆಂದಂ

ವೃ|| ಪರಕಾಂತಾಕರಜಾತದಂತಹತಿಯಂ ತಾಳ್ದೈದಲಾಸನ್ನಸೌಂ |
ದರಿಯಾನೋಡುವ ನೋಟವಾಭ್ರುಕುಟಿಯಾಸಿಂದಂದವಾಕಂಪಿಪೊಂ ||
ದಿರವಾಬೆಚ್ಚನೆ ಪಾಯ್ವ ಸುಯ್ಗಳೊದವಾಕಣ್ಣೀರ್ಗ್ಗಳಾಕೋಪಸಿ |
ರ್ಭರವಾಕೆತ್ತುವಪಲ್ಲ ಪಾಧರಮದೇಂ ಮಚ್ಚಿತ್ತದೊಳ್ನಿಂದುದೋ || ೧೩೨

ವ|| ಅದಲ್ಲದೆಯುಂ

ಕಂ|| ಪಳಿವುದು ಕೆಂದಾವರೆಯುಂ |
ಮುಳಿದೊಡೆ ತಿಳಿದೊಡೆ ಪೊದಳ್ದಪೊಂದಾವರೆಯುಂ ||
ಕಳಿವೆತ್ತನಕ್ಕೊಡನ್ನಿನಿ |
ಯಳತೊಳಗುವವದನಮಲರ್ದಬೆಳ್ದಾವರೆಯುಂ || ೧೩೩

ವ|| ಎಂದು ಪಳಯಿಸುತ್ತಿರ್ದ್ದನಿತ್ತಲ್ಕತ್ತೊಂದು ಮಣಿಭವನದಲ್ಲಿ

ವೃ|| ಮನದನ್ನಳ್ಮನದನ್ನನಂದಗಲೆ ಚಿಂತಾಕ್ರಾಂತೆಯಾಗಿರ್ದ್ದ ಕಾಂ |
ಚನಮಂಚಾಗ್ರದೆ ಮಗ್ಗುಲಿಕ್ಕಿ ಮಗುಳ್ದಾತಂ ಬಂದು ಕೂಡಿರ್ದ್ದನ ||
ಲ್ಗನೆಸಂ ಕಂಡಖಿಳಾಂಗಮುಂ ಪುಳಕಮಂ ತಾಳ್ದೊಪ್ಪಲೆಚ್ಚತ್ತು ಕಾಂ |
ತನ ರೂಪಂ ಬರೆದಿರ್ದ್ದ ಚಿತ್ರಪಟಮಂ ತಕ್ಕೈಪಳೇಂ ಮೋಹವೋ || ೧೩೪

ವ|| ಮತ್ತಮೊರ್ವ್ವಳ್ಮೃಚ್ಛ್ರಗಾತ್ರಿ ಕಡುಕೊತ್ತುರ್ದಂ ಕಂಡು ಕಾಡು ವಕಪಟವಿಟನಿದ್ರ್ದೆಡೆಗೆ ತಾನೇ ಬಂದು

ವೃ|| ನಿನಗಾಂ ಕೊತ್ತುರ್ದೆ ಕುಂದೆ ನೋಡದೆ ಕರಂ ಮಾತಾಡದಾಳೀಜನಂ |
ಮನೆಗೇಳ್ತಂದೊಡೆ ಮಾತುಗೇಳದವರೊಳ್ನೀಂ ಪೇಳದೇನೊಂದಸಿಂ ||
ದನಿಮಿತ್ತಂ ಮುನಿದಿರ್ಪ್ಪುದೇನುಚಿನೋ ಪೇಳೆಂದು ಕಣ್ನೀರ ಪೇ |
ರ್ವ್ವೊನಲಿಂ ನಂದಿಸಿದಳ್ಪ್ರಕೋಪಶಿಖಿಯುಂ ಪಾಯ್ದುಪ್ಪಿದಳ್ನಲ್ಲನಂ || ೧೩೫

ವ|| ಅಂತಪ್ಪಿ ನಿಜನಿಕೇತನಕ್ಕೊಡಗೊಂಡು ಪೋಗಿ ಪೊಸಸುಸಿಲ್ಗೆ ಮನ ಮಿತ್ತು ಮಣಿಮಂಚದೊಳಿರ್ವ್ವರುಂ ಕುಳ್ಳಿರ್ದ್ದು ಬಳ್ಳಿವರಿವಸಿಡುನೇಹದಿಂ ದಡರೆ ನೋಡಿ

ವೃ|| ತೋಳ್ತೊಡೆವಕ್ಷಮುಂ ಜಘನಮುಂ ಮನಮುಂ ಮೊಗಮುಂ ಪರಸ್ಪರಂ|
ತಳ್ತಿರೆ ಕಂಪನಂಬಡೆದ ಕೈದಳದಿಂ ಪೊಡೆದೀಳ್ದು ಸೀಳ್ದು ಮೇ ||
ಲೇಳ್ತರೆ ಮುಗ್ಗೊರಲ್ದನಿ ಸುಧಾಧರಮಂ ಸವಿದುಕ್ಕಿರ್ ಸೊಕ್ಕಿರ್ ಸೂ |
ಳ್ಗೆಳ್ತಡವಾಗದಂತೆ ನೆರೆದಸ್ಸುರತಾಬ್ಧಿಯೊಳಾಳುತೇಳ್ವಪೋಲ್ || ೧೩೬

ವ|| ಇಂತಪ್ಪ ಮಧ್ಯಮನಾಯಿಕೆಯರ ವಿವಿಧವಿಳಾಸಮಂ ನಾಗರಿಕನ ರಿಪುತ್ತುಂ ಬರೆವರೆ ಭೂಲೋಕಮುಕರಪತಾಕಂ ಮುಂದರ್ಗೆ ನಡೆನಡೆಯೆ ಮತ್ತೊಂ ದೆಡೆಯೊಳೊರ್ವ್ವವಿದಗ್ಧೆ ವಿರಹತಾಪಮಂ ಸೈರಿಸಲಾರದಾಳಿಯ ಮೊಗಮಂನೋಡಿ

ವೃ|| ಮದನಂ ತಾಂ ಮಧುಮತ್ತಸೀಶಶಿ ಕರಂ ದೋಷಾಕರಂ ಚಂದನಂ |
ಮದಸರ್ಪಪ್ರಕರೋಪಸೇವಿ ಶಿಖಿಮಿತ್ರಂ ಮಾರುತಂ ತಾಪಮಾ ||
ವುದು ಯುಕ್ತಂ ಸುಧೆಗೊಂಬಹಂಸೆ ಗುಣಿ ಪದ್ಮಂ ಕ್ಷೀರಪೂರ್ಣಂ ಸರಂ |
ಸುದತೀ ಕೇಳ್ಸುಮನಃಪ್ರಿಯಂ ಮಧುಕರಂ ಪೇಳ್ಕಾಯ್ವುದೇಂ ತಕ್ಕುದೇ ||

ವ|| ಅದಲ್ಲದೆಯುಂ

ವೃ|| ಕಳಿವೆನದೆಂತೊ ಕಾಮಿನಿ ದಿನಂಗಳ ತಿಂಗಳ ಪಿಂಗಳಂಗಮುಂ |
ತಿಳಿಯದೆ ನಲ್ಲನೈದೆ ಬಗೆ ನಿಲ್ಲದು ನಲ್ಲದಿಡೊಲ್ಲದೇನುವಂ ||
ಮುಳಿದಿಸುವಂಗಜಾತನ ವಿಘಾತನ ಶಾತಸವಾಸ್ತ್ರಪಾತದಿಂ |
ದಳಿದಪೆನಾತನಂ ಕರೆಯಲಾಗದೆ ಬೇಗದೆ ರಾಗತಿಂ ಸಖೀ || ೧೩೮

ವ|| ಎಂದು ನುಡಿದನಿಜಸಖಿಯ ನಿರ್ವೇದೋಕ್ತಿಯಂ ಕೇಳಲಾರದವಳಿ ನಿಯನಿರ್ದೇಶೆಗೆ ಪರಿತಂದು ವಿನಯದಿನಿಂತೆಂದಳ್

ವೃ|| ಸಸಿಗೆ ಸಮಾನಮಾದುದವಳಾಸ್ಯಮದುಂ ಕಡುವೆಳ್ಪುತಳ್ತು ರಂ |
ಜಿಸಿ ಬಿಸಕಾಂಡಕಂಗಲತೆ ತಾಂ ಸಮದಾಕೃತಿವೆತ್ತುದಂತದುಂ ||
ಲಸದರುಣಾಬ್ಜಪತ್ರದೆ ತದಕ್ಷಿ ಸುಹೃತ್ತ್ವಮನಾಂತುದಂತದುಂ |
ಕುಸುಮಕಳಂಬನಂಬು ಬಗೆಗುಂದಿಸಿದತ್ತದುಮಬ್ಜಗಂಧಿಯಾ || ೧೩೯

ಅಸುಗೊಳಲೆಂದು ತಾಂ ಬೆಸಸಿಯುಂ ಸಸಿಯಂಸಸಿಯಂ ಸಮಂತು ರಂ|
ಜಿಸುವಬಸಂತನಂ ಸಮದನಂ ಮದಸಂ ಮದನಂತಶೌರ್ಯಮಂ ||
ಪಸರಿಪೆನೆಂದು ಗರ್ಜಿಸರಲಂ ಸರಲಂ ಸರಲಾಂಗುಲಿದ್ವಯಂ |
ಮಿಸುಗಿರಲೆಚ್ಚು ಕೂಡೆ ತವಿಪಂ ತವೆ ಪಂತವೆ ಪಂಕಜಾಕ್ಷಿಯೊಳ್ || ೧೪೦

ವ|| ಎಂದು ಚತುರೋಕ್ತಿಜಳಮನೆರೆದು ಮುಳಿಸಂ ಕಳೆದೆಗೆವಂತೆ ತೆಗೆದು ಬಗೆನೆಲದೊಳ್ಪೇಟವೆಂಬ ಸಸಿಯುಂ ಬೇರ್ವರಿಯಿಸಿ ವಿನಯದಿಂದೊಡಗೊಂಡು ಬಂದು ಸಿಧುವನನಿಕೇತನಮಂ ಪುಗಿಸಲೊಡನೆ ವಸಂತರಾಜನಂ ಕಂಡವನಲಕ್ಷ್ಮಿ ಯಂತೆ ಸೊಂಪೇರಿ ಕಮಳಕಾಮುಕನಂ ಕಂಡಕಮಳಿನಿಯಂತೆ ಮೊಗಮಲರ್ದ ಲರಂ ಕಂಡಳಿಯಂತೆ ಬಳಿಸಾರ್ದು ಮುಗಿಲಂ ಕಂಡಮಯೂರಿಯಂತೆ ಮೆಯ್ಯು ಪ್ಪೆರ್ ಮಾವಂ ಸಾರ್ದಮಲ್ಲಿಗೆಯಂತಮರ್ದಪ್ಪಿ ಸಸಿಗಳರಸನ ಸರಸಕರಂ ಸೋಂಕಿ ದಸಸಿಗಲ್ಲ ಪುತ್ಥಳಿಯಂತೆ ಕರಗಿ ಬಿಂಬಫಳಮಂ ಕಂಡರಾಜಶುಕಿಯಂತೆ ಬಿಂ ಬಾಧರಮಂ ಕರ್ಚಿಂಕಿ ಕಾತರಂ ಕೈಮಿಗೆ ಕಡುಸೊಬಗಿಂ ಕಾಂತನೊಡನೆ ಕಾಂಚನನುಂಚದ ಕಮಳದಳಧವಳಮೃದುಳತರವಿಪುಳಮರಾಳತೂಳಕಲ್ಪಿತಾನ ಲ್ಪತಲ್ಪದೊಳ್ಮೆಲ್ಪಿಂ ಕುಳ್ಳಿರ್ದು ಕಳಾವಿಳಾಸಂಬಡೆದು ಕಾಮಕೇಳಿಗುಜ್ಜುಗಿಸಿ ಸಜ್ಜುಗೈವಾಗಳ್

ವೃ|| ಬೆಮರ್ದಂಗಂ ಪತ್ತಿದತ್ತೀರವಕೆಯುಸುಗಿ ಸೀನೆಂದು ಪದ್ಮಾಸ್ಯೆ ತಾಂ ಪೇ|
ಳೆ ಮಹೋತ್ಸಾಹಾನ್ವಿತಂ ವಲ್ಲಭನಿಪೆ ಕುಚಮಧ್ಯಕ್ಕೆಹಸ್ತಾಬ್ಜಮಂ ಮ ||
ತ್ತೆ ಮನೋಜ್ಞಾಂಗಂಪೊದಳ್ದುಬ್ಬಿದೊಡೊಡೆದದುಜಾರಿತ್ತುಬಾಹಾಹಿತದ್ದೇ|
ಹಮಹಾಶ್ರೀಖಂಡಶಾಖಾಗ್ರದೆಹೆರೆಗಳೆಯುತ್ತಿಪ್ಪುದೆಂಬಂದದಿಂದಂ||೧೪೧

ಕೊರಲೊಳ್ತಳ್ತಿರೆ ಬಾಹುವಲ್ಲರಿಯುರೋಜದ್ವಂದ್ವದಿಂದೊತ್ತಿ ಪೇ |
ರುರಮಂ ಸಾರ್ದ್ರಮದರ್ಪ್ಪಿ ನೋಡಿ ಕಡೆಗಣ್ಣಿಂದಳ್ಕರಿಂ ಪಲ್ಲವಾ ||
ಧರಮಂ ಚುಂಬಿಸಿ ನೀವಿ ಜಾರೆ ಜಘನಾಭೋಗಂ ಪೊಡಳ್ದುರ್ವ್ವೆ ಸೌಂ |
ದರಿ ನಾನಾಕಳೆವೆತ್ತು ಸೋಂಕೆ ನೆರೆದಳ್ಕಾದಲ್ಮೆಯಿಂ ಕಾಂತನೊಳ್ || ೧೪೨

ಕಂ|| ನೆರೆವೆರೆಯನುಳಿದು ಚೆಂದುಟಿ |
ವೆರೆವಿಡಿದಮರ್ದಿಂಟಿ ಪಟುಭುಜಂಗಂ ಶಂಖಿಂ ||
ಮೊರೆಯಿಟ್ಟಪುದೆನೆ ಮದನಂ |
ಗುರೆ ಮೆರೆದುದು ಗಳಸಿನಾದಮಗು ಕಳರವೆಯಾ || ೧೪೩

ವ|| ಇಂತು ಕಂತುಕೇಳಿಸುಖಾಸ್ವಾದನೋನ್ಮತ್ತಚಿತ್ತರೊಪ್ಪುತ್ತಿರೆ ಮತ್ತೊಂದುಮುತ್ತಿನ ನೆಲೆವಾಡದೊಳವಳಯದೊಳಗಣ ತಳತಳಿಸಮನೋಜ್ಞ ಮಣಿಮಯಮಂಚಾಗ್ರದಲ್ಲಿ

ವೃ|| ಇಂದೆನಗೆನ್ನ ನಲ್ಲನೊಡಗೂಟಮದಪ್ಪುದೆಯೆಂದಗಲ್ದಪೂ |
ರ್ಣೇಂದುನಿಭಾಸ್ಯೆ ಚಿಂತಿಸುವವೇಳೆಯೊಳೊಪ್ಪುವ ವಾಮಬಾಹು ವಿ ||
ಸ್ಪಂದಮನಾನೆ ಬಂದೊಡನನಾಗಳೆ ಭಾವಿಸುತ್ತಿಳ್ದು ರೋಮಹ |
ರ್ಷಂದಳೆದಪ್ಪಿದಳ್ಪತಿಯನಾಭುಜಗಿಂದವೊ ಪೂರ್ಣರಾಗದಿಂ || ೧೪೪

ಪುಳಕದ ಮೆಯ್ಯೊಳಪ್ಪುತೆ ಬೆಮರ್ತ್ತ ಘನಮಸ್ತನಮಂಡಳಂಗಳಂ |
ಕೆಳೆಗೊಳಿಸುತ್ತೆ ವಕ್ಷದೊಳೆ ಕಂಪಿಪಕೈದಳದಿಂದೆ ಪೊಯ್ದು ಪಾ ||
ಯ್ದಿಳಿವಸುಖಾಶ್ರುವಿಂ ನನೆದಕಣ್ಮಲರಿಂ ನಡೆನೋಡಿ ಮುಂಬದಂ |
ಗಳಿಯಿಸ ಕೂಡಿಗದ್ಗದದ ಕಂಠದೆ ಕೂಜಿತಮಂ ನೆಗಳ್ಚಿದಳ್ || ೧೪೫

ವ|| ಇಂತು ಸಮಾನುರಾಗದಿಂ ನೆರೆದಗಲದಿದ್ದಾರ್ತನಂ ನೋಡಿ ನಾಗರಿಕನಿಂತೆಂದಂ

ಕಂ|| ಅಸಿಯೊಳುಸಿರೆಲರನಾಸ್ವಾ |
ದಿಸುತಧರಾಮೃತವನಿಂಟಿ ಭೋಗಿತ್ವಮನಾಂ ||
ತಸಮಕುಚಕಲಶನಿಧಿಗಾ |
ದೆಸೆವಂಗೆ ಭುಜಂಗನಾಮಮೇಂ ಬಗೆವುಗದೇ || ೧೪೬

ವ|| ಎಂಬವಮಾತಂ ಮನವೊಸೆದಾಕರ್ಣಿಸುತ್ತಿರೆ ಮತ್ತಮೊರ್ವ್ವಳ್ಮೃಜ್ಜ್ಞಾ ಗಾತ್ರಿ ಮನದನ್ನನ ಮಾತಾಗಿ ಕೆಳದಿಗಿಂತೆಂದಳ್

ವೃ|| ಮೊಗದೊಳ್ನೋಳ್ಪೆನೆ ಮುಗ್ಧಭಾವಮವನೈತಪ್ಪಂದದೊಳ್ನೋಳ್ಪೆನೇ |
ಮಿಗೆ ಸೌಜನ್ಯಕಳಾಪ್ರಕಾಶತೆಯಿವಂ ನೋಳ್ಪಂದದೊಳ್ನೋಳ್ಪೆನೇ ||
ನೆಗಳ್ದ*ಳ್ಕಸ್ಸವಿಘಾತನಾಡಿ ನೆರೆವಾಗಳ್ನೋಳ್ಪೆನೇ ಕಾಂತೆ ಕೇ |
ಳ್ಮಗುಳಂಬಂಗೆಣೆಯೀತನಿರ್ಕ್ಕೆನಗೆ ತೋಳ್ಗೊಳ್ಜನ್ಮಜನ್ಮಂಗಳೊಳ್ || ೧೪೭

ವ|| ಅಲ್ಲಿ ಮತ್ತಮೊರ್ವ್ವಳ್

ವೃ|| ಕಡೆಗಣ್ಣಲ್ಲಮನಿತ್ತೊಡಲ್ಲಡೆಳಸಂ ಮೈಸಾರ್ದ್ದು ನಿಂದಲ್ಲದೊ |
ಳ್ನುಡಿಯಾಡಂ ನಿಜವಕ್ಷದೊಳ್ಗುರುಕುಚಂ ತಳ್ತಲ್ಲದಾಲಿಂಗಿಸಂ ||
ತೊಡೆ ಕಂಪಂಬಡೆದಲ್ಲದೊಂದಿ ಬೆರಸಂ ಕಾಮಾಂಬು ಕಯ್ಮಾರಮೆ |
ಲ್ಲುಡೆ ತಾನೇ ಸರಿದಲ್ಲದೊಲ್ದು ನೆರೆಯಂ ಮತ್ಪ್ರಾಣಕಾಂತಂ ಸಖೀ || ೧೪೮

ವ|| ಮತ್ತಮೊರ್ವ್ವಳ್ಬಲ್ಲಗಾತಿ ಮೂದವಿಯೊಡನೆ ನಗೆಮಿಸುಗೆ ಮೊಗಮಂ ನೋಡಿ

ವೃ|| ಸುರಿಯೆ ಸುಖಾಶ್ರುವಳ್ವಳಿವಳೆಂದತಿದೈನ್ಯಮನಾಡಿ ಕಂಪನಂ |
ನೆರೆಯೆ ಭಯಾರ್ತ್ತೆಗೆತ್ತಗಿದು ನೋಡಿ ಕರಾಗ್ರದೆ ಪೊಯ್ಯೆ ಕೋಪಸಿ ||
ರ್ಭರಯುತೆಯೆಂದು ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚಿ ಪ |
ಟ್ಟಿರೆ ಪರಮಾಯು ತೀವಿತಿವಳ್ಗೆಂದಿರದೋಡಿದನೊರ್ವ್ವನೂರಿಜಃ || ೧೪೯

ವ|| ಎಂದುಸಿದ್ದುನಿಜಸಖಿಯ ಬಗೆಗೆ ನಗೆಯಂ ಪಡೆದಿರ್ದ್ದಳಿತ್ತಲ್ಮತ್ತೊರ್ವ್ವ ವಿದಗ್ಧಾಂಗನೆ ಪರ್ಬ್ಬಿದ ಬೆಳ್ದಿಂಗಳೊಳ್ನಿಜಗೃಹದ್ವಾರದ ಪೊಂಜಗಲಿಯೊಳ್ಬಳಸಿದಬೆಲೆವೆಣ್ಗಳ ನಡುವೆ ಗಾಡಿಯಿಂ ಕುಳ್ಳಿರ್ದ್ದಿಂತೆಂದಳ್

ವೃ|| ನಯಸಂಪನ್ನನತೀವಯೌವನಯುತಂ ರೂಪಾನ್ವಿತಂ ನರ್ಮಗೋ |
ಷ್ಠಿಯನಾಳ್ವಂ ಕಡುನೀರನೂರ್ಜಿತಯಶಂ ಪಂಚಾಸ್ತ್ರಶಾಸ್ತ್ರಾರ್ಥನಿ ||
ಶ್ಚಯಚಿತ್ತಂ ಸುಭಗಂ ಪ್ರಸನ್ನನುಚಿತಜ್ಞಂ ಚಾಗಿ ಸಂಭೋಗಸಂ |
ಪ್ರಿಯನುತ್ಸಾಹಿಯೆನಿಪ್ಪನೊಳ್ನೆರೆವ ಪೆಣ್ಣಾರಂಭೆಯುಂ ಸಾಟಿಯೇ || ೧೫೦

ಖಲನೊಳಕ್ಕಾತರನೊಳ್ಕಳಾರಹಿತನೊಳಕ್ಕಪಟ್ಯಮಂ ಪೂಳ್ಪುದು |
ಬ್ಬಲನೊಳ್ದು ಮೂರ್ಖನೊಳ್ದುರುಕ್ತಿಪರನೊಳ್ದುರ್ಮಾರ್ಗದೊಳ್ಕೂರ್ಪನಾ ||
ಣಿಲಿಯೊಳ್ನಿಷ್ಠುರನೊಳ್ನಿತಾಂತಶಠನೊಳ್ನಿಸ್ನೇಹನುಂ ತೋರ್ಪನಂ |
ಚಲನೊಳ್ಸದ್ಗುಣಹೀನನೊಳ್ನೆರೆವಕೂಟಂನಂಜಿನೂಟಂಸಖೀ || ೧೫೧

ವ|| ಅದಂ ಕೇಳುತ್ತಿರ್ಪನಿತರೊಳಲ್ಲಿ ಪೆರತೊಂದು ತಾಣದೊಳ್ಕುಳ್ಳಿರ್ದ್ದ-
ಬಿಜನಿರವಂ ನೋಡಿ ನೀನೀತನೊಳ್ಕೂರ್ಪುದುಂಟೇ ಸಖಿಯೆಂದು ಬೆಸಗೊಂಡಾಳಿ
ಯೊಡನೊರ್ವ್ವಳ್ಸುಭಗೆ

ವೃ|| ಒಪ್ಪುದುಮಾಗಳೆಳ್ದು ಪಿಡಿದುಟ್ಟುದನುಚ್ಚುವನೊತ್ತಿ ಪಾಯ್ವನು |
ಳ್ಳಾರ್ಪು ಮಿಗಲ್ಕಡಂಗಿ ಕಡುಕಾತರಮುಣ್ಮಿರೆ ಕಾಯಜೀವಮಂ ||
ಬೇರ್ಪಡಿಪಂತೆ ಕೂಡುವನಿದೇಂ ಸಖಿ ಕೂಟಮೊ ಬೇಟದೋಟಮೋ |
ಕೂರ್ಪದನೀತನಂ ಕುಡುವಪೊಂಗಳನಾಸಿರದೊಟ್ಟಿ ಸುಟ್ಟಪೆಂ || ೧೫೨

ವ|| ಎಂಬನುಡಿಗೇಳ್ದವನಿಪಂಗೆ ವಿಟನಿಂತೆಂದಂ

ವೃ|| ನಗೆಯರಿದೈದೆ ನಾಣರಿದು ಮುದ್ದಿಸಿ ಪೊಂಪುಳಿನೆತ್ತಿ ಮೆಯ್ಯ ಪೊ |
ರ್ದ್ದುಗೆಯರಿದಂಟೆ ಸೋಲವರಿದೀಕ್ಷಿಸಿ ಕಾತರಮುಣ್ಮೆ ಮುಂಚುವಾ ||
ಬಗೆಯರಿದಪ್ಪಿ ಭಾವವರಿದೋತೊಡಗೂಡಿ ನಿತಾಂತಸೌಖ್ಯಮಂ |
ನೆಗಳದಗಾಂಪನೇನೊಲಿಸಲಾರ್ಪನೆ ಸೂಳೆಯರಂ ಧರಿತ್ರಿಯೊಳ್ || ೧೫೩

ವ|| ಎಂದರಸನ ಚಿತ್ತಕ್ಕೆಸರಿಸ್ಪೋದನಲ್ಲಿಗೆ ಮತ್ತೊಂದು ಮರಕತ ರತ್ನದಮೊ
ಗಸಾಲೆಯೊಳ್ಕುಳ್ಳಿರ್ದ್ದ ಸೂಳೆ ಪಾತಾಗಿವಿಟಂ ವಿಟ ನೊಡನೆ ನುಡಿದನವದೆಂತೆನೆ

ವೃ|| ಎಳಸುತ್ತಪ್ಪಿದೊಡಕ್ಷಿಯೊಳ್ಸುಖಜಳಂ ಮೆಯ್ಯೋರದಾಸ್ವಾಬ್ಜದೊ |
ಳ್ಕಳೆ ಕೈಮೀರದೆ ನೀವಿ ಜಾರದೆ ಸುಸಿಲ್ಗೈವಲ್ಲಿ ನಾಣ್ಗೊಂಡೊಡುಹು ||
ತ್ಪುಳಕಂ ಮೂಡದೆ ದೈನ್ಯಮುಡಸೆ ನಿತಂಬಂ ಮುಂಬಗಂಗೂಡದಿ |
ರ್ಪ್ಪಳ ಕೂಟಂಬಿಡದೇಳ ರಾಟಮುದನಾವಂ ನಚ್ಚುವಂ ಮೆಚ್ಚುವಂ || ೧೫೪

ವ|| ಮತ್ತಮೊರ್ವ್ವನಿದಿರೊಳ್ಕೈತಪ್ಪಟಕ್ಕುಗಾರ್ತಿಯುಂ ಕರಸಂಜ್ಞೆಯಿಂ
ಕೆಳೆಯಂಗೆ ತೋರಿ ಮೆಲ್ಲನಿಂತೆಂದಂ

ವೃ|| ಮಿಸುಗುವೆಬಟ್ಟಬಲ್ಮೊಲೆಯನೀವಧು ಮೇಲುದನಿಕ್ಕುವಂತೆ ಕಾ |
ಣಿಸಿ ಕಚಗಂಧಕಾರ್ದ್ರಗುವಾರಡಿಯಾನಡೆ ನೋಡುವಂತೆ ಕಾ ||
ಣಿಸಿ ಸವಿನೋಟಮಂ ಜಗುಳ್ವಕಾಂಚಿಯ ನೆತ್ತುವಪಾಂಗಿ ನಿಂದೆಕಾ |
ಣಿಸಿ ಸುಳಿನಾಭಿಯಂ ಬೊಜಗರಂಗದೆ ಕಾಣಿಪಳಂಗಜಾಗ್ನಿಯಂ || ೧೫೫

ವ|| ಅಂತುಮಲ್ಲದೆಯುಂ

ವೃ|| ಮೊದಲೊಳ್ನೋಟದೆಬೇಟಮಂ ಪಡೆದು ಕೂರ್ತ್ತೈತಂದ ಕಾಂತರ್ಗ್ಗೆಸಂ |
ಪದವಂ ಕಾಣಿಸಿ ಕೊಟ್ಟುದೊಲ್ಲದೆ ಕುಲಸ್ತ್ರೀಯಂತೆ ಕೂರ್ತ್ತಪ್ಪಿ ಸಂ ||
ಮದಮಂ ಪುಟ್ಟಿಸಿ ಮತ್ತೆಮತ್ತೆ ಒಗೆಯೆಂತಿರ್ದ್ದಂತೆ ಕೂಡುತ್ತೆ ಸೋ |
ಲ್ತುದನೊಲ್ದೀಕ್ಷಿಸಿ ಚಿಕ್ಕದೊಂದುಮುಳಿಸಿಂ ಸರ್ವಸ್ವಮಂ ಕೊಂಡಪಳ್ ||

ವ|| ಎನಲಾಸುಮಿವಳಬಗೆಯಂ ಮುಂಬಲ್ಲೆನೆಂದು ಕೇಳ್ದವಂ ಮಗುಳುತ್ತರಂಗುಡುತಿರ್ದ್ದನಲ್ಲಿ ಮತ್ತೊಂದುತಾಣದೊಳೊರ್ವ್ವನೊರ್ವ್ವಳೊಳ್ಸರ್ವವಲ್ಲಭೆಯಾದ ನಿನ್ನೊಲ್ಮೆಯನೆಂತು ನಂಬಲಕ್ಕುಮೆಂದು ನುಡಿಯಲೊಡನವಳಿಂತೆಂದಳ್

ವೃ|| ಸೂಳೆಯುಗರ್ವನಾದೊಡೆಸೆದೊತ್ತೆಯನಿತ್ತನ ತೋಳೊಳಿರ್ದ್ದ ಮೆ |
ಯ್ಮೇಳಕೆ ಮೆಯ್ಯನೀವುದುಚಿತಂ ಮನಮಿತ್ತೊಡೆ ಸಾಲದೇ ಮನಂ ||
ಮೇಳಿಸಿನಿಂದುದರ್ಕ್ಕೆ ಕುರುಪಲ್ತೆ ಸದಾದರಮುಂ ನಿರಾಶೆಯುಂ |
ಕೇಳಿಗೆ ಮುಂಚುಪಿಂದ್ರಿಯಮುಮಂಗದೊಳುಬ್ಬುವ ಸಾತ್ವಿಕಂಗಳುಂ ||

ಇದುಮಂನಂಬವೊಡೆ ಕುರುಲಂ ಬೆರಲಂ ಛೇದಿತ್ತಪೆಂತೊದಳಿಲ್ಲೆಂದು ನುಡಿದನಲೆಗಾರ್ತಿಯ ನುಣ್ಮಾತಂ ಕೇಳ್ದು ಸಂತಸಂದಾಳ್ದು

ವೃ|| ಬೆರಲಂಕೊಟ್ಟೊಡೆಬೇಟಮೇಂಕುರುಳುಮಂಕೊಯ್ದಿತ್ತೊಡೇಂಕೂರ್ಮೆಕೇ|
ಳರವಿಂದಾನನೆ ಮನ್ಮನಃಪ್ರಿಯಮದಲ್ತೀದೇಹಮುಂ ನಲ್ಮೆಯುಂ ||
ಬರಿಯುತ್ತಿತ್ತೊಡಿವೆಲ್ಲಮೇಂ ಪೊರಗೆ ಪೇರಂ ತೆತ್ತವರ್ಸ್ಸುಂಕಮೀ |
ವರೆ ಶೀರ್ಷಂಗುಡೆ ಕಣ್ಗಳೇಂ ಪೊರಗೆ ಕೂರ್ಪ್ಪಿಂದಿರ್ದ್ದೊಡೊಂದಕ್ಷಿಯಂ||

ವ|| ಎಂದ. ವರ್ಸ್ಸಮುಪ್ರೇಮದಿಂ. ನೆರೆದಿರ್ದ್ದರಿತ್ತಲೊರ್ವ್ವಬರ್ದ್ದಬಹು ಧನಸಂಪನ್ನರಾದಚೆಲ್ವ ಬೊಜಗರೆಳವೆಣ್ಗಳಾಲಯಕ್ಕೆ ಪೋಪುದಂ ಕಂಡು ಸೈರಿಸಲಾದಸೂಯೆಯಿಂದವರ್ಕ್ಕೆಳ್ವಂತೆ

ವೃ|| ಹರೆಯಮದಿರ್ದೊಡೇನೊ ನೆರೆವುಜ್ಜುಗಮುಂಟೆ ವಿಳಾಸಮುಂಟೆ ಕಂ |
ಠರವಮದುಂಟೆ ಸತ್ಕರಣಮುಂಟೆ ಕಳಾಜ್ಞತೆಯುಂಟೆ ಕಾಲಮಂ ||
ಪರಿಕಿಪುದುಂಟೆ ನಲ್ನುಡಿಗಳುಂಟೆ ರತೇಚ್ಛೆಯನಂತೆ ಪೆರ್ಚಿಪಾ |
ಪರಿಕರಮುಂಟೆ ಲಜ್ಜೆವೆರೆದೀಕೆಯರೊಳ್ರತಿ ಲಜ್ಜೆಯಲ್ಲವೇ || ೧೫೯

ವ|| ಎಂಬನಿತರೋಳ್ವಿಟಂಕೇಳ್ದವಳಿದಿರ್ಗೆವಂದು

ವೃ|| ಎನೆಮುರೆಯಾದೊಡೊಂದಿನಿತು ಸೈರಿಸಲಾರದ ಕೂರ್ಮೆ ಪೆರ್ಮೆವೆ |
ತ್ತವಿಭವಮಂ ವಿಚಾರಿಸದೆ ಪೊರ್ದ್ದಗೆ ವಂಚನೆಗೆಯ್ವುದಂಗಮೊ ||
ಪ್ಪುವಪವಿಧೋಪಚಾರವಚನಕ್ಕೆರ್ದೆಯಿಕ್ಕದಮುಚ್ಚೆವಿತ್ತಮೀ |
ವವನಿವನಲ್ಲವೆಂಬಬಗೆ ಪೊರ್ದ್ದದನಲ್ಮೆ ವಿದಗ್ಧೆಗುಂಟಪೇಳ್ || ೧೬೦

ವ|| ಎಂದವಳಂ ನಾಣ್ಚಿಸಿದನದಲ್ಲದೆ ಮತ್ತಮೊಂದೆಡೆಯೊಳೊರ್ವ್ವಳ್ಮೊದಲೆ ವಾತಾತಿ ನುಡಿಯೆ ಮುಳಿದ ಮಗಳ ಮೊಗಮಂ ನೋಡಿ

ವೃ|| ಪೋದೊಡೆ ಬಾರದೀಸೊಗಸುಜೌವನಮೀಗಳೆ ವಿತ್ತಮುಳ್ಳರಾ |
ರಾದೊಡಮೇನೊ ಮೇಣ್ಬರಿಸಿ ಮೆಲ್ಲೆರ್ದೆಯಂ ನೊದಲೊತ್ತೆಗೊಂಡು ಮ ||
ತ್ತಾದರಿಸುತ್ತೆ ಮನ್ಮಥಸುಖಾಬ್ಧಿಯೊಳಾಳಿಸಿ ತಂಗಿ ದೇಹಮಂ |
ತೇದು ರತಂಗಳೊಳ್ಪಣಮನಾಂ ಪಡೆಯೆಂದೊಡಿದೊಂದದೋಷಮೇ || ೧೬೧

ವ|| ಎಂದುನಿಜಾಭಿಪ್ರಾಯಮಂತಮರಸಿ ನುಡಿಯೆ ಕೇಳ್ದಮಗಳ್ಮಗುಳ್ದಿಂತೆಂದಳ್

ವೃ|| ಮೊಲೆಮುಗುಳೊತ್ತುವಂದುಮೊದಲಿಂದುವರಂ ಬಗೆದಂತಿರಿಚ್ಛೆಯಂ |
ಸಲಿಸಿ ಸಪೂಪದೊಳ್ನಲಿಸಿ ಮಗ್ಗುಲೊಳೊಗ್ಗಿಸಿ ಬೇಟಕೂಟಮಂ ||
ಕಲಿಸಿ ಕಲಾಳಿಯಿಂದೊಲಿಸಿ ಕೂರ್ತ್ತಮನಃಪ್ರಿಯನಂ ಬಿಡೆಂದು ನೀ |
ನೆಲೆಮುದುಪಾರಿದೊಳ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ || ೧೬೨

ವ|| ಪೆರಳೊರ್ವ್ವಳ್ಪೆರತೊಂದೆಡೆಯೊಳ್ಕುಂಟಣಿವಾತಾಗಿ ಕನಲ್ದು ತನ್ನ ಕೆಳದಿಗಿಂತೆಂದಳ್

ವೃ|| ಮುಸಗಿದ ಮಾರಿಯಂತೆ ಮುಳಿವಳ್ಪುಲಿಯಂತಿರೆ ಪೊಣ್ಮಿ ಗರ್ಜಿಪ |
ಳ್ಪಸಿದಹಿಯಂತೆ ಪಲ್ಮೊರೆವಳಗ್ಗದ ರಕ್ಕಸಿಯಂತೆ ರಂಜಿಪಳ್ ||
ಮುಸುಮೆನೆ ತನ್ನಮುತ್ತ ಮುಸುಡಿಂದಿರದೇಡಿಪಳೆನ್ನನಲ್ಲಸೊ |
ಳ್ಪಿಸುಗೆಯ ಬಿಚ್ಚಲಾಟಿಪಳಿವಳ್ಮದಿಗುಂಟಣಿ ಸಾಯಳೇವೆನಾಂ || ೧೬೩

ವ|| ಮತ್ತಮೊರ್ವಳ್ತನ್ನ ಕೆಳದಿ ವಿಟರೂಳ್ಮಾಳ್ಪ ಕೇಣಮುಂ ಕಂಡಿಂತೆಂದಳ್

ವೃ|| ವಿವಿಧವಿಳಾಸಮುಂ ಮೆರೆದು ವಕ್ತ್ರಸುಧಾರುಚಿಯಿಂದೆ ಪೊಣ್ಮವೀ |
ಸವಿನಗೆಯೆಂಬ ಸಾರಸುಧೆಯಂ ಸಲೆ ತೋರಿ ಭುಜಂಗವರ್ಗಮುಂ ||
ಸವಿನಯಮೊಲ್ದು ಮುಚ್ಚಿಪುದಿದಲ್ಲದೆ ಸೋಮ್ಮಡಿಯೆಂಬ ಕೇಕಿಯಂ |
ತವೆ ಮುಳಿದಾಳಿ ಪಿಂದಿರಿಗಿ ಕಾಣಿಸಿ ಪೋಗಿಪುದೇಂ ಸುಬುದ್ಧಿಯೋ || ೧೬೪

ವ|| ಮತ್ತಮೊರ್ವಳ್ಕೈತವಂ ಕೈಮಿಕ್ಕ ಕಾಳ್ಬೊಜಗನ ಮಾತಾಗಿ ಕಡು
ಕನಲ್ದು ಕೆಳದಿಯೊಡನಿಂತೆಂದಳ್

ವೃ|| ದಿನದಿನದಲ್ಲಿ ತಾಳ್ದಿರವಿನೊಳ್ಪೊಡವಂ ಪೊರಮಿಂಚುಗೈದು ಒಂ |
ದೆನಗಿನಿವಾತನಾಡಿ ಧನಮುಂ ಪಿರಿದಿತ್ತಪನೆಂಬನಾಳ್ಕೆಯುಂ ||
ಮನದೊಳಮುಚ್ಚಿ ಮುಚ್ಚಿ ನೆರೆದಿರ್ದಸಿತುಂದಿನ ಮೇಳ್ವುಪೋದನಾ |
ತನ ಬಲಿಗಟ್ಟಿ ಮನ್ಮಥಬಳಾಂಗೆ ಪೇಗ್ಗರಿಮಾಡಿ ಪೊಯ್ದಪೆಂ || ೧೬೫

ವ|| ಮತ್ತಮೊರ್ವಳ್

ವೃ|| ಒಳಿವಳಿಯಲ್ಲಿ ಬರ್ಪನುಪಚಾರವನಾಡುವ ನೊಯ್ಯನಿರ್ದೊಡಾ |
ಗಳಬಳಿಕೇಳ್ದು ಕಾಲ್ಪಿಡಿದು ನಂಬಿಪನಿತ್ತಮೆನೀಗಳೆಂದು ತ ||
ನ್ನೊಳೆ ಸಲೆ ತಾನೆಸೂರುಳಿಸಿ ತಪ್ಪುವನೇಕನೆ ಬಾಯ್ಗೆ ಬಂದವೋ |
ಲ್ಗಳಪುವನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ || ೧೬೬

ವ|| ಮತ್ತಮೊಂದೆಡೆಯೊಳ್

ವೃ|| ಇಲ್ಲದದೋಷಮುಂ ಬರಿದೆ ಕಲ್ಪಿಪನಲ್ಪಮೆನಿಪ್ಪತಪ್ಪನೊ |
ಯ್ಯಲ್ಲರೊಳಾಡುವಂ ಪುರುಡಿಪಂ ಪುರುಳುಳ್ಳೊಡೆ ಮುಚ್ಚನಿತ್ತುದಂ ||
ಸೊಲ್ಲಿಪನುಬ್ಬಸಂಬಡಿಪನೇಕನೆ ಲೆಕ್ಕಿಸನೆಯ್ದೆ ಸೂರುಳಿ |
ಟ್ಟಲ್ಲದೆ ನಂಬನೀದುರುಳನಂ ನೆರೆ ನೀಗುವೆನೆಂತು ಪೇಳ್ಸಖೀ || ೧೬೭

ವ|| ಇಂತನೇಕರಸಭರಿತಮಾದಚತುರೋಕ್ತಿಗಳನಾಕರ್ಣಿಸುತ್ತುಂ ರಸಿಕಸಖಿನಿಕರವನವಸಂತಂ ಸಂತಸಂ ಮಿಗೆ ಮುಂದಣ್ಗೆ ಪೋಗೆವೋಗೆ ಮತ್ತೊರ್ವರ್ಳ್ತನ್ನಮಗಳ್ದರಿದ್ರವಿಟನಂ ಮಚ್ಚಿ ್ದಿದಂ ಕಂಡು

ಕಂ|| ನಾಗಿಣಿವೊಲೀಭುಜಂಗನ |
ಭೋಗಕೆ ತನುವಿತ್ತೆ ಸಂಪದಂಬಡೆದಪೆಯೆಂ ||
ತಾಗಳ್ತನಗಿಲ್ಲದುದೀ |
ವಾಗರಿಮೆಯುದೆಂತೊ ವಕ್ರಗತಿ ನಿನಗಕ್ಕುಂ || ೧೬೮

ವ|| ಎನುತ್ತಿರೆ ಮತ್ತೊಂದುಕೇಳೀ ನಿಳಯದೊಳ್ಮಳಿದಿರ್ದ್ದ ಮನದನ್ನಳಂ ತಿಳಿಪಲೆಂದು ವಿಟಂ ನುಡಿಯಿಸುವಲ್ಲಿ

ವೃ|| ಎಲೆ ಕಾಯ್ವೇರಿದೆ ಚೈತ್ರವಲ್ಲರಿಯೆ ಗಂಧಂಗುಂದದಿರ್ದ್ದಪ್ಪೆ ಕಂ |
ಮಲರೇ ಸೋರೆಯನೊತ್ತಿ ವರ್ತ್ತಿಸುವೆ ಸಂವರ್ತಾಬ್ಧಿಯೇ ಬಂದುದೇ ||
ಕಲಿ ಮತ್ತೇಂ ಕೃತಮೇ ಕೃಪಾನ್ವಿತಮೆ ಚಿತ್ತಂ ಕೌರವಕ್ಷೋಣಭೃ |
ದ್ಬಲಮೇ ಕರ್ಣಕಠೋರ ಮಾನುಡಿಯಿದೇಂ ಪಾರ್ಥಾಸ್ತ್ರಮೇ ಮುಟ್ಟಮಿರ್||

ವ|| ಎಂಬಮುಹಾಪ್ರೌಢೆಯರ ಜಾಣ್ಣಾತಂ ಕೇಳ್ದು ಮಚ್ಚುತ್ತಿರ್ಪ್ಪನ್ನೆಗಮೊಂದುಮುತ್ತಿನ ಮೊಗಸಾಲೆಯ ಮುಂದಣ ಕನಕಮಯಕಮನೀಯವೇದಿಕಾಗ್ರದ ಕುಸುಮತಳ್ಪದೊಳ್ಕುಳ್ಳಿರ್ದ್ದ ವಲ್ಲಭೆ ನಲ್ಲನಂ ನೆಮ್ಮಿ ಚಲ್ಲದಿಂ ಮೆಲ್ಲಸಿಂತೆಂದಳ್

ಕಂ|| ವಾದಿಸಮನಾಂತನಾಮುಮ |
ನಾದಂ ತಳೆದಾತನಳೆದುದೇಂ ಭೋಗಿಜನಾ ||
ಹ್ಲಾದಕನಾವಂ ತಾರಕ |
ಭೇದಕನಾವಂ ಕುಮಾರನಲ್ತೆ ಮೃಗಾಕ್ಷೀ || ೧೭೦

ವ|| ಎನೆ ಮುಗುಳ್ದವಳೊಡನವನಿಂತೆಂದಂ

ಕಂ|| ವನದ ಸಮುಧ್ಯದ ಪರ್ಯಾ |
ಯನಾಮದೊಳ್ಗಮಿಪುದೇಂ ತದಾಶ್ರಯಮೇಂ ಜೇ ||
ವನಕೆ ಮುನಿವವನದಾವಂ |
ವನನಿಧಿಯೆಂತಪ್ಪುದೆನಗೆ ಪೇಳ್ಕಮಳಾಕ್ಷೀ || ೧೭೧
||ವಿದ್ರುಮಮಹಿತಂ||

ವ|| ಮತ್ತಮೊಂದು ಸೆಜ್ಜೆವನೆಯೊಳೊರ್ವ್ವ ಕ್ಕರಿಗಬೊಜಗಂ ಸೊಕ್ಕ್ಕಂ ಜೌವನೆಗೆ ಸಕ್ಕದದ ಬಹಿಲರ್ಾಪಿಯಂ ಪೇಳ್ವದೆಂತೆನೆ

ವೃ|| ಬ್ರಹ್ಮಾಣೀ ಕಾ ಜನೇಷ್ಟಂ ದದತಿ ಝುಡಿತಿ ಕೇ ತಾಪಸಾಂಗಂಚ ಕೀದೃ|
ಕ್ಪ್ರೀತಾ ಕಾ ಕುತ್ರ ವಿಶ್ವಂ ನಿವಸತಿ ವಿಬುಧಾಬೋಧನಂ ಕಿಂ ನೃಪಾಲಃ ||
ಕಸ್ಯೈ ಸಂನದ್ಧ ಈಶಃ ಪಠಿರತಿ ವಿದಿತಃ ಕಸ್ಯ ವಂದ್ಯಾಜ ಕೌ ಕಿಂ |
ವಕ್ತ್ರೀಶಂ ಕೌ ಜಗತ್ಸಂಹರಣಭರಣಕೌ ಮಂಗಳೋಕ್ತಿಃ ಕವೇಃ ಕಾ ||೧೭೨

ವ|| ಎನೆ ಕೇಳ್ದವಳ್ಕಾಳಿದಾಸಕವಿರಚಿತಕಾವ್ಯಾದಿಮಾಂತಲರ್ಾಪಿಯಿನುತ್ತರಂಬೇಳ್ದವನ ಚಿತ್ತಂಬಡೆದಿದ್ದ್ಕಿತ್ತಲ್ಮತ್ತೊಂದೆಡೆಯೊಳೊರ್ವ್ವಮತ್ತಕಾಶಿನಿ ಕಾಂತನೊಳ್ಪ್ರಹೇಳಿಕೆಯಂ ಸೊಲ್ಲಿಸಿದಳದೆಂತೆನೆ

ಶ್ಲೋ|| ರಸೇನ ಸಾಧ್ಯತೇ ಸರ್ವಂ |
ಮತೇನ ಧ್ರಿಯತೇ ಮಹೀ ||
ಅಸಾರೆ ಕ್ರೀಡತೇ ಹಂಸಃ |
ಕವಿಶೇಷೇ ಕಿಮದ್ಭುತಂ ||

ವ|| ಇಂತಪ್ಪನೇಕವಿಧಚತುರಗ್ರಂಥಂಗಳಂ ಕೇಳ್ದು ಮಚ್ಚುತ್ತುಂ ಚತುರಜನಮನಶ್ಚಕೋರಚಂದ್ರಂ ನಾಗರಿಕನೊಳ್ಪೊಗಳುತ್ತಿರೆ ಮತ್ತೊಂದುಮಣಿಭವನದಂಗಣದೊಳ್ಮತ್ತೆಯೊಡನೆ ಮುಳಿದು ಮಗಳ್ನಿಂದಿರ್ಪ್ಪುದುಮವಳ್ಪಿಡಿದಿಂತೆಂದಳ್

ವೃ|| ಮಗಳೆ ಮನೋಜ್ಞಮಾತೆ ಮಿಗಿಲಿತ್ತೊಡೆ ವಿಾರದಿರಾತನಾಜ್ಞೆಯಂ |
ಮುಗುಪೆ ಕಳಲ್ಚಿ ನುಡಿಕತೆಯ ಮೇಣದ ಪುತ್ಥಳಿಯಂತೆ ಮೆಯ್ಯನಿ ||
ತ್ತಗಲದೆ ಕೂಡಿ ಮೋಹಿಸಿ ಧನಂಬಡೆ ಮಾನಮಿದೇಕೆ ಮಂದಿರಂ |
ಬುಗು ನಡೆ ಮಸ್ತಕಂದೊಸೆಯುದಿಕ್ಕ್ಡುಮೂರ್ಖತೆಬೇಡ ಕಾಮಿನೀ ||೧೭೪

ಮತ್ತೊಂದು ಗೃಹಾಂತರಾಳದೊಳ್ಕುಳ್ಳಿರ್ದ್ದ ಜಘನ್ಯಭುಜಂಗನಂ ತೋರಿ ಕೆಳದಿಯೊಡನೆ ಪದದಿಂದಿಂತೆಂದಳ್

ವೃ|| ಪರಮಶ್ಲಾಘ್ಯಗುಣಾಂ ಸದಾಮುದಹಿತಂ ಶೌರ್ಯೋತ್ತರಂ ಗಂಧಬಂ |
ಧುರನೆಂದುಂ ನರಸಾರಮೀಯನಬಳಾಪ್ರೇಮಾಸ್ಪದೋದ್ಯದ್ವನೇ ||
ಚರನೇತತ್ಪ್ರಸ್ಯನನಂಗರೂಪನತನು ಕ್ರೀಡಾವಿನೋದಂ ಮನೋ |
ಹರನೀತಂ ನಸುಪಿಂಗೆ ಬರ್ಕ್ಕುಮೆನಗೀಗಳ್ಸಾರವಶ್ಯಂ ಸಖೀ || ೧೭೫

ವ|| ಎನೆ ತನ್ನಂ ಪೊಗಳ್ದಪಳೆಂದು ಮುದಂಬಡೆದಿರ್ದ್ದನಲ್ಲಿ ಪಾಕ್ಕೊಂದೆಡೆಯೊಳ್ಳಶಿಕಾಂತಕಾಂತಕೇಳಿನಿಕೇತನದೊಳ್ಪಂಚತ್ಕಾಂಚನಮಂಚದ ಮೃದುಳಧವಳಶಯ್ಯಾತಳದೊಳೊಯ್ಯನೆ ರಯ್ಯಮನೆ ಕಯ್ಯಂ ಪಿಡಿದು ಮೆಯ್ಯಂ ನೋಂಕಿ ಮನದನ್ನಳೊಡನೆ ಮದನಕೇಳಿಗೆಳಸಿ ಮಹೋತ್ಸವದಿಂ ಮನೋರಮಣಾಂ ಕುಳ್ಳಿರ್ದ್ದ ನೇಹಂ ಮಿಗೆ ನಿರೀಕ್ಷಿಸಿ

ವೃ|| ಅಂದುಗೆಯುಂ ಕಳಲ್ಚಿ ಪೊಸಮಾಕುತಿಯುಂ ಬಿಡಮೇರನೂಂಕಿ ತ |
ಳ್ತಂದದ ಹಾರಮುಂ ಕೊರಲ ಹತ್ತಸರಕ್ಕೆ ತೊಡರ್ಚ್ಚಿ ಸಾರ್ಚ್ಚಿ ಜೆ ||
ಲ್ವೊಂಟಡಕೇಶಮುಂ ಬಗಿದು ಬಂಧಿಸಿ ನೋಳ್ಪಿಸಿಜೇಶನಿಚ್ಛೆಯುಂ |
ಸುಂದರ ನೋಡಿ ಕಯ್ಗಡಗಮುಂ ತೆಗೆದಾತನ ಕೈಗಮರ್ಚ್ಚಿದಳ್ || ೧೭೬

ಹಸನರಸಂ ಮುಖಾಂಬುಜರಸಂ ಬೆಂಸುತ್ತಿರೆ ಕುಂಡಲಂಗಳುಂ |
ಮಿಸುಪಕುಚಂಗಳುಂ ಕುಣಿಯೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ ||
ಪಿಸೆ ನಿರುಸುಯ್ಗಳುಂ ಭ್ರಮರಕಂ ಪರೆದೊಪ್ಪಿರೆ ಘರ್ಮವಾರಿಗ |
ಳ್ಸಸಿಲ ರಸಂಗಳುಂ ಸುರಿಯೆ ಜಾಣ್ಮೆ ಜವಂಗೆಡದೊತ್ತಿ ಕೂಡಿದಳ್ || ೧೭೭

ಪ್ರಿಯಕರಬಕ್ಷತೇಂದು ಕಳೆಯೊಂದೆ ಭಯಂಬಡೆದಂತುರೋಜಚ |
ಕ್ರಯುಗಳಮುಂ ಕಡಕ್ಕಡಿಸೆ ಸಂಪಗೆಗಂಪನಮರ್ಚ್ಚಿತೇಳ್ವಸುಯ ||
ರಯದೊಳೆ ತಾಗೆ ತಲ್ಲಣಿಪಪೋಲ್ಪಲಿಸುತ್ತಿರೆ ಕುಂತಳಾಳಿ ಕಾಂ |
ತೆಯ ಜಡಿವಾವು ಪೊಯ್ದಡಗಿದಂತೆ ಬೆಮತ್ತುದು ವಕ್ತ್ರಚಂದ್ರಮುಂ || ೧೭೮

ವ|| ಇಂತು ಸವಿಸುಸಿಲ ಸೊಗಸುನನುಭವಿಸಿದನಂತರಂ

ಉ|| ಮುಗಿದಲರ್ಗಂಗಳಿಂ ಪರೆದಕುಂತಳದಿಂ ಬಿಡದೇಳ್ವಸುಯ್ಗಳಿಂ |
ತೆಗೆಬಗೆಗೊಂಡು ಮಯ್ಮರೆವಚಿತ್ತದಿನುಣ್ಮುವ ಘರ್ಮವಾರಿಯಿಂ ||
ಮಿಗೆ ರಸವಾರಿದಿಂದುಟಿಯಿನಾರತಿಮೂರ್ಛಿತೆ ಜೋಲ್ವದೇಹದಿಂ |
ಸೊಗಯಿಸಿದಳ್ಬುಜಂಗಪರಿದಷ್ಟತೆಯುಂ ತವೆಸೂಚಿಪಂದದಿಂ || ೧೭೯

ವ|| ಅವಳಂ ನಾಗರಿಕಂ ನೋಡಿ ಪೊಗಳ್ವನಿತರೊಳೊರ್ವ್ವ ವೃದ್ಧನೊತ್ತೆ ಗುಡಲೆಂದು ಬಂದಿರೆ ಮತ್ತೊರ್ವ್ವಳ್ಪಲೆ ಮೆಲ್ಲನೆ ಪೊರ್ದ್ದಿ ನಗುತಿಂತೆಂದಳ್

ವೃ|| ತರಳಸಿದಾವನೊತ್ತೆಗುಡಬಂದಪನಕ್ಕಟ ಕಾಣನೇಕೆ ಕ |
ಣ್ಗುರುಡನೊ ದಂಡಮಂ ಪಿಡಿದನಲ್ಲವೆನುತ್ತಿದೆ ಶೀರ್ಷಕಂಪನಂ ||
ತೆರೆಯಿದು ನೋಳ್ಪೊಡಾಸ್ಯರಸದಿಂ ನೆಗೆದಿರ್ದ್ದುದೊ ಗಡ್ಡಮೀಸೆಯೊ |
ಳ್ಪರೆದಿದೆ ಬೆಳ್ಪು ನಿರ್ಗತರದದ್ಯುತಿಗೆಂಡುದೊ ತಾನಿದದ್ಭುತಂ || ೧೮೦

ವ|| ಮತ್ತಮದಲ್ಲದೊರ್ವ್ವವೃದ್ಧಾಂಗನೆ ತಲೆವಾಗಿಲೊಳ್ನಿಂದು ಬೆಲೆವೆ ಣ್ಗಳಂಗಸಂಗದಿಂಗಿತಮಂ ಬಲ್ಲ ಬರ್ದ್ದಿನ ಬೊಜಗರಂ ಮರುಳ್ಮಾಳ್ಪಬಲ್ಮೆಗೊಲ್ಮೆ ಗಾನೇ ನೋಂತೆನೆಂದುಸಿರ್ವ್ವನಿತರೊಳಾಕರ್ಣಿಸಿ ವಿದೂಷಕನವಳಿರ್ದ್ದೆಡೆಗೆ ಸರಸ ರನೆ ಪೋಗಿ

ಕಂ|| ಉದರದ ವಳಿಗಳ್ನಿನ್ನಯ |
ವದನಮನೈದಿದುವು ಕುಚದ ಬಿಣ್ಪುದರಮನೈ ||
ದಿದುದಳಕಮೈದಿದುದು ಕ |
ಣ್ಗದಿರಿದು ಮುದಿಪಾರ ಪೇಳಿದೇನಚ್ಚರಿಯೋ || ೧೮೧

ವ|| ಪೆರತೊಂದೆಡೆಯೊಳೊರ್ವ್ವಂ ಪರಿಹಾಸರಸಪ್ರಕಾಶಕಂ

ವೃ|| ನೆಗೆದಪಯೋಧರದ್ವಯಮಿದೇಕೆಲೆ ಬಿಳ್ದುದು ಬರ್ದ್ದೆ ಪೇಳ್ವುದೆಂ |
ದಗಿಯದೆ ಕೇಳೆ ಪೇಳ್ದಳವನೊಳ್ವಿಟಸೀಂ ರತಿಕಾಲದಲ್ಲಿ ಕೆಂ ||
ಮಗೆ ಕರಮಿಟ್ಟು ಮರ್ದಿಸುತೆ ಹೂಂಕೃತಿಗೆಯ್ದಿಡನರ್ಧಚಂದ್ರನಂ |
ಮಿಗೆ ಕುಡೆ ಕಾಮಗೇಹಕದನಾಮದನಂಗಿದು ಪೇಳಲ್ಕೆದುಗುಂ || ೧೮೨

ವ|| ಮತ್ತಂ

ಕಂ|| ಎಳೆಯಳೆ ನೀನಲ್ಲಳೆ ಪೇ |
ಳೆಳೆಯಳೆನಿನ್ನಳಕಕಾಂತಿಯೆಲ್ಲಿದೆ ಪೇಳೆ || .
ನ್ನೊಳೆ ನೀನಬಳೆಯೆ ಪೆರತೇಂ |
ತಿಳಿವೊಡೆ ನೀನಬಳೆಯೆಂಬುದರಿಯದೆ ಲೋಕಂ || ೧೮೩

ವ|| ಎಂಬವೊತಂ ಕೇಳ್ದು ವಿನೋದಮಕರಂದ ಮಧುವ್ರತಂ ನಸುನಗುತ್ತುಂ ಒರೆವರೆ ಮುಂದೊಂದುಚಂದ್ರಮಣಿರಮಣೀಯಕುಟ್ಟಿಮಸ್ಥಳದೊಳುನ್ಮತ್ತಯೌವನಾಂಗಿ ಯೊರ್ವ್ವಳ್ಸರ್ವ್ವಲ್ಲಭಾಜನಮಧ್ಯದಲ್ಲಿ

ವೃ|| ಬಿಡುಮುಡಿ ಬೆನ್ನೊಳಾಡೆ ಕುರುಳುಂ ಪಣೆಯೊಳ್ಕುಣಿದಾಡೆ ಪೊಣ್ಮೆ ಪೊಂ
ಗೊಡವೊಲೆಯಲ್ಲಿ ಹಾರಮೊಲೆದಾಡೆ ನಿಜಶ್ವಸಿತೋರುಸೌರಭ ||
ಕ್ಕೊಡನೆಡೆಯಾಡೆ ತುಂಬಿ ಮಿಳಿರ್ದಾಡೆ ಕಟಾಕ್ಷಮರೀಚಿ ಕುಂಡಲಂ |
ಬಿಡದಮರ್ದಾಡೆ ಗಂಡದೊಡನಾಡಿದಳಂಗನೆ ಚಂಡನಕ್ತಿಯಿಂ || ೧೮೪

ಜಡಿಯುತ್ತಿರೆ ನುಣ್ಮೊಲೆಯುಂ ಮುಡಿಯುಂ |
ಪೊಡರುತ್ತಿರೆ ಪೂರ್ಣ್ಣಘನಂ ಜಘನಂ ||
ಸಡೆಯುತ್ತಿರೆ ತೆಳ್ವಡುವುಂ ತೊಡೆಯುಂ |
ಪೊಡೆದಳ್ಪಿಡಿದಳ್ಪುಟಚೆಂಡನವಳ್ || ೧೮೫

ವ|| ಮತ್ತಂ

ವೃ|| ಸಿರಿಗಾನಂಪಾಸವಾಡೆಂ ಹರಿಗೆ ನಯನಮಾಬೊಮ್ಮನೆನ್ನಾತ್ಮಜಂ ಭಾ |
ಸ್ಕರನಾಪ್ತಂ ನೋಡದೆನ್ನೊಂದಳವನೆಲೆ ಕಲಂಕಾಶ್ರಯಂ ರಾಹುದಷ್ಟಂ ||
ಚಿರದೋಷಾವಿಷ್ಟನಾದಂ ಕ್ಷಯಿ ಪಗೆತನಗೊಂಡಂಗಡಾ ಯೆನ್ನೊಳೀಚಂ |
ದಿರನೆಂದಂಭೋರುಹಂ ಪೊಯ್ದುಪುದಿದನೆನೆ ತತ್ಪಾಣಿ ಪೊಯ್ದತ್ತು ಚೆಂಡಂ ||

ವ|| ಅಂತವಳೆಂದವಂ ಕಂಡಿದು ನೋಟಕಬೊಜಗರೆರ್ದೆಯೊಳ್ಕಂತುಕಾಲಾಗ್ನಿಯುಂ ಪೊಯ್ವಂದಮಲ್ಲದೆ ಕಂತುಕಮಂ ಪೊಯ್ವಂದಮಲ್ಲೆಂದು ನಾಗರಿಕಂ ಸೊಲ್ಲಿಸುತ್ತುಂ ಬರೆವರೆ ಮತ್ತಮೊಂದುಬಿತ್ತರಂಬಡೆದಬಜ್ಜರದ ಸೌಧಾಂಕಣದೊಳ್ಕೈಗೆಯ್ದಪದ್ಮರಾಗರುಚಿನಿಚಯ ಕವಚಿತಸಮುತ್ತುಂಗ ಶಾತಕುಂಭಸ್ತಂಭಂಗಳಿಂ ಸಮುಚಿತಸ್ಥಾನದೊಳಿರಿಸಿ ನಿರ್ಮ್ಮಿಸಿದಮರಕತಾದಿ ಮಣಿಮಯಮಯೂರ ಮಂಡಿತಮಧ್ಯಸ್ಥಳತುಳಾದಂಡದಿನೆಡೆಯೊಳ್ತೊಡರ್ಚ್ಚಿದ ಮಳರಮಣೀಯಮಣಿಮುಕುರಘನ ಕಳಶಘಂಟಿಕಾ ಝುಣಝುಣಿತ ಕಿಂಕಿಣೀಜಾಲಮಾಳಿಕಾಪಙ್ಕ್ತಿಯಿಂ ತುದಿವಳಸಿನೊಳೆಳಲೆವಿಟ್ಟಳವಡಿಸಿದ ರುಚಿರಚಾಮರಹೇಮ

ಚಂಪಕೋದ್ದಾಮದಾಮವಿಚಿತ್ರಚಿತ್ರಾಂಬರ ವಿತಾನದಿನಮೞ್ಚಿ ರಚಿಸಿದ ಕಮ
ನೀಯತಪನೀಯಶೃಂ ಖಲಾಚತುಷ್ಕಸಂಘಟಿತ ಸಮುಜ್ವಳ ವಜ್ರಮಣಿಪರ್ಯ
ಕಿತ ಪಟ್ಟದಿನಳಂಕೃತಿವೆತ್ತೆಸೆವನವಿಲುಯ್ಯಾಲೆಡೆಗನಂಗಲಕ್ಷ್ಮಿಯಂತೆ ಸಖೀಜನಂ
ಬೆರಸು ಬಂದಾಂದೋಳಕೇಳೀಸಮಯಸಮುಚಿತೋಪಚಾರಮುಂ ಮೆರೆದು

ವೃ॥ ಏರೆ ಮನೋಜಜಯಲಕ್ಷ್ಮಿಗೆ ಪೂರ್ಣವಿಳಾಸವಾರ್ಧಿ ಸೀ ।
ರೇರೆ ಸಖೀಜನಕ್ಕೆ ಪದೆದೀಕ್ಷಣ ಗಡೊಳಂಗಜಾಗ್ನಿ ಕಾ ॥
ಯ್ವೇರೆ ನಿಜಾಂಘ್ರಿಪಂಕಜನಿಪಾತಭಯಂ ಶಶಿಗೇರೆ ಸೀರ್ವೆ ತಾ ।
ನೇರಿದಳುಯ್ಯಾಲಂ ಒಗೆಗೆ ಸಂತಸವೇರೆ ವಸಂತರಾಜನಾ ॥ ೧೮೭

ವ॥ ಅಂತೇರಿ ಮಣೆಯಂ ಮೆಟ್ಟಿ ಮಣಿದು ನಿಂದು

ವೃ॥ ಮೆಯ್ಯ ಕುಂಕುಮ ಮಿನದ್ಯುತಿಯುತ್ತಂ ಪಬ್ಬಿರೆ ಬಿೞ್ದಚಕ್ರಮುಂ
ರಯ್ಯಮಾಗುತಲರ್ದಬ್ಜಮುಮಾಶೀತಾಂಶುಗೆ ದಾಳಿಯುಪೋಪವೋಲ್ ॥
ಸುಯ್ಯಗಾಳಿಗಲೆವಂಚಲದಿಂದಂ ತೋರ್ಪಕುಚಂ ಮೊಗಮೊಪ್ಪಲಂ ।
ದುಯ್ಯಲಾಡಿಸುತೆ ನೋಳ್ಪರಕಣ್ಣಂ ಕಾಮಿನಿ ಯಾಡಿದಳುಯ್ಯಾಲಂ ॥ ೧೮೮

ವ॥ ಮತ್ತಮೊರ್ವ್ವಳಪೂರ್ವಸೌಂದರ್ಯವತಿ ತನ್ನಪೊನ್ನಕನ್ನೆಮಾಡದ
ಕೆಲದ ರಾಜಾಂಕಣದ ಪಜ್ಜೆಯ ಕುಟ್ಟಿಮಸ್ಥಳದೊಳಳವಟ್ಟರನ್ನದುಯ್ಯಾಲನೇರಿ
ಚಂದ್ರಿಕಾಸಾಂದ್ರಪೀಯೂಷವಾರ್ಧಿಯೊಳೋಲಾಡುತೊಗೆತಪ್ಪಕಮಳೆಯಂತೆ
ಕಮನೀಯತೆಯನಪ್ಪುಕೈದು

ವೃ॥ ಗಗನಸರೋಜಮಿಲ್ಲೆನಿಪವಾಕ್ಯಮನಿಲ್ಲೆನಿಪಂತೆ ನುಣ್ಮೊಗಂ ।
ಬಗೆಗೊಳೆ ಬಾನೊಳಾಗಳದರೊಳ್ಮರಿದುಂಬಿಗಳಾಡುವಂತೆ ಮೆ ॥
ಲ್ಲಗೆ ನೆಗೆದಾಡೆ ಮುಂಗುರುಳಸಾಲ್ಗಿರಿಗಳ್ತರಿಯೊಳ್ಪಳಂಚಲೆಂ ।
ದಗಿಯದೆ ಪಾರುವಂತೆಸೆಯೆ ಪೆರ್ಮೊಲೆಗಳ್ಪದೆದುಯ್ಯಲಾಡಿದಳ್ ॥ ೧೮೯

ವ॥ ಮತ್ತಮೊರ್ವ್ವಳಲಘುತರನಿತಂಬಬಿಂಬೆ ಸಂಭ್ರಮಂಬೆರಸು ಸಖೀಜ
ನಮಧ್ಯದೊಳಂದಂಬಡೆದಾಂದೋಳಮನಾಡುವಾಗಳ್

ಕಂ॥ ಅಳಿಪಿಂ ನೋಳ್ಪರ ದೃಷ್ಟಿಗ ।
ಳಳಂಕೆಯಿಂ ನೂಂಕೆ ಭೋಂಕನೊಗೆವವೊಲೆನಭ ॥
ಸ್ಸ್ಥಳಕಮರ್ದು ತನ್ಮನಂ ಒರ ।
ಸೆಳೆಯೆ ಮಗುಳ್ದಿೞಿವ ಭಾವಮಂ ಬಗೆಗಿತ್ತಳ್ ॥ ೧೯೦

ವ|| ಇಂತೊಪ್ಪುವನಂತ ಕಾಂತಕಾಂತಾಸಂತಾನ ಕಂತುಪ್ರಧಾನನಾನಾ ವಿಳಸಿತವಿಳಾಸಮುನಿಳಾಪತಿಸುತನಲ್ಲಿಗಲ್ಲಿಗೆ ನಿಂದು ನಿಂದೀಕ್ಷಿಸುತ್ತೆ ವಿಂತಪಜನ ಮುಖಸಖನಿಕರದೊಳ್ನುಡಿಯುತ್ತುಂ ನಡೆತರುತ್ತುಮಿಪ್ಪಾಗಳ್

ವೃ|| ಕಜತ್ಕಾರಂಡಕಾದಂಬಕಮುಖವಿಕಿರತ್ಪಕ್ಷತಿಕ್ಷುಬ್ಧಬದ್ಧಾಂ |
ಭೋಜಭ್ರಾಜಿಷ್ಣುಬದ್ಧಾದರಸರದಳಿಸುಸ್ನಿಗ್ಧಗಂಧಾನುಬಂಧಂ ||
ರಾಜಾಸ್ಯಾವೇಕ್ಷಣೋನ್ನಿದ್ರಕುಮುಗಮುಕುಲಾರಂಭರಂ ಭೋರುಕುಂಭೋ
ರೋಜಶ್ರೀಖಂಡಮಿಶ್ರಶ್ರಮಜಳಕಣಿಕಾಹಾರಜೋರಂ ಸಮೀರಂ ||೧೯೧

ಕಂ|| ಸುಳಿದುದು ಬೆಳಗಪ್ಪುದಸೊ |
ಲ್ದಿಳೆಯರಸಂಗೈದಿ ಪೇಳ್ವವೇಳಾಚರಸಂ ||
ತಳಿಕುಳಮರಾಳಕಳಮುಂ |
ಜುಳರವವಿಜ್ಞಾಪನ್ಯೈಕರವನಾಪವಸಂ || ೧೯೨

ವ|| ಅನಂತರಂ

ವೃ|| ಪದಪಿಂದಿಂತಪ್ಪನಾನಾವಿಧ ರತಿರಸಸಂಮಿಶ್ರವೇಶ್ಯಾವಿಳಾಸಾ |
ಸ್ಪದಚಂಚಜ್ಚಂದ್ರಿಕಾಸಂಪದವ ಸಫಳಮಪ್ಪಂತೆವೋಲಾತ್ಮಾಡಿ ಬಂದ ||
ಗ್ಗದಮಿತ್ರಶ್ರೇಣಿಯಂ ಮನ್ನಿಸಿ ಕಳಿಪಿ ನಿಜಾಂತಃಪುರಕ್ಕೈದಿದಂ ಸಂ |
ಮದಕೃದ್ಗೌರೀಶ ಪೂಜಾಪಿತಮತಿ ಶಿವಸಿದ್ಧಾಂತ ದುಗ್ಧಾಬ್ಧಿಚಂದ್ರಂ ೧೯೩

ಭೃಂಗವೇಣಿ ಶುಕವಾಣಿನಿರ್ಮಿತಾ |
ನಂಗನೇತ್ರೆ ಸುಚರಿತ್ರೆ ನಿರ್ಜರೋ ||
ತ್ತುಂಗಸೇವ್ಯೆ ಮುನಿಭಾವ್ಯೆ ಶಂಕರಾ |
ರ್ಧಾಂಗಸಂಗೆ ಜಯ ಸರ್ವಮಂಗಳೇ || ೧೯೪

ಗದ್ಯ|| ಇದು ವಿನಮದಮರವರಮುಕುಟತಟಘಟಿತಮಣಿಗಣ ಮಹಾಪ್ರಭಾಪಟಲಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರ ರುಚಿರುಂದ್ರಚಂದ್ರಿಕಾಚಂಚಚ್ಚಕೋರಾಯಮಾನಸರಸಜನಮಾನಿತೋಭಯ ಕವಿತಾವಿಶಾರದಶ್ರೀಷಡಕ್ಷರದೇವವಿರಚಿತಮಪ್ಪ ರಾಜಶೇಖರವಿಳಾಸ ವಿಪುಳಪ್ರಬಂಧದೊಳ್ರಾಜಶೇಖರ ನರೇಂದ್ರ ಚಂದ್ರಿಕಾವಿಹರಣವರ್ಣನಮೇಕಾದಶಾಶ್ವಾಸಂ

ಸಂಪೂರ್ಣಂ

# ದ್ವಾದಶಾಶ್ವಾಸಂ.



ಕಂ|| ಶ್ರೀಕಾಳೀ ನವಯೌವನ |
ಮಾಕಂದಶುಕಂ ಶುಕಾದಿಮುನಿಜನಹೃದಯಾ ||
ಬ್ಜಾಕರಮರಾಳನಮಳಗು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಮತ್ತಮಾಗಳ್ ಬ್ರಾಹ್ಮೀಮುಹೂರ್ತಮೆಂಬ ಪೂಜಾಮುಹೂರ್ತದಲ್ಲಿ

ವೃ|| ಹಿಮಸಂಮಿಶ್ರಾಂಬುವಿಂಮಜ್ಜನಮನೊಲವಿನಿಂಮಾಡಿ ದೇವಾಂಗಮಂ ತಾ
ಳ್ದಮಳಾಂಗಂ ಭೂತಿರುದ್ರಾಕ್ಷಮನಮರೆ ನಿಜಾಂಗಂಗಳೊಳ್ಧಾರಣಂಗೆ ||
ಯ್ದು ಮಹಾಮಂತ್ರಾಂತರಂಗಂಸಮುಚಿತವಿಧಿಯಿಂಪೂಜಿಸುತ್ತಿರ್ದ್ದನಾನಂ|
ದಮನಾದಂ ಪೊರ್ದ್ದಿ ಗೌರೀರಮಣನಡಿಗಳಂ ಶೈವವಿದ್ಯಾಸಮುದ್ರಂ || ೨

ವ|| ಅಂತಾಮಹೀಕಾಂತನೇಕಾಂತದೊಳುಮಾಕಾಂತನನರ್ಚಿಸುತ್ತು
ಮಿರೆಯಿರೆ

ವೃ|| ಒದೆದುದ್ಯಗ್ಗೀಹಪಾರಾವತದ ನಿನದಮಂ ತಾಮ್ರಚೂಡವ್ರಜೋನ್ನಾ |
ದದ ಪೆರ್ಚ್ಚಂ ಪೊಯ್ದುಳಿಧ್ವಾನಮನೆ ತುಳಿದು ಗಾಣಿಕ್ಯಹವ್ಯಾಗ್ರಗಾಯ ||
ತ್ಸ್ವದತೀಸಂಗೀತ ತಾರಸ್ವರಮನಲೆದು ದಿಕ್ಪಾರಮಂ ಪರ್ಬ್ಬಿ ರೋದೋಂ
ತದೊಳೆತ್ತಂ ಸುತ್ತುತಿರ್ದ್ದತ್ತ್ರಿಭವಭವನಸಂಪೂರಿತಂ ಶಂಖನಾದಂ || ೩

ಕಂ|| ನೆರೆದಿರುಳಿರುಳೆರೆಯನೊಳುರೆ |
ಸುರತಾಂತದ ಮೂರ್ಛೆದಳೆಯೆ ಕೆದರ್ದವೆಳಳಕೋ ||
ತ್ಕರಮೆನೆ ಮುಗುಳ್ದುಂ ಮಬ್ಬಾರ್ |
ಪರಿಸಿದುದೆಲ್ಲೆಡೆಯೊಳಸತಿಯನ್ನರಲಿಯಲೊಡಂ || ೪

ವೃ|| ಪೊದೆಯುತ್ತುಂ ಮೇಲುದಂ ಮೆಲ್ಲಡಿಯಿಡುತಿಳಿಯೊಳ್ಮೆಲ್ಲನಲ್ಲಲ್ಲಿ ನಿಂದಿ |
ರ್ದ್ದಿರದಿರಂ ಕಣ್ಮೆಂಚದಂತೀಕ್ಷಿಸುತೆಡಬಲದೊಳ್ಪೊಪ್ಪುಳಾರ್ದ್ವೃತುಂ ಬಿ ||
ಚ್ಚಿರ್ದನೀವೀಬಂಧಮುಂ ಬಂಧಿಸುತಳಿದಳಕಶ್ರೇಣಿಯಂ ತಿರ್ದ್ದುತುಂ ನು |
ಣ್ಣಿದಪಂ ಪತ್ತಿರ್ದ್ದ ತಾಂಬೂಲರಸಮನೊರಸುತ್ತೈದಿದಳ್ಪಾಂಗ್ಸೆಯೊರ್ವ್ವಳ್ ||

ವ|| ಪೆರತೊಂದು ತಾಣದಲ್ಲಿ

ಕಂ|| ಅಸವಸದಿಂ ಸುಸಿಲೆಸಗು |
ತ್ತಸತಿ ನೊದಲ್ಗಾಗಿದಸಿತವಸನಮಿದೆಂದಾ ||
ಪೊಸಮುಬ್ಬರ್ನುಡಲ್ತೆಗೆದತಿ |
ಹಸನರಸಂಬಡೆದಳೊಸೆದಪಾಂಗ್ಸನ ಮೊಗದೊಳ್ || ೬

ವ|| ಮತ್ತಮೊರ್ವ್ವಳ್

ಸ್ರ|| ವಿಲುಲಿತಘರ್ಮವಾರಿಕಣದಿಂ ಕೆಸರೇಳ್ದೆಳೆತಪ್ಪಗಂಡಮುಂ |
ಡಳಕೃತಪತ್ರಭಂಗಮೃಗನಾಭಿಜಮುಂ ಬಳಿದಿಟ್ಟುರೋಜಮುಂ ||
ಡಳದ ನಖಕ್ಷತಕ್ಕಧರದೊಳ್ತಲೆದೋರ್ಪ್ಪರದಕ್ಷತಕ್ಕುರ |
ಸ್ಥಲದ ರಸಾರ್ದ್ರಕುಂಕುಮಮನಂಕಿಸಿ ಜಾಣ್ಮೆಗೆ ಸಾಂಗ್ಸೆಯೈದಿದಳ್ || ೭

ವ|| ಅಸಿತಗೆಯುಲ್ಲದೆಯುಮನ್ಯಪ್ರದೇಶದಲ್ಲಿ

|| ನೋಡಿದನಿಂತು ನೋಡಿರಸದಂಬುಲಮುಂ ಸವಿಯಿತ್ತು ಚುಂಬನಂ |
ಮಾಡಿದನಿಂತುರೋಜಯುಗಳಂ ನಿಜವಕ್ಷದೊಳೊಪ್ಪಲಪ್ಪಿ ಮುಂ ||
ಡಾಡಿದನಿಂತು ತಳ್ತು ತನು ಜೋಂಪಿಸಿ ಜುಂಮಿಡೆ ಸೋಂಕಿ ಸೊರ್ಕ್ಕಿ ಮೈ|
ಗೂಡಿದನಿಂತು ಕೆಂದಸತಿ ತನ್ನವನಂ ನೆನೆಯುತ್ತುಮೈದಿದಳ್ || ೮

|| ಜಾರೆ ನಿರಿ ಜಾರೆ ಸೋಮ್ಮುಡಿ |
ಜಾರೆ ಬೆಮರ್ಜ್ಜಾರೆ ಮೇಲುದದು ಮುಡಿಲರ್ಗ ||
ಳ್ಜಾರೆ ಮುದಂ ಜಾರೆ ಮದಂ |
ಜಾರೆ ಪದಂ ಜಾರೆ ಜಾರೆ ಜಾರಿದಳೊರ್ವ್ವಳ್ || ೯

ವ|| ಪೆರತೊಂದು ತಾಣದೊಳ್

ವೃ|| ಮನೆಯಾಣ್ಮಂಗೂಡಿ ಮಂಚಾಗ್ರದೊಳೊಱಗಿರನುತಾತ್ಮಾಳಿಯಂಸಂತವಿಟ್ಟಾ
ಮನದಾಣ್ಮಂಗೂಡಿ ರತ್ಯಂತದ ಸುಖವಡೆದೈತಪ್ಪುರ್ದುಂ ಪಾರ್ಶ್ವ ತತ್ರಾಂ ||
ತನೊಳತ್ತಲ್ಕೂಡಿ ಸೌಖ್ಯಂಬಡೆದಿದಿರ್ವರೆ ತದ್ಭೂತಿಯೋರೊರ್ವ್ವರೊತ್ತ |
ಮ್ಮನಿತುಂವೃತ್ತಾಂತಮಂ ಕೇಳ್ದಹಹಯೆನುತೆ ಕೈವ್ರೊಯ್ಯುನಕ್ಕಾಡುತಿರ್ದ್ದರ್||

ವ|| ಮತ್ತಮೊಂದು ಸಂಕೇತಸಿಲಯದಲ್ಲಿ

ವೃ|| ಬಿಡುಬಿಡು ಕೋಳಿಕೂಗಿದಪುದೆಮ್ಮವರೇಳ್ವರೆನುತ್ತೆ ಬಲ್ಪಿನಿಂ |
ಬಿಡಿಸಿಕೊಳುತ್ತೆ ಸಂವರಿಸಿ ಸೀಱಿಯನೊಳ್ಪಡೆಯುಟ್ಟು ಬೀದಿಯೊಳ್ ||
ನಡೆವೆಳಜೋಡೆ ಮೂಡಗಡೆಗಿಂಪಸಪೇಕ್ಷಿಸಿ ಭೀತಿವಟ್ಟು ಕ |
ಣ್ಗೆಡುತೆ ದವಾಗ್ನಿಗಂಜೆರಲೆಯಂತೆರ್ದೆ* ಪನ್ನನೆ ಪಾರೆ ಪಾರಿದಳ್ || ೧೩

ಕಂ|| ಜವದಿನುಷಃಕಾಲಸ್ಪೃಷಂ |
ತವೆ ಕದಡಿದುದೆನಿಸಿ ಮುಬ್ಬುರ್ವೆಳಗಂ ತಿಳಿದೊ ||
ಪ್ಪುವಬಾಂಗೆರೆಯೊಳ್ಮೆಂಗ |
ಳ್ತುಪಕದೊಳೆ ಮುಳುಂಗುವಂತಡಂಗಿದುವಾಗಳ್ || ೧೪

ಬೆಳ್ವೆಳಗಿಸ ಬಾಳ್ವೆಳೆಯಂ |
ತಳ್ಪದೆ ಬಾಂಬೊಲದೊಳರುಣಕರತಿಮಿಶ್ರಿತಪ ಪಾ ||
ಳೇಳ್ವಿನಮುಳುರ್ದರೆ ಚಿಂತೆಯ |
ನಾಳ್ವಂತೆವೊಲೋಷಧೀಶ್ವರಂ ಕಳೆಗೆಟ್ಟಂ || ೧೫

ರಾಜಬಲಂ ಕುಂದಿದುದೆನ |
ಗೀಜಲಜಿನಿ ರಾಜಹಂಸಯುತೆ ಮಧುಪರವ ||
ವ್ಯಾಜದೆ ನಕ್ಕಪಳೆಂದಾ |
ರಾಜಿತಕುಮುದಿನಿ ವಿಷಾದದಿಂ ಕೊರಗಿರ್ದ್ದಳ್ || ೧೬

ವ|| ಅಂತುಮಲ್ಲದೆಯುಂ

ಕಂ|| ಮೊದಲೆನ್ನಸಿರಿಯನಿದು ನೋ |
ಡದೆ ಕಣ್ಮುಚ್ಚಿದುದುಗಡ ಸರೋಜಿನಿ ಸಿರಿನೆ ||
ತ್ತಿದನಿಂದು ನೋಡೆನಾನೆನು |
ತದು ಕಣ್ಮುಚ್ಚಿದವೊಲಲ್ಲಿ ಮುಗಿದುದು ಕುಮುದಂ || ೧೭

ವಿಧುವಿರಹಿಣಿ ನವಕುಮುದಿನಿ |
ಮಧುಮಿತ್ರನಿರೂಪಣಾತಿಭೀಕರವಿಜರ ||
ನ್ಮಧುಕರಮರಾಳದರ್ಶನ |
ವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ || ೧೬

ವೃ|| ಪರಿಪರಿದೊಂದನೊಂದರಸಿ ಕಂಡತಿಕಾತರಮುಣ್ಮೆ ಪೊಣ್ಮೆ ಬಂ |
ದೆರವಿಸಿತಿಲ್ಲದಪ್ಪಿ ಗರಿ ಸೆಟ್ಟನೆ ತಳ್ತಿರೆ ಕಣ್ಸುಖಾಶ್ರುವಂ ||
ಸುರಿಯೆ ಕಡಂಗಿ ಕಂಜದಳತಳ್ಪದೊಳೊಂದುವಚಕ್ರಚಕ್ರದ |
ಬ್ಬರದ ರತಕ್ಕೆ ನಾಚ್ಚುತಲರ್ಗಣ್ಮುಗಿದಂಡದೆನ್ನೈದಲೊಪ್ಪುಗುಂ || ೧೭

ಕಂ|| ಇರುಳತನುಧನುರ್ಲತೆಗೊ |
ಳ್ದಿರುಪಾಗಿ ಬಳಲ್ದು ಪಸಿದಳಿವ್ರಜಕನಿಲಂ ||
ಪರಿಮಳದುಣಿಸಾಗಿಸಲಾ |
ದರಿಸಿ ಕರಂ ಬಿಚ್ಚಿರ್ದಂತಿರಲರ್ದುದು ನಳಿನಂ || ೧೮

ವ|| ಅಂತುಮಲ್ಲದೆಯುಂ

೯೦ ಎನಗಾಗದವನರುಹಮುಂ |
ಮನೆಮಾಡಿದಳೆಂದು ಕಂಡು ಮುಳಿವಂ ಶಶಿಯುಂ ||
ದೆನುತಿರುಳೆ ಮುಚ್ಚಿ ಸಿರಿಯಾ |
ತನಭಾವದೆ ಬಿಚ್ಚಿರ್ದಂತಿರಲರ್ದುದು ಕಮಳಂ || ೧೯

ಇರುಳಪಿತೇಂದೀವರದ |
ಳ್ಳಿರುತದು ಮುನಿದೊಡೆ ಮಧುವ್ರತಂ ಬರೆ ಪೊದಲಂ ||
ತಿರೆ ಕಂಡುದುಗಡ ಕಮಳಂ |
ಪರೀಕ್ಷಿಸರ್ಗ್ಗುಣಿಗಳಾಶ್ರಿತರೊಳವಗುಣಮಂ || ೨೦

ಕನಕಕರಂಡಕದಿಂದಂ |
ದಿನಲಕ್ಷ್ಮಿ ಸರಾಗಮಿಂದ್ರನೀಲದ ಸರಮುಂ ||
ದಿನಪಂಗೀಯುಲ್ತೆಗೆದಪ |
ಳೆನೆ ಮಧುಕರಮಾಲೆ ನಳಿನದಿಂ ನೆಗೆದೆಸೆಗುಂ || ೨೧

ಜಳಕಣಕಲಿತದಳಂ ನೀ |
ರ್ದ್ದಳಿದಿಟ್ಟೆಲೆಯಾಗೆ ನಳಿನಿ ಕೆಲದಟ್ಟೆಗಳಿ ||
ಟ್ಟೆಳೆನಿಸೆ ವಿಕಚಾಬ್ಜಂಗ |
ಳ್ಕೊಳನೆಸೆದುದು ರಾಜಹಂಸನೌತಣದೆಡೆವೋಲ್ || ೨೨

ಪಾಡುವಪರಮೆಗಳಿಂದೊ |
ಲ್ದಾಡುವಮುದ್ದಂಚೆವಂಗಳಿಂ ನರುಗಂಪಿಂ ||
ತೀಡುವೆಳಗಾಳಿಯಿಂ ಸಿರಿ |
ಗೂಡಿದಗೃಹದಂತಿರಿರ್ದ್ದುದಲರ್ದಂಭೋಜಂ || ೨೩

ತೀರದೊಳಿರೆವಿದ್ರುಮತತಿ |
ವಾರಿಯೊಳಿರೆ ಪದ್ಮರಾಗಮಬ್ಜಾಕರಮಾ ||
ನೀರಾಕರಮೆನೆಕಣ್ಗೇಂ |
ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ || ೨೪

ಸುಂವರಕರಿ ಮುರಿದೊಟ್ಟಿದ |
ಸುರುಚಿರನಂದನರಸಾಲಪಲ್ಲವತತಿಯುಂ||
ತಿರೆ ಕರಮೆಸೆದುದು ಮೂಡಣ |
ಗಿರಿಯೆಡೆಯೊಳ್ಮೂಡಿ ತೋರ್ಪ್ಪಸಂಧ್ಯಾರಾಗಂ || ೨೫

ವ|| ಮತ್ತಂ

ಕಂ|| ಸುರವರನಂದನವನಮಂ |
ಸುರವರನಂದನನ ಬಾಣದುರಿ ಪರ್ವ್ವಿದುದೀ ||
ಪರಿಯೆಂದರಿಪುವತೆರದಿಂ |
ಪರಿರಂಜಿಸುತಿರ್ದ್ದುದುದಯಸಂಧ್ಯಾರಾಗಂ || ೨೬

ಪರಿದಿಕ್ಪಣವಧು ಬರೆ ಹಿಮ |
ಕರಖರಕರರೊಂದೆತೆರದೊಳನುರಕ್ತತೆಯಿಂ ||
ನೆರೆವಳ್ಗಡ ವಸುವಿತ್ತೊಡೆ |
ಸರಿಮೃದುಕಠಿನರ್ಕ್ಕಳಿರ್ವ್ವರುಂ ಗಣಿಕೆಯರೊಳ್ || ೨೭

ಹರಿಗೆ ಮಣಿಪಸುರನಿಕರದ |
ಕಿರೀಟವೊರಸಿದೊಡೆ ಸುರಿವಕನಕದ ರಜಮುಂ ||
ಸುರಕರಿ ಕರದಿಂಕೆದರ್ದಂ |
ತಿರೆ ಪಸರಿಸುತಿರ್ದ್ದುದುದಿತಖರಕರಕಿರಣಂ || ೨೮

ವೃ|| ಬಿರಿಯೆ ಮೃದುಸರೋಜಂ ಬಿಂಕಮಂ ಬಿಟ್ಟು ರಾಜಂ |
ಜರಿಯೆ ತಿಮಿರಪೂಗಂ ಜಾರೆ ಜಾರಾನುರಾಗಂ ||
ಸರಿಯೆ ಕುಮುದಬೃಂದಂ ಸಮುದಂಗುಂದೆ ಬಂದಂ |
ನೆರೆಯೆ ಪಟುರಥಾಂಗಂ ನಿರ್ಮಳಾಂಗಂ ಪತಂಗಂ || ೨೯

ವ|| ಮತ್ತಮಾರ್ಗಳ್

ಕಂ|| ಪರಿಕಲಿತಾರುಣಕರಭಾ |
ಸ್ಕರಬಿಂಬಂ ಕಣ್ಗೆವಂದುದೈಂದ್ರೀವಧು ಸು ||
ಣ್ಗೊರಲೊಳ್ಕಟ್ಟಿದಮಾಣಿಕ |
ವರಲೊಂದಿರ್ದ್ದೆರ್ದರೆದಾಳಿಯೆನೆ ರಶ್ಮಿಯುತಂ || ೩೦

ವ|| ಮತ್ತಂ

ಕಂ|| ಪರಿರಕ್ತದಿವಾಕರಭಾ |
ಸುರಬಿಂಬಮುದಿಂಬುವಡೆದುದಖಿಳದಿಶಾವಿ ||
ಸ್ಫುರಿತಸುಧಾಕರಕರಸಾ |
ಗ್ದರಮಂ ಕುಡಿದಡರ್ಪ ಒಡಬಶಿಖಿಪಿಂಡದವೋಲ್ || ೩೧

ಕೆಂಬೆಳಗೆಸೆದುದು ಕೌಸುಂ |
ಭಾಂಬರಕೃತತಳ್ಪದಂತೆ ಖರರುಚಿಬಿಂಬಂ ||
ಕೆಂಬಟ್ಟೆಯ ಪೊಸಕೌಳುಡೆ |
ಯೆಂಬಂತಿರೆ ತಳ್ತು ಮೆರೆದುದೈಂದ್ರೀವಧುವಾ || ೩೨

ವ|| ಅನಂತರಂ

ಕಂ|| ಕೆಂಬಟ್ಟೆಯ ಗವಸಣಿಗೆಯ |
ನಂಬರರಮೆ ನೋಡಲುಗಿದಮಣಿಗನ್ನಡಿಯೆಂ ||
ದೆಂಬಂತೆ ಸಂಜೆ ತೊಲಗಿ |
ದ್ದಂಬರಮಣಿಬಿಂಬಮೇಂ ಮನಂಗೊಳಿಸಿದುದೋ || ೩೩

ವೃ|| ಇದು ಚಂಚದ್ವಿಪ್ರೀಮಲಕ್ಷ್ಮೀಕರಕಲಿತಸುವರ್ಣಾಬ್ಜಮೋನೋಡುನೋಡಿಂ
ತಿದು ಪೂರ್ವಾಶಾಂಗನಾಮಂಗಳಮಧುರಿಮಸೀಮಂತಮಾಣಿಕ್ಯಮೋಪೇಳ್ ||
ಇದು ಶಕ್ರಾಶಾದ್ರಿಹರ್ಮ್ಯೋಜ್ಜ್ವಳ ಕಳಶಮೊ ತಾನೆಂಬಿನಂ ಕಣ್ಗೆ ಚೆಲ್ವಾ |
ದುದು ಚಂಚದ್ರುಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶಬಿಂಬಂ|| ೩೪

ವ|| ಆಗಳ್

ವೃ|| ವನನಿಧಿವಾರಿಯೊಳ್ಬೆರಸಿ ತೀವಿದಚಂದ್ರಿಕೆಯೆಂಬಪಾಲನೀ |
ಕನಕಸರೋಜರಾಜಿತರಜಃಪರಿಪಿಂಜರವರ್ಣಹಂಸನೊ ||
ಯ್ಯನೆ ಬರೆಪೇರ್ದ್ದುದಾಜಲಮನೊಲ್ಲದೆ ಬೇರ್ಪ್ಪಡಿಸಿತ್ತು ನೋಡಿಮೆಂ |
ಬನಮಿಳೆ ಮುನ್ನಜೊನ್ನಮದು ಪಿಂಗಿರೆ ತಗ್ಗಿತು ವಾರಿವಾರ್ಧಿಯಾ || ೩೫

ಮನದನುರಾಗದಿಂ ನೆರೆದು ನಲ್ಲಳೊಳುಣ್ಮುವಘರ್ಮವಾರಿಯೆಂ |
ದೆನೆ ಪಸಿ ತೋರೆ ಕೊಟ್ಟಿಸಲದಂಬುಜದೊಳ್ನಲೆಗೊಂಡು ಮೂಡಿ ಬ ||
ಪ್ಪಿನನ ಕರಂಗಳಂಗದೊಳೆ ಕುಂಕುಮದಂತಿರೆ ತೋರ್ಪ್ಪ ಚಕ್ರಮೇಂ |
ನೆನೆಯಿಸಿದತ್ತೊ ಕಾಮಿಸಿಯ ಒಲ್ಮೊಲೆ ಕಾಂತನ ಕಯ್ಯೊಳಿರ್ಪ್ಪುದಂ || ೩೬

ಎರಲಿರದೆತ್ತ ಸೂಸೆ ಕನಕಾಬ್ಜರಜಂ ನಯದಿಂದೆ ಬರ್ಪ್ಪನೀ |
ಳ್ದರೆಗರೆಗೊಂಡು ನಿಂದು ಸರಮೆಂಬಕಸೋಪಲದಲ್ಲಿ ವಾಸರೇ ||
ಶ್ವರಕರಮೆಂಬ ಪೊನ್ನೊರೆವೊಲೊಪ್ಪಿರೆ ಸೌರಭಕಲ್ಲಿ ಸಾರ್ದ್ದಷ |
ಟ್ಪರಣಮೆ ಕಳಂಕಾರುಕನಮುಚ್ಚಿದ ಮೇಣದವೋಲ್ವಿರಾಜಿಕುಂ || ೩೭

ಮೃಗಧರಬಿಂಬಮೆಂಬ ಪೊಸಬೆಳ್ಮುಗಿಲುರ್ವ್ವರೆಯಲ್ಲಿ ಸೂಸೆ ಸೋ |
ಜಿಗಮೆನೆ ಚಂದ್ರಿಕಾಮೃತದ ಒಲ್ಸರಿಯಂ ಕಮಳಾಕರಾಬ್ಜಶು ||
ಕ್ತಿಗಳದರಚ್ಛಬಿಂದುಗಳನಾಂತೊಳಗಾಗಳೆ ಮುಚ್ಚಿಕೊಂಡೊಡ |
ಲ್ಲೊಗೆದುರುಮೌಕ್ತಿಕಂಗಳೆನೆ ಕಂಗೊಳಿಸಿರ್ದ್ದಪುವಂಚೆದತ್ತಿಗಳ್ || ೩೮

ಖರಕರಸಿದ್ಧನೆಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ |
ದುರುತಿಮಿರಾಭಿಭೂತಭುವನೋನ್ನತಲೋಹಕೆ ತನ್ನವಿದ್ಯೆಯಂ ||
ಧರೆಗೆರಿಪಲ್ಕೆ ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ |
ಪಿರಿದದು ಚಿನ್ನಮಾದುದೆನೆ ಪೊಂಬಿಸಿಲೊಂಪಿರೆ ಕಣ್ಗೆ ರಂಜಿಕುಂ || ೩೯

ವ || ಮತ್ತಮದಲ್ಲದೆಯುಮತಿವಿಶದಶಶಿಮಣಿಮಯಶಿವಗೃಹೋಪರಿಮಶಿಖರಾಗ್ರದೊಳ್ತೆತ್ತಿಸಿದಮುತ್ತುಗಳೆಂಬಂತೆ ಸಿಲುಂಬನಿಂದಹಿಮಕರಕರಪಾತಜನಿತಹಿಮಕಣೋತ್ಕರಮಂ ಪೊಸಬೆಸನದಿಂ ನಸೆಮುಸಗೆ ಸುಸಿಲೆಸಗಿ ಬಳಲ್ದು ಬಾಯಾರಿ ಒಳಸಿ ನಿಂದು ಕರ್ದುಂಕುವತರುಣಪಾರಾವತಂಗಳರತೆಯಂ ಬರಿಕ್ಕೈವಂತೆ ತೊಡೆದು ಕಳೆದು ಗವಾಕ್ಷವಿವರದೊಳೊಳಪೊಕ್ಕು ಪೊಚ್ಚಪೊಸಪೊಂದಗಡನಮುಚ್ಚಿರ್ದಂತೊಳವಳಯದ ಭಿತ್ತಿಯಂ ಸಮ್ಮಿರ್ ಬೆಳಗಿಯುಂ | ಕಳೆಗುಂದಿದಕಳಾಧರನಂ ಕಂಡು ನಸುನಗುವಂತಲರ್ದಕೆಸಮ್ಮೆಲ್ಲಿಗೆಯ ಕಿತ್ತೆಸಳ ಕೇಸರದಕುಸುಂಕರೊಳ್ಮುಸುಂಕಿ ಮುಸುಂಬನಿಟ್ಟು ಪಸಿವಡಗೆ ಪೊಸಬಂಡನುಂಡು ಪಿಂಡುಗೊಂಡು ಮುಂಡಳಿಸಿ ಸಿಂದಪೆಣ್ದುಂಬಿಗಳಂ ಪೊಂದುಂಬಿಗಳೆಂಬಂದಮನೊಂದೆಸಿಮುಚ್ಚಿರ್ಯುಂ|ಕಂದರ್ಪಕಲಹಕ್ಕೆ ಕಟಾಕ್ಷಳ್ತನಂಜೆತ್ತುಗಳಿಲಸಿದಿಚ್ಚಿರ್ ನಿಂದುನಳಿನದಳಮೆಂಬಕಳದೊಳ್ರತಿಕಲಹಕ್ಕೆಳಸಿಕೈಮಿರಿಪಳಂಚಿಕಂಡಂಗಿ ಕಾದಿ ಕಡುಗಲಿತನಂಮಿಕ್ಕಚಕ್ಕವಕ್ಕಿಗಳ್ಗೆ ಮಚ್ಚಿ ಪಚ್ಚವಿಲ್ಲಂ ಪೊದಿಸಿದಪೊಂಬಟ್ಟೆಯೆಂಬ ಪಾಂಗನೊಡನಳುಕ್ಕಿರ್ಗೊಂಡೊಡಚ್ಚಿರ್ಯುಂ| ಕಡುಬೆಳೆದು ತಳಿತ್ತರ್ತರುಣತಮಾಲದೆಳದಳಿರನಳುದ್ದರ್ ಪಿಕಸಿಕರಕೆ ಮಾಂದಳಿರೆಂಬಸಂದೆಗವಂ ಮಾಡಿಕರ್ದುಂಕಿಸಿಯುಂ | ತೋಡಿಲ್ಲದಫಲಿತರಸಾಮೂಲಗಾಲವಾಲದೊಳಿಲ್ಲೆಲೆಯಿಂರತಿಯುವತಿಸುಬಡಕುಂಡಣದಕುಂಭದಕುಂಕುಮಾಂಬುವೆಂಬಶಂಕೆಯುಂ ಭೋಂಕೆಸೂಡಚ್ಚುರ್ತೆಲೆದುರುಗಲ ಪೊದರ ಪೊರೆಯೊಳ್ಕೈಗರೆದಕಡುಗಳ್ತಲೆಯನೆಡೆನುಸುಳ್ದು ಪಿಡಿದೊರಸುತ್ತಲ್ಲಿ ಪರೆದು ಪಸರಿಸಿಯುಂ| ಮಿಸುಪಕರಪೀರದ ಕಡುಗೊರ್ವಿನಬಿರಿಮುಗುಳ್ಗಳಂ ಮುಸುಕಿ ಮುತ್ತಿಮುಸುರಲೆಂದುಮುಂಕೊಂಡು ಝೇಂಕರಿಸುತ್ತೆ ದುರುದುಂಬಿತನದಿಂಬಂದ ಮರಿದುಂಬಿಗೆಚಂಪಕಕೋರಕಭ್ರಾಂತಿ

ಗೊಟ್ಟು|ಕೊಟ್ಟನೆ ಮುಗುಳ್ಚಿಯುಂ|ನಿಧುವನ ನಿಕೇತನದ ವಾತಾಯನಂಗಳೊಳ್ನು ಸುಳ್ದು ಸುಸಿಲ್ಗಡೆಯೊಳೊರಗಿರ್ದ್ದಸೊರ್ಕ್ಕಂಜವ್ವನೆಯರ ಕರ್ಕಶಸ್ತನಮೆಂಬಮದನಮದಗಜಕುಂಭಯುಗಳದಪಾರ್ಶ್ವದ್ವಯದೆ ತಳ್ತಿಳಿವಮದಕರ್ದಮದಂತೆಕಣ್ಗೆವೆಂಡಕಕ್ಷಭವಘರ್ಮಜಲಲವಲುಲಿತಮೃಗಮದಕರ್ದಮಮನಾವರಿಸಿ ಕಾಶ್ಮೀರಕರ್ದಮಮೆಸಿಸಿರಂಜಿಸಿಯುಂರಾಜಮಂದಿರದಮುಂದೆನಿಂದಗಂಧಸಿಂಧುರಂ ಗಳಂಗಕ್ಕೆಸಂದಸಿಂದೂರಶ್ರೀಯನೋಲಗಿಸಿಯುಂ| ಬಚ್ಚಬರಿಯುಬಯುಲೊಳ್ಮೊಕ್ಕಳಮೆನೆ ತೆಕ್ಕನೆ ತೀವಿ ಕಡಲುಡಿಗೆಗೊಂಡಪೊಡವಿವೆಣ್ಗಂಬರಾಂಬುಜನೇತ್ರಸಿತ್ತಪೀತಾಂಬರದಜಳಂಬಮೆಂಬಬೆಡಂಗನಮರ್ಚ್ಚಿಯುಂ| ಪರಿವಪೆರ್ದ್ದೊರೆಗಳೊಳ್ಪರೆದುಪಸರಿಸಿ ನಿಲುಂಬನೀರಾಟಮನಾಡಿ ಪೋಗವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದರಜನೀರಜಂಗಳಿಂ ಕದಡೇಳ್ದು ಪರಿದಪುದೆಂಬ ಪಿರಿಯಸಿರಿಯನೊಳಗುಗೊಳಿಸಿ ಜಂಬೂನದೀಭ್ರಾಂತಿಯುಂ ರತ್ನಾಕರಂಗೊದವಿಸಿಯುಂ| ಸಿದ್ರೆ ನೆಲೆಗೆಟ್ಟು ತೊಲಗೆ ನಿಜಾಲಯದಿಂ| ಪೊರಮಟ್ಟು |ಮತ್ತವಾರಣದೊಳ್ನಿಂದು| ನಿರೀಕ್ಷಿಪಕಮಳದಳಧವಳಲೋಚನೆಯರ| ಕಟಾಕ್ಷಛವಿಗಳೊಳ್ತೊಡರ್ದ್ದು| ತದ್ವದನವಿಧುಮಂಡಳಪ್ರಸಾರಿತಚಂದ್ರಿಕೆಯೊಳ್ಮಲ್ಲಗಾಳೆಗಮನೊಡರ್ಚ್ಚುವಂತೆ ಕಮನೀಯತೆಯನಾಲಿಂಗಿಸಿಯುಮತಿಸಾಂದ್ರತೆಯನಪ್ಪುಕೈದೆಳನೇಸರಳಪಿಗಳಿದಕನಕರುಚಿರುಚಿರತರಕರನಿಕರಂ ಪರಿರಂಜಿಸಿ ಪರ್ಚ್ಚುಕಣ್ಗೊಪ್ಪುತ್ತುಮಿರ್ದ್ದುದಾಪ್ರಸ್ತಾವದೊಳ್

ವೃ|| ವಿಮಳಿನಚಂದ್ರಕಾಂತಿತನುತಂತುಗಳಂ ಮಿಗೆ ಸುಂಗಿ ಪಿಂಗದಾ |
ಕ್ರಮಿಪಪತಂಗದಿಂದಗಿದು ಪೊಕ್ಕ ಸಲಂದಿವೊಲೊಪ್ಪೆ ಲಾಂಛನಂ ||
ಕಮಳಜಶಿಲ್ಪಿಕಲ್ಪಿತಜಗದ್ಗೃಹದಗ್ರದೊಳೊಪ್ಪಿದತ್ತು ಜಂ |
ದ್ರಮನದರೊಂದುಗೂಡೆನೆ ನಿರೀಕ್ಷಣೆಗೀಕ್ಷಿಪಭೂಜನೌಘದಾ || ೪೦

ವ|| ಅಗಳ್

ವೃ|| ನವವಿಧನವ್ಯಭಕ್ತಿ ಮಿಗೆ ಶಂಭುಸಮರ್ಚನೆಗೈದು ದಿವ್ಯಶಾಂ |
ಭವಪರಮಂತ್ರಮಂ ಜಪಿಸಿ ತಾಳ್ದು ತದಂಘ್ರಿಪಯಃ ಪ್ರಸಾದಮಂ ||
ಸವಿನಯಮಾಂತಲಂಕರಣಸಂಕುಳಮಂ ವರವಂದಿಮಾಗಧ |
ಸ್ತವರವಮುಣ್ಮೆ ಬಂದನೆಸೆವೋಲಗಶಾಲೆಗಿಳಾಧಿನಾಯಕಂ || ೪೧

ವ|| ಅಂತೆೞ್ತಂದು ಮಣಿಗಣಾಗಣಿತರುಚಿನಿಚಯನಿಚಿತಸಮುತ್ತುಂಗ
ಮಂಗಳಮೃಗೇಂದ್ರವಿಷ್ಟರೋಪವಿಷ್ಟನಾಗಿ ಸಲ್ಲೀಲೆಯಿಂ ಮೆಲ್ಲನೆ ಕುಳ್ಳಿರ್ದ್ದ

ಕಂ|| ಉದಯಾಚಳಾಗ್ರದೊಳ್ಮೂ |
ಡಿದಪೂರ್ಣ್ಣಸುಧಾಕರಂಗೆ ದೊರೆಯಾದಂ ತಾ ||
ಳ್ದಿದಮಣಿದೊಡವಿನ ಕೆಂಬೆಳ |
ಗೊದವಿರೆ ರಾಜಂ ಸಭಾನಭಸ್ಸ್ಥಳದೆಡೆಯೊಳ್ || ೪೨

ವೃ|| ನೆರೆದೆೞ್ತಂದಿರ್ದ್ದರಾಸ್ಥಾನದೊಳಮಮಮ ಮಹಾಮಾತ್ಯಸಂದೋಹಮುರ್ವ್ವೀ|
ಶ್ವರವೃಂದಂ ಸತ್ಕವೀಂದ್ರಪ್ರತತಿ ವಿಬುಧಸಂತಾನಮುದ್ಗಾಯಕಪ್ರೋ ||
ತ್ಕರಮುದ್ಯದ್ವಾವದೂಕಾವಳಿ ಭರತಕಳಾವಿತ್ಕುಳಂ ವೇದವಿದ್ರಾ|
ಜಿ ರಸಜ್ಞಶ್ರೇಣಿ ವಂದಿವ್ರಜಮತನುಕಳಾಕಾಂತಕಾಂತಾಕದಂಬಂ || ೪೩

ಸುಲಲಿತದೋರ್ಲ್ಲತಾಕುಸುಮಮಂಜರಿಯಂತಿರೆ ಚಾಮರಂ ಸಮು |
ಜ್ಜ್ವಲಮುಖಚಂದ್ರಚಂದ್ರಿಕೆಯಿದೆಂಬಿನಮುಣ್ಮಿರೆ ಲೋಚನಾಂಶುವುಂ ||
ಚಲತರಮಂದಗಂಧವಹನಂತಿರೆ ಸುಯ್ಯೆಲರುರ್ವ್ವಿಸಿಂದು ಕೋ |
ಮಲೆಯರೊಡರ್ಚ್ಚಿದಸ್ಸಿರಿಯುಮೈಸಿರಿಯುಂ ನವಚೈತ್ರರಾಜನಾ || ೪೪

ಮುರಿಪೆಳಮೀಸೆ ಸೀಳ್ದನಗೆಗಣ್ಪೊಗರಾಂತವೊಗಂ ಪೊದಳ್ದಪೇ |
ರುರಮುರುಬಾಹು ಭಾಸುರಕಿರೀಟಮುದಗ್ರಸುವರ್ಣ್ಣಭೂಷಣಂ ||
ಕರದ ಶಿತಾಸಿ ಕತ್ತುರಿಯಬೊಟ್ಟೆಡಗಾಲಕೊಡರ್ವ್ವರಾಜಿಸು |
ತ್ತಿರೆ ಪೊಸದೇಸಿವೆತ್ತೆಸೆದುದಲ್ಲಿ ನರೇಂದ್ರಕುಮಾರಸಂಕುಳಂ || ೪೫

ಕಂ|| ಅಹಮಹಮಿಕಾಭಿನತನುತ |
ಮಹೀಶ್ವರಸ್ವರ್ಣ್ಣಮಕುಟಘರ್ಷಣನಿಪತ ||
ದ್ಬಹುಕನಕರಜೋಗಣಮು |
ದ್ವಹಿಸಿದುದು ತದಂಘ್ರಿಪದ್ಮರೇಣುಸ್ಥಿತಿಯಂ || ೪೬

ವೃ|| ನಸುನೋಟಂ ಪೊಸಬೇಟಮುಂ ಯುವ ನೃಪಾಲಸ್ವಾಂತದೊಳ್ಪೊಕ್ಕುಪು |
ಟ್ಟಿಸೆ ಮಂದಸ್ಮಿತಚಂದ್ರಸಾಂದ್ರರುಚಿ ತನ್ನೇತ್ರೋತ್ಪಳಕ್ಕಿಂಪನು ||
ಬ್ಬಿಸೆ ಬಾಣಾತ್ತಧನುರ್ಗ್ಗುಣಕ್ವಣಿತಮುಂ ಪುಷ್ಪಾಸ್ತ್ರನಿಂದಾಗಳಾ |
ಗಿಸೆ ಪಣ್ಯಾಂಗನೆಯಿರ್ದ್ದ ಗೋಲಗದೊಳುರ್ವ್ವೀಕಾಮಿನೀಕಾಂತನಾ || ೪೭

ತೋಳಪೊಗರ್ಮ್ಮನೋಭವನ ಬಾಳಪೊಗರ್ನ್ನಯನಾಂಚಳಪ್ರಭಾ |
ಜಾಳಮನಂಗಜಾಳಮಮಳಸ್ಮಿತಸಾರಮರೀಚಿ ಮಾರರು ||
ಜ್ಮಾಳಿಮರೀಚಿ ಮಂಜುಮಣಿಭೂಷಣತೇಜಮೆ ದರ್ಪಕಕ್ಷಿತೀ |
ಪಾಳಕತೇಜಮೆಂಬಿನ ಮದೇನೆಸೆದಿರ್ದ್ದುದೊ ತದ್ವಧೂಜನಂ || ೪೮

ವ|| ಮತ್ತಂ

ವೃ|| ತೊಳಗುವತೊಂಡೆವಾಯ್ದೆರೆಯ ನೀಳ್ದಲರ್ಗಂಗಳ ತೆಳ್ಗದಂಪಿನಿ |
ಟ್ಟಳಮೆಸೆಗೊಂಡಪೆರ್ಮ್ಮೊಲೆಯ ಪೊಂಜಳಿಮೆಯ್ಯ ಪೊಗರ್ಪ್ಪೊದಳ್ದತೋ ||
ಳ್ಗಳ ಕಡುಬಿಣ್ಪನಾಳ್ದಪೊರವಾರ್ಗ್ಗಳ ತೆಳ್ವಸಿರಜ್ವಜೌವನಂ |
ದಳೆದಬೆಡಂಗುವೆಣ್ಗಳೊಸೆದೊಪ್ಪಿದರೋಲಗದೊಳ್ನರೇಂದ್ರನಾ || ೪೯

ಒರೆದುರುಂಬು ತುಂಬುವೆರೆಯಂದದಮುದ್ದುವೆಳಗಂ ಪೊದಳ್ದಕ |
ಲ್ಹಾರದಜೊಲ್ಲೆಯಂ ತೋಳಪಮೂಕುತಿ ಕತ್ತುಲಜೊಟ್ಟು ಮುತ್ತಿನೊ ||
ಳ್ಪಾರಮುರೋಜಮಂಡಳದಮಾಣಿಕದೈಸರಮಣ್ಪುಗೈದಕಾ |
ಶ್ಮೀರವಲಂಪನೀಯೆ ಮೆರೆದಿರ್ದ್ದುದು ಮುಗ್ಧವಧೂಕದಂಬಕಂ || ೫೦

ಮಲ್ಲಿಗೆ ಮಾಮರಂ ಮಧುಮಧುವ್ರತಪೂರ್ಣಮನೋಜ್ಞಮಾದರ |
ಲ್ವಿಲ್ಲಲರಂಬು ತೆಂಬೆಲರರಲ್ಪಸವಾಂಬುಜಮಂಚೆ ಕೊಂಚೆ ಕಂ |
ಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪಿವರಂಗದಸಂಗದೇಕೆನು |
ತ್ತಲ್ಲಿ ಜಗಜ್ಜಯಾರ್ಥಮವರ್ಗಮನಂಗಜನೊಲ್ದು ಸೇವಿಪಂ || ೫೧

ಹಾರಮಯೂಖನಿರ್ಝರಪಯೋಧರಕೇಳಿನಗೇಂದ್ರಯೌವನೋ |
ದಾರವನಸ್ಥನಾಭಿಸರದೊಳ್ರತಿಗಂಗಜನೊತ್ತಲೆಂದು ಕ ||
ಯ್ಯಾರೆ ಕಡಂಗಿ ಸಾರ್ಜ್ಜದುರುನೀಲಮಯೋದಕಯಂತ್ರದಂಡದಂ |
ತಾರಮಣೀಜನವ್ರಜದ ಬಾಸೆಯದೇಂ ಕಡುಚೆಲ್ವನಾಳ್ದುದೋ || ೫೨

ಪಾಡದರಾಗಮೋದದಿನಗಬ್ಬವೊಡರ್ಚ್ಚಿದಸಿಂಗರಂ ಬೆಳ |
ರ್ಮ್ಮಡಪಗಲ್ದರಾಸನಮುಳುಂಬಮನಾನದಸಲ್ತೆ ಜಾಣ್ಮೆಯಿಂ ||
ದಾಡದಮಾತು ಮಚ್ಚದಲಸತ್ಕಳೆ ಮನ್ನಿಸದೊಳ್ಪು ನೋಳ್ಪರೊ |
ಳ್ಕೊಡದಬೇಟಮಾಕೆಯರೊಳಿಲ್ಲೆನೆ ಕೂರ್ಪ್ಪರದೇಂ ಕೃತಾರ್ಥರೋ || ೫೩

ಕಂ|| ಅತನುತ್ವಂ ಜಘನದೊಳು |
ನ್ನತಕುಚದೊಳನಲ್ಪದರ್ಪಕತ್ವಂ ಮಧುಮಿ ||
ತ್ರತೆ ವಚನದೊಳಿರೆ ಕಾಂತಾ |
ತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ || ೫೪

ವ|| ಎನಿಸಿ ರಂಜಿಸಿ

ವೃ|| ಎಮೆದುರುಗಲ್ಕವಲ್ತುಕುಡಿಗೊಂಡವೊಲಾಗಿರೆ ಸೋಗೆ ಸೋಗೆಯಂ |
ತೆಮರ್ಪವೊಲೊಪ್ಪೆ ಸೋಮ್ಮುಡಿ ಸಮಸ್ತನಮಸ್ತನಗೇಂದ್ರದಂತೆ ಜೆ ||
ಲ್ವಮರೆ ನಖಾಂಕಚಂದ್ರಕಳೆಯಿಂಕಳೆಯಂ ತಳೆದಾನನಾಬ್ಜಮ |
ಬ್ಜಮನಿಳಿಕ್ಕೆಯೆ ಕಂಗೆಸೆದುದಗ್ಗದಪೂರ್ವವಿಳಾಸಿನೀಜನಂ || ೫೫

ಅಳಿಕುಳಮಂ ಪ್ರಸೂನವಿಳಸತ್ಕಬರೀಭರಮುನ್ಮರಾಳಮಂ |
ಡಳಿಯನುದಾತ್ತಮಂದಗತಿ ಗಂಧಸಮೀರಣನಂ ಸಗಂಧಮುಂ |
ದಿಳಿವೆಳೆಸುಯ್ಲುಮಿಂತು ಸೆರೆಗೆಯ್ಯದೆ ತಾಂ ಸೆರೆಗೈದುದೇ ಸಜೋ |
ಜ್ಜ್ವಳರುಚಿರೂಪವೊಂದೆ ಯುವನೇತ್ರಮನಾಯುವತಿಪ್ರತಾನದಾ || ೫೬

ವ|| ಮತ್ತಮಿಂತು ನಿರತಿಶಯಸೌಂದರ್ಯಮಾಧುರ್ಯಲಾವಣ್ಯನೈಪುಣ್ಯ ಸಾರಸರ್ವಸ್ವಮಂಗಂಬಡೆದೇಳ್ತಂದಂತಿರ್ದೆತಂದುನಿಂದನಿತಂಬಿನೀಜನದ ಮಿರುಪಪೆರೆನೊಸಲೊಳ್ಸುಸಿಲ್ಗಡೆಯೊಳ್ಪರಸಿ ಪರೆದಸುಳಿಗುರುಳ್ಗಳಂ ತಳಬಸಿಯನನುಗೊಳಿಸಿ ನೇಪ್ಪಡಿಸಿ ಕುರುಗುರಿಂತಿರ್ದ್ದ ಕೂಸ್ಮೆಯಿಂದಿಟ್ಟಕತ್ತುರಿಯಬಟ್ಟಬೊಟ್ಟು ರಮಣಕರಗ್ರಪಣಪೀಡನದಿಂ ಜಡೆವಾವುಗುಳ್ದಗರಳರಸಕಲಿಕೆಯೆನೆ ಕಂಗೊಳಿಸೆಯುಂ, ಸರಸತರಸುರತಸಮಯದೊಳಮುದಪ್ಪೆ ಮನೋರಮಣಂ ನೊಸೆವಲ್ಲಕೊರೆಯಿಂ ಕದುಂಕಲೊಡನೊಸರ್ದಧರದಳದಮೃತರಸಂ ಪಸರಿಸಿದ್ದುದೆನಿಸಿ ದಶನವಸನಕಿಸಲಯದೊಳ್ದಸನರಸಂ ಮಿಸುಗೆಯುಂ, ಸಮದಮದನವಿಜಯಾಸ್ಪದಮಾದ ವದನಕಮಳದೊಳ್ಸಿರಿ ನೆಲೆಗೊಂಡಳೆಂಬನಣ್ಪಿಂ ಬಂದುಕೇಳಿಯಿಂ ಕೆಳೆಗೊಳಲೆಳಸಿ ಲಂಬಿಡಿದುನಿಂದಚಂದ್ರಬಿಂಬಮೆಂಬಬಗೆಗಡಪ್ಪಾಗಿ ಧಳಧಳಿಸಿಪೊಳೆವಮೌಕ್ತಿಕ ಮಣಿಖಚಿತಕರ್ಣಪತ್ರಂ ನೇತ್ರಶೋಭಾವಹಮಾಗೆಯುಂ, ದರ್ಪಣದೊಳಾಗಸದ

ನೆಳಲ್ವೊಳೆವಂತೆ ಕಪೋಲದರ್ಪಣದೊಳ್ನೋಳ್ಪಮೆಯ್ಯಿಲ್ಲದಮದನನ ಪಡಿನೆಳಲ್ತೋರ್ಪುದೆನೆ ಮೃಗಮದರಸರಚಿತಮಕರಿಕಾಪತ್ರಮತಿವಿಚಿತ್ರಮನೊದವೆಯುಂ, ದಾಂಗುಡಿವಿಡುವಪಾಂಗರುಚಿಲತೆ ಮುಗುಳಂಪಡೆದಂತೆ ಕೊನೆಗೊಡಂಕೆಯೊಳ್ಪೊಳೆವಬಾವುಲಿಯಬಟ್ಟಮುತ್ತು ಬಗೆಗೊಳಿಸೆಯುಂ, ನಿಡುಜಡೆಯೆಂಬಕಾಳಾಹಿಗಳ್ಕಿನೆಲೆವೊಲೆವೆಟ್ಟಿನೆಡೆವೊಕ್ಕಡಂಗಿದನಖಕ್ಷತೇಂದುಕಳೆಯನಾರಯ್ವಲ್ಬಂದು ಪೆಳರ್ದ್ದು ತಳರದೆ ಕಾದು ಬಳಸಿ ನಿಂದನಕ್ಷತ್ರಮಾಲೆಯೆಂಬಂತೆ ನಕ್ಷತ್ರಮಾಲೆ ಮನೋಜ್ಞತೆಯನಾಲಿಂಗಿಸೆಯುಂ, ಮದನಮದಗಜದ ಮದರಸಂ ಪತ್ತಿದಶುಂಡಾದಂಡಾಗ್ರಮನದರ ಕಂಪಿಂಗೆಳಸಿ ಬಳಸಿದಳಿಮಾಲೆಯ ಲೀಲೆಯಂ ತಳೆದು ನಳಿತೋಳ ತುದಿಗೊಂಡಮುರ್ದ್ದಿಸಿಂದಹರಿನೀಲಮಣಿವಲಯಂ ತೊಳಗೆಯುಂ, ವೃತ್ತಂಬೆತ್ತು ಕೊರ್ವ್ವಿಬಳೆದಸಿತಂಬಬಿಂಬಮೆಂಬಶಂಬರಾರಿಕುಂಭಿಕುಂಭಕ್ಕೆ ಬಸಂತಸೊಸಗೆಮಿಗೆ ಸುತ್ತಿದಕನಕಚಂಪಕದಾಮದಂತೆ ಕನಕಕಾಂಚೀದಾಮಮಭಿರಾಮತೆಯನೊಳಕ್ಕೈದು ತೆರಂಬೊಳೆಯೆಯುಂ, ಮಿಸುಪಮಿಸುನಿವೆಸದಪೊಸತೊಡವುಗಳ ಪೊಂಬೆಳೆಗೆಂಬಬಿಸುಪಿಸಿಲ್ಮಸುಂಕೆ ಸುಣ್ಣೊಡೆಗಳೆಂಬಪೊಂಬಾಳೆಗಂಬಂಗಳ್ಕಂದಿದಪುವೆಂದು ಕಂದರ್ಪಂ ಬೆಳ್ದಿಂಗಳಿಂ ಬಾಸಣಿಸಿದಂತೆ ಸಿರಿವಿಡಿದುಟ್ಟಧವಳಾಂಬರಮಿಂಬುವಡೆಯೆಯುಂ, ತರುಣಾರಪಕಿರಣದಿಂ ಪೊಂಬಣ್ಣಮೇರಿ ಸುಸಿಲಬಿಸರುಹದ ನಾಳಮಂ ಬಳಸಿ ನಿಂದು ಜಿನುಂಗುವೆಳದುಂಬಿಗಳ ಮಾಲೆಯುಂ ಪೋಲ್ತು ಪದಾಗ್ರದೊಳಂದಂಬಡೆದು ಸಲ್ಲೀಲೆಯಿಂ ಮೆಲ್ಲುಲಿಗುಡುವಮಿಸುನಿಯಂದುಗೆ ರಂಜಿಸೆಯುಮಿಂತತಿಶಯತದೀಯಕಮನೀಯಶೃಂಗಾರಸಾರಸಹಜಸೌಂದರ್ಯಸೌಕುಮಾರ್ಯಮಾಧುರ್ಯನಿಧಿವಿದಿತಕೋಶಾಗಾರದಂತೆ ರಾಜೇಂದ್ರನೊಡ್ಡೋಲಗಮಾಲೋಕದಾಲೋಕನಕ್ಕೆಕೌತುಕಾವಹಮೆನಿಸಿ ಪರಿರಂಜಿಸಿರ್ದುದಂತುಮಲ್ಲದೆಯುಂ

ವೃ॥ ಮಣಿಗಣದಂತೆ ಮೌಳಿಮಣಿಸಂಕುಳಮೊಪ್ಪಿರೆ ಪೊಕ್ಕಗವ್ರಜ।
ಕ್ಕೆಣೆವರೆ ಭೂಭುಜವ್ರಜಮೆ ಸೀರಮದಾಗಿರೆ ಹಾರರೋಚಿ ಸಂ॥
ದಣಿಸಿರೆ ಚಾರುಚಾಮರಮರಾಳಕುಳಂ ಘನವಾದ್ಯಮಬ್ಧಿಘೋ।
ಷಣಮೆನೆ ರಾಜರಾಜಪರಿವರ್ಧಿತಮಾಸಭೆ ವಾರ್ಧಿಯಂತೆವೋಲ್॥

ವಿತತಸದಾನವಾರಿವಿಭವಂ ಪ್ರಮದಾಳಿಮನೋಜ್ಞವರ್ಣಸಂ |
ಗತಹರಿಧಾಮಮುಜ್ಜ್ವಳಕರಾಂಚಿತಪುಷ್ಕರಕಾಂತಮುದ್ರಸಾ ||
ಶ್ರಿತಘನವಿಗ್ರಹಾಂಚಿತಮುದಾತ್ತಬಲಸ್ಥಿತಿ ಪೋಲ್ದುದಿಂದಿರಾ |
ಪತಿಪುರಮಂ ಮಹೇಂದ್ರಪುರಮಂ ಗಜಮಂ ಸಭೆ ತನ್ಮಹೀಶನಾ || ೫೮

ವ|| ಅಂತೊಪ್ಪುವವಿತತಮಹಾಸ್ಥಾನದಲ್ಲಿ

ಕಂ|| ಮದನಧರಾಧೀಶನ ಪ |
ಕ್ಕದೊಳೊಪ್ಪುವ ಚೈತ್ರನಂತೆ ಶೃಂಗಾರರಸಾ ||
ಸ್ಪದಯುವರಾಜನ ಕೆಲದೊ |
ಳ್ಪನೆದೊಪ್ಪಿದನತುಳಗುಣಯುತಂ ಮಿತವಚನಂ || ೫೯

ವ|| ಆಪ್ರಸ್ತಾವದೊಳ್

ಕಂ|| ತುಂಗಮೃದಂಗದುಪಾಂಗದ |
ಚೆಂಗಿನ ದಂಡಿಗೆಯ ತಾಳದಾವುಜದ ಲಸ ||
ತ್ಸಂಗೀತದ ವಾಸದ ನಿನ |
ದಂಗಳ್ಬೆರೆದಳುರ್ದು* ಸವಿಯನೇಂ ಸೂಸಿದುವೋ || ೬೦
ಅಲರ್*ಕ್ಕಿಗಳುಲಿಯಂ ರತಿ |
ಕಲಹದ ಕಾದಲೆಯ ದ್ವಿಸ್ವರಸರವಮಂ ಮಂ ||
ಜುಳಕಳಮರಾಳರಾವಮ |
ನಲೆದುದು ಸಂಗೀತನಿನದಮದುಮಧುರತೆಯಿಂ || ೬೧

ವ|| ಆಗಳೊರ್ವ್ವಳಭಿನವರಂಭೆಯೆಂಬ ಚತುರನರ್ತಕಿ

ವೃ|| ತೊಳಪೆಳಮುತ್ತುತೆತ್ತಿಸಿದ *ಬಲ್ಮೊಲೆಕಟ್ಟು ಸಿತಂಬಬಿಂಬಮಂ |
ಜುಳಮಣಿಕಾಂಚಿ ಪೊನ್ನಪೊಸಕಾಸೆ ಸುವರ್ಣದಗುಜ್ಜುಗೆಜ್ಜೆ ಪ ||
ಜ್ಜಳಿಸುವರನ್ನವಚ್ಚಮಳಿಕಾಗ್ರದ ಕತ್ತುರಿಬೊಟ್ಟು ಕಾಂತಿಮಂ |
ಡಳಿಸುವವಜ್ರದೋಲೆ ತನಗೊಪ್ಪಿರೆ ಬಂದಳದೊಂದುಲೀಲೆಯಿಂ || ೬೨

ವ|| ಅಂತೈತ್ತಂದು ತತ್ಸಭಾಜಳಧಿಮಧ್ಯದೊಳೊಗೆದ ಕನಕಪಂಕಜಪರಾಗಪರಿಮಿಳಿತಮಾದನುಣ್ದೆರೆಯೆನೆ ಮಿಸುಪಪೊಂದೆರೆಯ ಮರೆಯೊಳ್ಸಿರಿಯನೊಳಕೈದಂದಂಬಡೆದು ನಿಂದಿರ್ಪುದುಮನಂತರಮರಸನಿದಿರ್ಗೆವಂದು ಸೂತ್ರಧಾರಕಂಮೆಯ್ಯಿಕ್ಕಿಕಯ್ಯಂ ಮುಗಿದು

ಕಂ|| ಭರತಾದಿವಿವಿಧವಿದ್ಯಾ |
ಪರಿಣತಜನವನವಸಂತ ವಿತರಣಜಿತಸಿ ||
ಜ಼್ಱರಭೂಜ ರಾಜಶೇಖರ |
ಧರಣೀಶ ಸಿರೀಕ್ಷಿಸೆಂಬಸಮನಂತರದೊಳ್ || ೬೩
ತೆರೆ ತೊಲಗೆ ಮೆಯ್ವೆಳಗು ಮಾ |
ರ್ದೆಱೆಯಂ ಸಱಿದಂತೆ ಪೊಳೆಯೆ ಕೆದರ್ದಳಕ್ಕೊಳೆವೊ ||
ಪ್ಪಿರೆ ಮಿಂಚಿ ಮಿಂಚು ಕಗಕೋ |
ತ್ಕರಮಂ ಕೆದರ್ವಂತೆ ಕಾಂತೆ ಕುಸುಮಾಂಜಲಿಯಂ || ೬೪

ವೃ|| ತೊಳಗುವತೋಳ ಪಾಳಮಿಱಿ ಮೈಸಿರಿಗೈಸಿರಿಯಾಗಿ ಸೊಂಪು ನು |
ಣ್ಪೊಳವಡೆ ಗೇಸಿಪಾಸಿ ಮಿಗೆ ಕೊಂಕದ ಬಂಕದ ಜಾಣ್ಮೆ ಪೊಣ್ಮೆ ಸಂ ||
ಗಳಿಸಿರೆ ತಾಳಮೇಳದರವಂ ಜವದಿಂ ಜತಿದಪ್ಪದೊಪ್ಪಮಂ |
ಗಳಿಲನೆ ತೋಱಿ ಮಾಱಿ ಮೆಱೆದಳ್ನವನರ್ತಕಿ ನೃತ್ಯಲೀಲೆಯಂ || ೬೫

ಕಂ|| ನೊಸಲೆಂಬ ಪೆರೆಯನಾಲಿಂ |
ಗಿಸಿ ರಂಜಿಪತಾರೆ ಪುಬ್ಬುವಳ್ಳಿಯ ಮುಗುಳಂ ||
ಬೆಸಕಮನಸುಚ್ಚಿ ಮೆಱೆದುದು |
ಪೊಸ ಮುತ್ತಿನ ಬೊಟ್ಟು ನಾಟ್ಯವಿದ್ಯಾಧರಿಯಾ || ೬೬
ಬಳಕಣಮುಳುದಂಬುಜಕು |
ಟ್ಮಳಮುಡುತತಿ ಬಳಸಿದಮರಗಿರಿಯೆಂಬರವಂ ||
ತಳೆದೆಳಮುತ್ತಿನವೊಲೆಕ |
ಟ್ಟಳವಟ್ಟಿರೆ ಒಟ್ಟವೊಲೆಯುದೆಸೆದುದು ಸಟಿಯಾ || ೬೭

ಅವಳ ಜಘನಾದ್ರಿತಟದೊಳ್ |
ಯುವದೃಙ್ಮೃಗಜಾಲಕತನುಜಾಲಕಸೊಸೆದೊ ||
ಪ್ಪುವಘಂಟಾಜಾಲಮನಿ |
ಟ್ಟವೊಲೆಸೆದುದು ಕಾಂಚಿ ಘಂಟಿಕಾರವಮಿಳಿತಂ || ೭೮

ತಳಿರ್ವಟ್ಟೆಯ ಪೊಸಚಲ್ಲಣ |
ಮಳವಟ್ಟನಿತಂಬಬಿಂಬಮರುಣೋಪಳಮಂ ||
ಜುಳಗಿರಿಗೆ ಸರಿಗೆವರುತುಂ |
ತಳೆದುದು ಸಿಂದೂರಲಿಪ್ತಕರಿಶಿರದಿರವಂ || ೭೯

ಪೊಸಮಿಸುನಿವೆಸದ ತೊಡೆಗು |
ಪ್ಪಸಮೆಸೆದುದು ಪೊಣರಲೆಂದು ಪೊಂಬಾಳೆಯೊಳಂ ||
ದಸಿಯಳ ನುಣ್ದೊಡೆ ತಾಳ್ದವೊ |
ಲಸದೃಶರುಚಿಕನಕಕವಚಮಂ ಕಡುಪಿಂದಂ || ೮೦

ವೃ|| ರತಿದೇವೀಕುಚಕುಂಭಕುಂಕುಮಕರಂ ಕಾಮಂ ಕರಂ ನೀವೆ ತ |
ದ್ಗತ ರಾಗಂಬೊರೆದಲ್ಲಿ ತುಂಬಿವೆಡೆ ಪೊಂಬಣ್ಣಕ್ಕೆ ಪಕ್ಕಾಗುತ್ತೆ ||
ದಿ ತದೀಯಾಂಘ್ರಿಸರೋಜಮಂ ಬಳಸಿ ನಿಂದತ್ತೆಂಬವೋಲ್ಕಣ್ಗೆ ರಂ |
ಜಿತಮಾಗಿದ್ರ್ದುದು ಕಾನಕಂ ಕಳನಿನಾದಂ ಕಿಂಕಿಣೀಸಂಕುಳಂ || ೮೧

ಕ್ಷಣರುಕ್ಕಾಂಚಿರವಂ ಝುಣಂಝುಣರಣತ್ಸ್ವರ್ಣಸ್ಫುರತ್ಕಿಂಕಿಣೀ |
ರಣಿತಂ ಕೂಡಿ ಬೆಡಂಗುವೀರೆ ಮೃದುಪಾದನ್ಯಾಸಮಿಂಬಾಗೆ ಕಂ ||
ಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ ನೇತ್ರಾಂತವೀ |
ಕ್ಷಣದಂದಂ ಪೊಸತಾಗೆ ನೀರೆ ಮೆರೆದಳ್ಲೀಲಾಲಸಲ್ಲಾಸ್ಯಮಂ || ೮೨

ಕಂ|| ವಿತತಾಂಗಿಕಮಾಹಾರ್ಯ್ಯಕ |
ಮತಿಶಯಸಾತ್ವಿಕಮುಮುಱೆ ವಾಚಿಕಮೆನಿಸೀ ||
ಚತುರಭಿನಯಮಂ ಚತುರ |
ಸ್ಥಿತಿಯಿಂ ನೆರೆತೋರಿ ಬೀರಿದಳ್ನರ್ತನಮಂ || ೮೩

ದಳಿತತರುಣಾಂಬುರುಹಮು |
ಜ್ಜ್ವಳಿತತರಂಗಪ್ರಪಾತದಿಂ ಚಲಿಯಿಪಪಾಂ |
ಗಳವಡೆ ಲಾವಣ್ಯರಸಾ |
ವಿಳಮೂಂದೋಳಿತದಿನೆಸೆದುದಾಸ್ಯಂ ನಟಿಯಾ || ೭೪

ಮುಗುಳ್ವಲರ್ವ ನಗುವ ಚಲ್ಲಮ |
ನುಗುವ ಮರಲ್ದೊಗೆವ ಬಳಸುವಲಸುವಲಂಪಂ ||
ತೆಗೆವ ಪೊಳೆವಗಿವ ಮಿಗೆ ಬೆಂ |
ಡೊಗೆವಲಸದ್ದೃಷ್ಟಿ ಮೆರೆದುದಾನರ್ತಕಿಯಾ || ೭೫

ತಿಳಿವೆಳ್ದಿಂಗಳ ಬೆಳಗಂ |
ತಳೆದೆಳಮಿಂಚೆಳಸಿ ಸಳಿಸದಳದೊಳ್ದೊಳೆದು ||
ಜ್ಜ್ವಳಿಸಿದಪುದೆಂಬ ಬಂಕಮ |
ನೊಳಕೊಂಡಲಗಣ್ಣ ಬೆಳಗದೇಂ ಪಸರಿಸಿತೋ || ೭೬

ಸಮನೆನಿಸಿ ನಿಮಿರ್ವ ಕುಂಚಿತ |
ಮಮರ್ವ ಪಳಂಚುವ ಸಮಂಚಿತ ಭ್ರೂಲತೆ ತ ||
ತ್ಕ್ರಮದುರುಗಲ ನೆಳಲೊಳ್ಮಿ |
ಕಮಳಮಯೂಖಾಂಬುವೀಚಿ ಚಲಿಪನ್ನೊಲೆಸೆಗುಂ || ೭೭

ಚಳದಮಳವಜ್ರಮಣಿಕುಂ |
ಡಳಮಂಡಳಕಾಂತಿ ಕಾಂತಗಂಡಸ್ಥಳಮಂ ||
ಜುಳಮಣಿಮುಕುರದ್ಯುತಿಯೊ |
ಳ್ಪಳಂಚಿ ಧಳಧಳಿಸಿ ಪೊಳೆದು ನರ್ತಿಸಿತಾಗಳ್ || ೭೮

ಇದುಚಿತ್ರಂ ಚಂಪಕಮುಕು |
ಲದೊಳೊಗೆದೊಲೆದಪುದು ಕುಜಮಿದೆನೆ ತನ್ನಾಸಾ ||
ಗ್ರದ ಮುತ್ತಿನಮಣಿ ರದನ |
ಚ್ಛದದೀಧಿತಿ ಪುದಿಯೆ ಕೆಂಪನಾಳ್ದೊಲೆದೆಸೆಗುಂ || ೭೯

ಅಮರ್ದಿನೊಳಿರ್ದಬಿಂಬಮ |
ನಮೃತಾಬ್ಧಿಯೊಳೊಗೆದಪವಳಮಂ ಪಳಿದೆಸೆದ ||
ತ್ತಮಳತರರದನರುಚಿಸಂ |
ಕ್ರಮಧವಳಿಮಮಧರವಿದ್ರುಮಂ ನರ್ತಕಿಯಾ || ೮೦
ಸ್ಮರನರುಣತರುಣಪಲ್ಲವ |
ಶರಮನಸಂಖ್ಯಾತಮಕ್ಕೆನುತ್ತಿಸೆ ಪಾಯ್ದು ||
ಪ್ಪರಿಸಿ ಬಹುಮುಖದಿ ಪರಿದೊ |
ತ್ತರಿಸುವಪರಿಯೆನಿಸಿತವಳಕರತಳಚಳನಂ || ೮೧
ಎನಗೆ ಪಗೆಯಾದಚಂದ್ರನ |
ನನಿಶಂ ಕೆಳೆಗೊಂಡುದೆಂದು ಕರ್ಣೋತ್ಪಲಮಂ ||
ಮುನಿದಲೆವವನರುಹಮನಂ |
ದನುಕರಿಸಿದುದರರೆ ಕರಿಕರಂ ನರ್ತಕಿಯಾ || ೮೨
ತರುಣಾಸಿತಾಹಿ ಸಂಗೀ |
ತರವಂಗೇಳ್ದಳಸಿ ನಾಭಿವಲ್ಮೀಕದಿನೆ ||
ಳ್ದರಗೊಲೆದೊಲಾಡುವುದೆನೆ |
ಕರಮೆಸೆದುದು ಬಾಸೆ ವಿಚಳಿತಂ ನಚ್ಚಣಿಯಾ || ೮
ಅವಳವಯವನವಲಾವ |
ಣ್ಯವನೇಜಾಕರದೊಳಾಳ್ದುಮದನದ್ವಿಪದೊ ||
ಪ್ಪುವಚಳಕುಂಭಸ್ಥಳಮೆಂ |
ಬವೊಲೆಸೆದುದು ಲಾಸ್ಯಕಂಪಿತಂ ಘನಜಘನಂ || ೮೪
ತೊಡೆ ರಂಭಾಮದಮಂ ಮಿಗೆ |
ತೊಡೆದುದು ನುಣ್ಪಿಂದಮೆಂಬಪುರುಡಿಂದಡಿ ತಾ ||
ನಡಿಮಾಡಿದುದುರುರಂಭಾ |
ವಿಡಂಬಮಂ ವಿತತನೃತ್ಯದೊಳ್ನರ್ತಕಿಯಾ || ೮೫

ಮಂದರಗಿರಿ ತಿರ್ರನೆ ತಿರು |
ಪಂದೊಡನೊಗೆದಂಬುಧಿಯೊಳೆ ತಿರುಗುವಸಿರಿಯೊಂ ||
ದಂದವನಭಿನಯಿಸುವಳಿವ |
ಳೆಂದೆನೆ ಕಾಣಿಸಿದಳದ್ಭುತಭ್ರಮರಿಗಳಿಂ || ೮೬

ಒಸೆದಷ್ಟರಸಮನಿದು ನವ |
ರಸಮೆನಿಸಿಪೊದಳ್ದಪತ್ತುಮಂಡಳಮಂ ರಂ ||
ಜಿಸಿ ಪಂಚಮೆನಿಸಿ ಲಾಸ್ಯಮ |
ನೆಸಗಿದಳಾನಟಿ ವಿಚಿತ್ರಮೆನೆ ತತ್ಸಭೆಯೊಳ್ || ೮೭

ಮಂಡಳಮಂ ಮೆರೆದಳ್ಮು ಖ |
ಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂ ||
ಮಂಡಳದಿಂ ನೆಗೆದು ನಭೋ |
ಮಂಡಳದೊಳ್ನಿಂದು ನೀರೆ ಮೋಣ್ದಾಶವಿಧಮಂ || ೮೮

ಚಾರಿಗಳಂ ಕೊಳುತುಂ ಸಂ |
ಚಾರಿಗಳಂ ತಳೆದು ರಸಿಕಜನದಕ್ಷಿಗಳಂ ||
ಚಾರಿವರಿಪಾಡಿಸಿದಳೆ |
ಚ್ಚಾರಿ ತದಂಗಮನನಂಗನಿರೆ ಪಿಂಗಡೆಯೊಳ್ || ೮೯

ಕರತಳದೊಳಭಿನಯಮನಮ |
ರ್ದರೆ ಚರಣದೊಳತುಳತಾಳಮಂನೇತ್ರದೆ ಭಾ ||
ಸುರರಸಮನಸಮಗಾನಮ |
ನರರೆ ಶರೀರದೊಳೆ ಪಿಡಿದವಳ್ನರ್ತಿಸಿದಳ್ || ೯೦

ವೃ|| ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದಕ |
ಣ್ಗೊನೆಯವಿಳಾಸಮಾಸ್ಯದ ವಿಕಾಸತೆ ಪಾದದಸಂಭ್ರಮಂ ಪಳ ||
ಚ್ಚನೆ ಪೊಳೆವಂಗದಂದಮುರುಣಾಧರದಿಂಪು ಕಪೋಲಕಾಂತಿಯೆಂ |
ಬಿನಿತನಲರ್ಚಿ ಬಿಚ್ಚಳಿಸಿ ನಚ್ಚಣಿ ಪೆರ್ಚಿಸಿದಳ್ಮನೋಜನಂ || ೯೧

ಕಂ|| ತೀವಿದಲಾವಣ್ಯಾಮೃತ |
ಸೇವನೆಗೀವಂತೆ ಸಮಯಮಂ ಯುಪಜನನೇ ||
ತ್ರಾವಳಿಗಮರ್ದಂಗದಿನಂ |
ದಾವಧು ಸಮಪಾದಚಾರಿಯುಂ ತಳೆದೆಸೆದಳ್ || ೯೨

ತರುಣಚರಣಾಂಶು ಬಂದುಗೆ |
ಯರಲಂ ಬಲಿಗೆದರೆ ಕಾಲ್ಗಳೊಳ್ತೊಡರ್ದನರೇ ||
ಶ್ವರರ ಬಗೆವಲೆಗೊಡಂಕಂ |
ಪರಿಹರಿಪವೊಲಾಂತಳಬಲೆ ಹರಿಣಪ್ಲುತಮಂ || ೯೩

ಶೃಂಗಾರರಸಾರರಸಮನ |
ಪಾಂಗದ್ಯುತಿ ಬೀರೆ ಮಿಾರೆ ಲಾವಣ್ಯರಸಂ |
ತುಂಗಕುಚೆ ಚಾಪಗತಿಯುಂ ||
ಸಂಗಳಿಸುತನಂಗಚಾಪಲತೆಯೆನೆ ಮೆರೆದಳ್ || ೯೪

ವ|| ಮತ್ತಂ

ವೃ|| ಕಂತುಕರಾಗ್ರಕಂತುಕದವೋಲ್ನೆಗೆಯುತ್ತೆ ಮನೋಜಚಕ್ರಿಚ |
ಕ್ರಂ ತಿರುಪಂತೆ ತಿರ್ರನೆ ಕರಂ ತಿರುಗುತ್ತೆ ರತೀಶಶಸ್ತ್ರಿಶ ||
ಸ್ತ್ರಂ ತಳದಿಂ ಕುರುಳ್ಚಿ ಚಲಿಪಂತಲುಗುತ್ತೆ ಸುಮೇಷುಸೂತ್ರಧಾ |
ರಂ ತಳೆದಾಡಿಪೊಂದುಪೊಸಸೂತ್ರದಪುತ್ರಿಕೆಯುಂತಿರಾಡಿದಳ್ || ೯೫

ಕಂ|| ಜತಿವೆತ್ತೊಪ್ಪುವಮೃದುಪದ |
ಗತಿಯುಂ ರಸವೊಸರ್ವಭಾವಮುಂ ವೃತ್ತಿವಿಳಾ ||
ಸತೆಯುಂ ತಳ್ತಿರೆ ವಿಳಸ |
ತ್ಕೃತಿಯುಂ ಪೋಲ್ತಬಳೆ ರಸಿಕರಂ ಮಚ್ಚಿಸಿದಳ್ || ೯೬

ಅಚ್ಚರಿಯಮರೊಳುರಗಿಣಿಯರೊ |
ಳಚ್ಚುಮುಗುಳ್ಚುವವಿಳಾಸಮುಂ ವಿಭ್ರಮಮುಂ ||
ನಚ್ಚಿರದೆನೆ ನರನಾರಿಯ |
ನಚ್ಚಣಕೆಣೆವರ್ಪನಚ್ಚಣಂ ಪೆರತುಂಟೇ || ೯೭

ಆರಮಣಿ ಸೋಳ್ಪವಿಬುಧರ |
ಸಾರತರಾಪಾಂಗಧವಳರುಚಿ ಕವಿಯೆ ಲಸ ||
ದ್ಭಾರತಿ ಲೀಲಾಲಾಸ್ಯಮು |
ನೋರಂತಿರೆ ತಾನೆ ತೋರ್ಪ್ಪಳೆನೆ ಕರಮೆಸೆದಳ್ || ೯೮

ಅವಳ ನವನರ್ತನಮನಂ |
ದವನೀಧವನೆಯ್ದೆ ಮೆಚ್ಚಿ ಪೊಗಳ್ದುತ್ಸವದಿಂ ||
ದಿವಿಜಕುಜದೇಳ್ಗೆ ಕೀಳ್ಪಡೆ |
ಸುವಸ್ತ್ರಮಣಿಭೂಷಣಂಗಳಂ ಪದೆದಿತ್ತಂ || ೯೯

ವ|| ಅಪ್ರಸ್ತಾವದೊಳ್

ವೃ|| ನಿಡುದೊಳ್ನೀಳ್ದತರಂಗಮಾನಸಮುರಲ್ದಂಭೋರುಹಂ ತಳ್ತಜೆಂ |
ಗುಡಿ ದೀರ್ಘಾರುಣಪಾಣಿಶಾಖೆ ದಶನಂ ನುಣ್ಮುತ್ತು ಮೀಂಗಳ್ಬಿಡಂ ||
ಗಿಡಿದೆತ್ತಂ ಪೊಳೆವಕ್ಷಿಗಳ್ಸಲಿಲಮಂಗಡ್ಯೋತಮಿಂತಾಗೆ ಪಾ |
ಲ್ಗಡಲೆಂಬಂತಿರೆ ಸಿಂಧುರಾಜನೊಸೆದೇಳ್ತಂದಂ ಗಭೀರಾನ್ವಿತಂ || ೧೦೦

ವ|| ಅಂತೇಳ್ತಂದಾರಾಜಶೇಖರಂಗೆ ನಖರುಚಿಕುಸುಮಂಬೆರಸು ರತ್ನಾಂಜಲಿಯಂ ಕೆದರ್ದು ಪೊಡಮಟ್ಟು ಮದನಂಗೆ ಮಲ್ಲಿಗೆಮುಗುಳಮಾಲೆಯನೀವವಸಂತನಂತೆ ತಾಂ ತಂದಾಣಿಮುತ್ತಿನಕಂಠನಾಲೆಯುಂ ಕಾಣ್ಕೆಗೈದು ಮತ್ತಮಿರದೆ

ವೃ|| ಸಮದಂತಂ ಚಾರುವಕ್ತ್ರಂ ಕಿರುಗಿವಿ ಘನಘಂಟಾಖುರಂ ನೀಲರತ್ನೋ |
ಪಮನೇತ್ರಂ ಶ್ವೇತವರ್ಣಂ ವಿತತಲಸದುರಂ ದೀರ್ಘವಾಲಂ ಪೃಥುಸ್ಕಂ ||
ಧಮುದಗ್ರಗ್ರೀವಮುದ್ಯಜ್ಜಘನಮುರುಲಲಾಟಂ ವಿಮಾಂಸಾಂಘ್ರಿ ಗಂಭೀ |
ರಮಹಾನಾದಂ ಸುನಾಸಾಪುಟಮುಮರ್ದತುರಂಗಂಗಳಂ ಕಾಣ್ಕೆಗೈದಂ||೧೦೧

ಅದು ಧಾರಾಧರಮಬ್ದದಂತೆ ಪೊಳೆಯುಂತಾವರ್ತಯುಕ್ತಂ ಕುರಂ |
ಗದವೋಲ್ಪೂರ್ಣಗತಿಪ್ರಯುಕ್ತಮಳಿಯಂತಾಮೋದಚಿತ್ತಂ ಕಳಂ ||
ಒದವೋಲ್ಪಾಪಲಸದ್ಗುಣಾಂಚಿತಮುದಂಚಚ್ಚಂದ್ರಬಿಂಬಂಬೊಲ |
ಭ್ಯುದಯಶ್ರೀಕರಲಕ್ಷಣಾಂಕಮೆಸಿಸಿತ್ತಾರಾಜವಾಜಿದ್ವಯಂ || ೧೦೨

ವ॥ ಅಂತುಮಲ್ಲದೆಯುಂ

ವೃ॥ ಗತಿವೇಗಂ ಪುಲ್ಲೆಯಾಪುಲ್ಲೆಯಿನತಿಚಪಲಂ ಮಾರುತಂ ಪುಲ್ಲೆಯಿಂ ಮಾ।
ರುತನಿಂದಂ ಬಾಣಮೆಂತು ತ್ವರಿತಗಮನಸಂಯುಕ್ತಮಾಪುಲ್ಲೆಯಿಂ ಮಾ॥
ರುತನಿಂದಂ ಬಾಣದಿಂ ದೃಷ್ಟಿಯೆ ರಯಗತಿ ನೋಳ್ಪಾಗಳಾಪುಲ್ಲೆಯಿಂ ಮಾ।
ರುತನಿಂದಂ ಬಾಣದಿಂ ದೃಷ್ಟಿಯಿನತಿಜವಗಂ ರಾಜಿಪಾವಾಜಿಯುಗ್ಮಂ॥ ೧೦೩

ವ॥ ಅಂತೆಸೆವಪೂರ್ವಗಂಧರ್ವಯುಗಮಂ ಕಾಣ್ಕೆವಿಡಿದನಂತರಮರಸನ ಪಾಂಗಪ್ರಸನ್ನತೆಯಂ ಪಡೆದು ಪೆಯ್ಯ್ವರ್ ಪೊಡಮಟ್ಟು ಸಿಂಧುರಾಜಂ ಸಿಂಧುರಾರೂಢನಾಗಿ ಸಿಂಧುರಾಜ್ಯಕ್ಕೆ ತಳರ್ದನಾಗಳಾಜಾತ್ಯಶ್ವಂಗಳನಶ್ವಪರೀಕ್ಷಕರಿಂ ಪರೀಕ್ಷಿಸಿ ತದಕ್ಷೀಣಲಕ್ಷಣಾಕೃತಿಗಳಂ ಲಕ್ಷಿಸಿ ಮಂತ್ರಲಕ್ಷನಭೀಕ್ಷಿಸಿ

ಕಂ॥ ಆವಾಜಿಗಳಂಗಾಕೃತಿ।
ಭಾವಮನಸ್ಸ್ಥಿತಿಸುಲಕ್ಷಣಸ್ವರಗತಿಜಾ॥
ತ್ಯಾವಳಿಯೆಂಬಿವನರಸಂ।
ಭಾವಿಸಿ ಪೊಸತೆಂದು ಪೊಗಳ್ದು ಮಗುಳ್ದಿಂತೆಂದಂ॥ ೧೦೪

ದೇವಮಣಿಗೂಡಿ ಜಳಧಿಯೊ।
ಳಾವಿಬುಧವರಾಶ್ವಮೊಗೆದಗಲ್ದಿರ್ಪುದದಂ॥
ದೇವಮಣಿಗೂಡಿರಾಜಿಸು।
ವೀವಿಪುಳತರಾಶ್ವಯುಗಕದೇಂ ಪಾಸಟಿಯೇ॥ ೧೦೫

ವ॥ ಎಂದನರೇಂದ್ರನ ಜಾತ್ಯಾಶ್ವಂಗೆ ಪೊಗಳ್ದು ಪಿತವಜನನಿಂತೆಂದಂ

ವೃ॥ ಹರಿಯಿಂತಪ್ಪಶ್ವಮುಂಟಾಗಿರೆ ಧರವಿಸವಂ ಪದ್ದನೇರಿರ್ಪನೇ ಶಂ।
ಬರದರ್ಪಧ್ವಂಸಿ ತಾನುಂ ಗಿಳಿಯನಡರ್ವನೇ ಮೇಘನುಂ ಸಾರ್ವನೇ ಭೂ॥
ಧರಪಕ್ಷಚ್ಛೇದಿ ಬೆಳ್ಳಂಜೆಯೊಳೆ ತಳರ್ವನೇ ಬೊಮ್ಮನೀಶಾತ್ಮಜಂ ಕೇ।
ಕಿರಥಂ ತಾನಪ್ಪನೇ ಕಾಳ್ಕಿಗವೆ ಗಮಿಪನೇ ಸಂತತಂ ಗಂಧವಾಹಂ॥ ೧೦೬

ವ॥ ಎಂಗವಾತಿಗೆ ಸೂಕ್ತಿಸುಧಾರಸರಾಜಹಂಸಂ ಮಚ್ಚುರ್ತ್ತಿಪ್ಪರ್ನ್ನೆಗಂ ಯಾಮದ್ವಯಭೇರೀಪ್ರಣಾದಂ ನೆಗಳಲೊಡನರಸನಭವಪದಪೂಜೋತ್ಸುಕತೆಯಂ

ಮನದೆಗೊಂಡೋಲಗಮಂ ಪರೆಯುಲ್ವೇಳ್ಪುದುಮಾಗಳ್ಗಳಿಲನೆಳ್ದು ತಲೆವಾಗಿ ತತ್ಕಟಾಕ್ಷರುಚಿಸುಧಾರಸಮಂ ಪಾರ್ದು ಸಾರ್ದು ನಿಂದರಾಜಹಂಸವೃಂದದಿಂ, ಚಯುರವಮುಖರಮುಖವಂದಿಸಂದೋಹದಳವಿಗಳಿದಕಳಕಳಮನೊಳಕೊಂಡು ಮೊಳಗುವಪಟುಪಟಹಶಂಖತಾಳಕಹಳಾಬಹಳನಾದದೇಳ್ಗೆಯಿಂ ಬಿರುದನುಗ್ಗಡಿಸಿ ಕರವೆತ್ತಿ ಪೊಗಳ್ವಮಾಗಧಪ್ರತಾನದಿಂ, ನಿಜರಾಜಸಮುಖಿಪ್ರೇಷಿತವಿಪುಳತರಕಾರ್ಯವಿಜ್ಞಾಪನಂಗೆಯ್ಯಲ್ಸಮಯಂಬಡೆಯದೆ ಸಿಡಿಮಿಡಿಗೊಂಡೊಳಗೊಳಗೆ ಗುಜುಗುಜುಂಗೊಂಡು ನಿಲುಂಬಿನಿಂದನಿಯೋಗಿನಿವಹದಿಂ, ನೆಗಪಿದಪೊನ್ನೊರೆಯುಸುರಗಿವೆರಸು ಕರಾಬ್ಜಮಂ ಮುಗಿದು ಕರುಣಂಬಡೆದು ನಿಜದೇಶಕ್ಕೆ ಬೀಳ್ಕೊಳಲೆಳಸಿ ನಿಂದಂಗವಂಗಕಳಿಂಗತ್ರಿಲಿಂಗಾದಿದೇಶಾಧೀಶ್ವರರಿಂ ದೊಟ್ಟಬೆಯಿಂಮುಂ ಬರಿದಿಟ್ಟಣಿಸಿ ಪೋಪಾಗಳ್ಗೆಡೆಯೊಳ್ಪೊಡೆವ ಚಾಡದೌವಾರಿಕರ ದಂಡಪಾತದಿಂ ದಿಂಡುಗೆಡೆಸೊಯ್ಯನೆ ತಳರ್ವ* ಸಾಮಂತಭೂಮೀಶ್ವರರಿಂ ಮೊತ್ತರಿಸಿನಡೆವಾಗಳ್ಕುಜಂಗಳ್ವಳಂಚಿ ಕಿಸುಗಣ್ಣಿ ನೋಳ್ಪಮಾಮುಸಕದ ವೀರಭಟವರ್ಗದಿಂದರಸಸತ್ತ್ರಧನಕನಕವಸನಮಣಿಭೂಷಣಂಗಳ ಬಲ್ಪೊರೆಯುಂ ಕೊರಲ್ಕುಸಿವಿನಂ ತಲೆಯೊಳ್ಪೊತ್ತು ಪೊರಲಾರದೆ ದಡಗಡಿಸುತ್ತುಮೊಡವೆಗಳ್ಗಂ ಬಲವೆಗಳ್ಗಂ ಪಚ್ಚಿ ಪಲ್ಲಟಿಸಿ ತಳೆದು ಮೆಲ್ಲಮೆಲ್ಲನಡಿಯಿಡುವರ್ಥಿಜನದಿನಭಿನವನರ್ತನರಸಾನುಭವಸಮಾಸ್ವಾದಸಂಜನಿತಸುಖಮಂ ನೆನೆನೆನೆದು ಹಾರೈಸಿ ಮುಗುಳ್ದುಮುಗುಳ್ದೋರೊರ್ವರೊಗ್ಗೊಗಳ್ದು ತಳರ್ವರಸಿಕಜನನಿಕರದಿಂ, ಮತ್ತಂ, ಪೆರೆನೊಸಲೊಳಿಳಿತಪ್ಪ ಬೆಮರಂ ಬೆರಲಿಂ ಬಳಿದೀಡಾಡಿ ಕೆದರ್ದಳಿಕದಳಕಮನುಗುರ್ಗೊನೆಯಿಂ ತಿರ್ದ್ದಿ ಸಡಿಲ್ದ ಕಾಂಚಿಯಂ ಸೃತುಪೂಡಿ ಕರ್ಣಪಾಲಿಕೆಯಿಂ ಕರಗಿ ಕೆನೆಗೊಂಡಿಳಿತಪ್ಪ ಜವಾದಿಯ ಕೋಳ್ಗೆಸರಂ ಮಿಸುನಿಗಾಸೆಯ ಮುಂಜೆರಂಗಿನೊಳೊರಸಿ ತೊಡೆದೆಡಗಯ್ಯಂ ತನ್ನ ನಚ್ಚಿನ ಮುದ್ದುಳಿಗನ ಪೆಗಲೊಳಿಳಿಪಿ ಬಿನದಿಸುತ್ತುಂ ಬಿಂಬಾಧರದ ಕೆಂಬೊಳಪು ಕೆಂಬಟ್ಟೆಯ ಪಸಾಯಮುಸಿಯೆ ತಾಳಮೇಳದ ಕಳೆಯರ ಮೇಳಾಪದೊಳ್ಪೊಳುತ್ತೆರಂಗುಡುತ್ತುಂ ಪದಾಗ್ರದೊಳ್ಪಜ್ಜಳಿಪ ಕಿರುಗೆಜ್ಜೆಗಳ ಝುಣಝುಣತ್ಕಾರಂ ಯುವಜನದ ಕಿವಿಯುಂ ಜಕ್ಕುಲಿಸಿ ಪಳಂಚಿ ಪಜ್ಜೆಯಿಡುವ ಬಿಜ್ಜೋದರಿಯರಂ

ಪಳಿವಚ್ಚರಿಯ ನಚ್ಚಣಿಯರಿಂ, ತುರುಗಿನಡೆವಾಗಳ್ಸೋರೆಪೊಡೆದಪುದೆಂಬಭೀತಿಯಿಂ
ಪೆಗಲಿಂ ತೆಗೆದು ವೀಣೆಯುಂ ಧೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಒಯುಕಾ
ರರ ತೆರಳ್ಕೆಯಿಂ, ಹರಿಮಣಿಕುಟ್ಟಿಮಸ್ಥಳದ ತಿಳಿಗದಿರಂ ಜಳಂಗೆತ್ತು ವಾಮಕರದಿಂ
ಚೀನಾಂಬರದ ನಿರಿಯುಮುಂಜೆರಗಂ ನಸುನೆಗಪಿ ಕಣ್ಗೊಳಲಿ ಕಾಲಿಕ್ಕುವ ಮುಗ್ಧೆ
ಯರ ಮುಗ್ಧತೆಗೆ ನಸುನಗುತೆ ನಡೆವನಾಗರಿಕರೊತ್ತೊತ್ತೆಯಿಂ, ಬಳಲ್ಮುಡಿಯೊ
ಳ್ತುರುಂಬಿದರಲ ನರುಗಂಪಿಂಗೆರಗಿದೆಳದುಂಬಿಗಳ ಬಂಬಲ ಗರಿಯ ಗಾಳಿಯು ಕೋ
ಳಿಂದೇಳ್ದು ಧೂಳಿಮುಸುಗುವ ಪುಡಿಗತ್ತುರಿಯ ಬಿತ್ತರದ ರಜಮೆಂಬ ಮುಬ್ಬಿನೊ
ಳುಬ್ಬಿ ಕಾಳೆಗಂಗೆಯ್ಯಲೆಳಸಿ ನೆಗೆವತಂಗಡಿರಂತೆ ತುಂಗತರಸೀರಂಧ್ರಕುಜಯು
ಗಳಘರ್ಷಣಪರಿಪತತ್ಪಟೀರಪರಾಗಪಟಲಂ ನೆಗೆತರೆಯುಂ, ಕರಾರವಿಂದದೊಳ್ತಿ
ರುಂಪುವರವಿಂದದರಲ ಸರಸಪರಿಮಳಮನಿಮ್ಮಡಿಪ ಸುಯ್ಯೆಲರ ಸುರಭಿಗೆಳಸಿ
ಮುಯ್ಯುವ್ವಿ ನೆಗೆವಳಿಕುಳದಂತೆ ಚೂರ್ಣಾಳಕಂ ಕೆದರೆಯುಂ, ಜಡೆವಾವಿಂಗಗಿ
ದು ಬೆಮರ್ತನೊಸಲ್ಬೆರೆಯಮೃತರಸಬಿಂದು ಜಗುಳ್ದಿಳಿದು ನೇಲ್ದಪುದೆಂಬಂತಿಂಬುವ
ಡೆದಲುಗುವ ನಾಸಾಗ್ರಮೌಕ್ತಿಕದ ಪೊಳಪನೊಪ್ಪವಿಡುವ ಮಂದಸ್ಮಿತಕಾಂತಿಪೀ
ಯೂಷರಸವಿಸರಂ ತೆರೆಮಸಗೆ ಸಿಡಿಲ್ದು ಸಿಂದತೋರಪನಿಮಾಲೆಯುನೆವ ನಂಗೊಂಡ
ಕಟ್ಟಸಕದಬಟ್ಟಮುತ್ತಿನ ಕಂಠಮಾಲೆಯ ನೆಲೆನೊಲೆಗಳ್ಕದಕ್ಕದಿಸೆಯುಂ, ದುಸ್ಸ್ಪ
ರ್ಶಮಪ್ಪಮಾತಂಗಕುಂಭಮುಂ ಪಡಿಗೈವ ಕವಿಜನದಡುರುಕ್ತಿಯುಂ ಶುಕ್ತಿಜಜಘ
ನಸೂತ್ರಕಾಕಲಿತಕಲಕಿಂಕಿಣೀರಣಿತಮಿಷದಿಂ ನಗುವಂತೆಸೆವಘನತರನಿತಂಬ
ಬಿಂಬಂ ನಿಜವಿಲೋಕನಕುತೂಹಲಯುವಜನಮನೋರಾಜ್ಯಕ್ಷೋಭಮಂ ಸೂಚಿ
ಪಕುಲಶೈಲದಂತಡಿಗಡಿಗದಿರುತ್ತಿರೆಯುಂ, ನಿಬಿಡಕುಚಮಂಡಳಮಂಡಳೇಶ್ವರರ
ಪರಸ್ಪರಸ್ಪರ್ಧೆಯಿನಳರ್ದ ಮಧ್ಯದೇಶಂ ಕಂಪಿಪಂತೆ ಬಡನಡು ಬಳುಂಕೆಯುಂ,
ಮಿಡಿವರೆಗಮೆಳಲ್ವನಿಡುಜಡೆಯ ಸುಧೆಯುಂ ಸೂಸುವ ಮುಗುಳ್ನಗೆಯ ಸವಿಯುಂ
ಸೈಗರೆವ ಮೆಲ್ನುಡಿಯ ಮಡುಗಟ್ಟಿದ ಮುಖರಸದ ಕಡೆಗೋಡಿವರಿವ ಕಟಾಕ್ಷ
ರುಚಿಯು ಪೊಗರುಗುವ ಸುಣ್ಣದಂಪಿನ ಬಿಂಕಂಬೆತ್ತು ಕೊಂಕಿದ ಕುಡುವ್ರುವ್ವಿನ
ಥಳಥಳಿಸಿ ಪೊಳೆವ ನುಲಿಪಲ್ಗಳ ಕೆಂಬೆಳಗನುಗುಳ್ವಬಿಂಬಾಧರದ ಕಕ್ಷಪುಟಮನೊ

ತ್ತರಿಸಿ ಬಳೆದಿಟ್ಟೆಡೆಗೊಂಬ ಒಟ್ಟಬಲ್ಮೊಲೆಯು ಕಾವನಕೊರಲ ಕನಕಚಂಪಕದ ಕುಸುಮದ ತೋಳ್ಮಾಲೆಯುಂ ಪಳಿವನಳಿತೋಳ್ಗಳ ತಳಿರಸಿಳಿಕ್ಕೈವ ಕೈದಳಿರ ಹರಮಧ್ಯಮುಂ ಪಳಿವಸೆಳೆನಡುವಿನ ಮದನನ ಮಾಡುವೆಟ್ಟಮುಂ ಮನ್ನಣೆಗೆಡಿಸಿ ಕೊರ್ವಿದವೃತ್ತೋತ್ತುಂಗಜಘನಸ್ಥಳದ ಪೊಂಬಾಳೆಗಂಬಮುಂ ರೋಡಾಡುವನುಣ್ದೊಡೆಯು ಪೂಗಣೆಯನ ಡೊಣೆಯುನಣಕಿಪಕಣೆಕಾಲ್ಗಳ ಕೆಂದಾವರೆಯುನಂದಂಗೆಡಿಪಪದತಳದ ಜೆಲ್ವು ನಡೆನೋಳ್ಪರಾಜಸುತರಂ ನಡೆಗೆಡಿಸಿಯುಂ, ಸೊರ್ಕ್ಕಜವ್ವನದ ಸೊಬಗಿನ ಸೌಂದರ್ಯಮಾಧುರ್ಯಸೌಕುಮಾರ್ಯಂಗಳೊಬ್ಬುಳಿಸಿದಂತೆಸೆದ್ಯೋರಣಂಬೆತ್ತು ಸಾಲ್ವಿಡಿದು ಪರಿಸರದೊಳ್ಸರಿಸಮಾಗಿ ನಡೆವಗಣ್ಯಪಣ್ಯಾಂಗನಾಪ್ರತಾನದಿಂ ರಾಜವೀಧಿ ರಂಜಿಸೆಯುಮಿಂತುವಿಜೃಂಭಿಸಿ ತನ್ಮಹಾಸ್ಥಾನಮಾಗಳ್ಪರೆಯುಲೊಡನೆ

ವೃ|| ಪದಪಿಂದೇಳ್ತಂದು ಶುದ್ಧಾಂತದೊಳೆ ನೆಲಸಿ ಶುದ್ಧಾಂತರಂಗಂ ವಿಳಾಸಾ|
ಸ್ಪದಪೂಜಾಗಾರದೊಳ್ಪೂಜಿಸಿದನಮುಮ ಸದ್ಭಕ್ತಿಯಿಂ ಭರ್ಗನಂ ಭಾ ||
ವದೊಳೆತ್ತಂ ತೀವೆ ತನ್ಮೂರ್ತಿಯು ಕಳೆ ಕಳೆವೆತ್ತಾತ್ಮನೈವೇದ್ಯಮುಂ ಮಾ |
ಡಿದನಾಲಿಂಗಕ್ಕೆ ತಾನೇಂ ಸುಕೃತಿಯೊ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ||೧೦೭

ವೃ|| ತರುಣಾರುಣಭಾಸುರಕಾಂತಿಯುತೇ |
ಚರಣಾರುಣಪದ್ಮನತಾರ್ಯಶತೇ ||
ಶರಣಾವರಣಾನ್ವಿತೆ ದೇವನುತೇ |
ಕರುಣಾಭರಣೇ ಜಯಶೈಲಸುತೇ || ೧೦೮

ಗದ್ಯ|| ಇದು ವಿನಮದಮರವರಮುಕುಟತಟಘಟಿತಮಣಿಗಣ ಮಹಾ
ಪ್ರಭಾಪಟಲ ಪರಿವೃತ ಪರಶಿವಶ್ರೀಪಾದನಖ ಚಂದ್ರಸಾಂದ್ರರುಚಿ
ರುಂದ್ರಚಂದ್ರಿಕಾ ಚಂಚಚ್ಚಕೋರಾಯಮಾನಸರಸಜನ
ಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರ
ದೇವ ವಿರಚಿತಮಪ್ಪರಾಜಶೇಖರವಿಳಾಸ ವಿವು
ಳಪ್ರಬಂಧದೊಳ್ರಾಜಶೇಖರಸಭಾವ
ರ್ಣನಂ ದ್ವಾದಶಾಶ್ವಾಸಂ
ಪರಿಸಮಾಪ್ತಂ.

# ತ್ರಯೋದಶಾಶ್ವಾಸಂ

ಕಂ|| ಶ್ರೀಕಲ್ಯಾಣೀವದನಸು |
ಧಾಕರವರ್ಧಿತಸುಖಾಮೃತಾಂಬುಧಿಯುಭವಂ ||
ಲೋಕತ್ರಯಾಧಿಪತಿ ಕರು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಅನಂತರಮಾಮಹಾನುಭಾವಂ ಮಿತವಚನಸಮೇತಂ ಶಿವಪ್ರಸಾದಸುಧಾಸ್ವಾದನಂಗೈದು ಸಕರ್ಪೂರ ತಾಂಬೂಲಮುಖಾಂತರ್ಗಳಯವಿಳಸಿಸಿತನಲ್ಲಿಂದೇಳ್ತಂದು ಮುತ್ತಿನಕರುಮಾಡದ ಮುಂದಣ ಮೊಗಸಾಲೆಯ ಪಜ್ಜಳಿಪಬಜ್ಜರದ ವೇದಿಕಾಗ್ರದ ಮಣಿಮಯಮೃಗೇಂದ್ರಪೀಠದೊಳ್ಸಲ್ಲೀಲೆಯಿಂ ಕುಳ್ಳಿರ್ದು ಕಟ್ಟಿದಿರೊಳ್ಕಟ್ಟಿರ್ದವಾಜಿಗಳಂ ನೋಡಿ

ಕಂ|| ಈಸವ್ಯವಾಜಿಗಳನಿಂ |
ದಾನುಂ ನೀನುಂ ವಿಳಾಸದಿಂದೇರಿ ಮಹಾ ||
ಸೇನೆಯೊಡಗೂಡಿ ವಿಹರಿಪ |
ಪೀನಗರದ ರಾಜವೀಥಿಯೊಳ್ಸಂಭ್ರಮದಿಂ || ೨

ಎಂದತಿ ಪ್ರೀತಿಯಿಂ ನುಡಿಯೆ ಚತುರಮತಿ ಮಿತವಚನನುಚಿತವಚನಜ್ಞನನುಚಿತಮಿದೆಂದು ತನ್ನೊಳ್ಭಾವಿಸಿ ಕಾರ್ಯಮಂ ಬಗೆದಿಂತೆಂದಂ

ಕಂ|| ಸರಸಗುಣಹಾರ ವಿನಯಾ |
ಭರಣ ವಿವೇಕೈಕನಿಧಿ ಕಳಾನಿಳಯ ದಯಾ ||
ಕರ ಸತ್ಯಶಾಲಿ ಸುಯಶೋ |
ಭರಿತಾಶಾವಳಯ ಶೈವಶರಧಿಶಶಾಂಕಾ ||

ವೃ|| ಬೆಸಸಿದಕಜ್ಜಮಂ ನೆಗಳದುತ್ತರಮಿತ್ತಪನೆಂದು ನಿನ್ನವಾ |
ನಸದೊಳಧೀಶ ನೀಂ ಬಗೆಯದಿರ್ಶಿವಭಕ್ತಜನವ್ರಜಂ ವಿಜೃಂ ||
ಭಿಸಿ ನೆಲಸಿರ್ದ್ದ ಪಟ್ಟಣಮಿದಿಂತಿದರೊಳ್ಬಲಗೂಡಿ ಗಾಡಿ ರಂ |
ಜಿಸೆ ಪೊಸವಾಜಿಯೇರಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ ||

ವ|| ಅಂತುಮಲ್ಲದೆಯುಂ

ಕಂ|| ಮೊದಲೊಳಭಿನವತುರಂಗಮು |
ನೊದವಿದಸಹಣಿಗಳಿನ್ನೈದೆ ತಿರ್ದ್ದಿಸಿ ಬಸಮಾ ||
ದುದನರಿದೇರುವುದರಸ |
ಗ್ಗಿರ್ದು ವಿಹಿತಂ ವಿಶ್ವವಿಬುಧಜನಮಂದಾರಾ ||

ಎನಾನುಮೆಮ್ಮ ದೆಸೆಯಿಂ |
ದೀನಗರದ ಭಕ್ತಜನಕೆಡಬ್ಬರ್ಂದೊಡೆ ಮ ||
ದ್ಭೂನಾಥಂ ಚೋಳನೃಪಂ |
ತಾನೇಂ ಸೈರಿಪನೆ ಶಾರದಾಮಣಿಮುಕುರಾ ||

ವೃ|| ಸಾಂದ್ರಬಳಾನ್ವಿತಂ ರಥಮನೇರಿ ವಿಳಾಸದೆ ಬರ್ಪ್ಪಪೊಳ್ತು ಧ |
ರ್ಮೇಂದ್ರತನೂಭವಂ ಮಡಿಯೆ ತದ್ರಥಚಕ್ರಕೆ ಸಿಲ್ಕಿ ವತ್ಸಮೊಂ ||
ದಿಂದ್ರಸಮಾನನಾನೃಪತಿ ತತ್ಸುತನಂ ಪಿಡಿದಂತೆ ಕೊಂದನಾ |
ಚಂದ್ರಧರಾರ್ಚಕಸ್ಸುತಸಹೋದರರೆಂಬರೆ ಸಾಪರಾಧರಂ ||

ಎನಗತ್ಯಂತಪ್ರತಾಪಂಗತುಳಗಜಹಯಾರೋಹಣಾರೂಢಪುಷ್ಟ್ರಾ |
ಘಿಸಿಯುಕ್ತಂಗೀಹಯಾರೋಹಣದೊಳಿವನಿದೇಂ ಭೀತಿಯುಂ ಪೇಳ್ವನೆಂಬೀ ||
ಮನವಂ ನೀಂ ಮಾಡದಿರ್ವ್ಯಗ್ರತೆಯ ನುಳಿದು ಸಂದಿಗ್ಧಕಾರ್ಯಂಗಳಂ ಮೆ
ಲ್ಲನೆ ಮಾಳ್ಪಂದಂಗಮೆನ್ನೀಬಗೆಗಭಿಮತಮಾಗಿರ್ಪ್ಪುದೈ ರಾಜಪುತ್ರಾ ||

ಕಂ|| ಕೇಳದತಿಹಿತರ ವಚನಮು |
ನಾಳೋಚಿಸದಗ್ರಕಾರ್ಯಮಂ ವ್ಯಗ್ರತೆಯಂ ||
ತಾಳಿ ಕಡುಗಜ್ಜಮೆಸಪುದ |
ನೇಳಿಪುದುರ್ವೀಜನಂ ಜಗನ್ನುತಚರಿತಾ ||

ಸಿರಿಯೊಳ್ಪರಹಿತಮನವು |
ತ್ಸರಮತಿಯುಂ ವಿದ್ಯೆಯೊಳ್ವಿಭುತ್ವದೊಳೆ ನಯಮಾ ||
ಚರಣಮನತಿಶೌರ್ಯದೊಳೊ |
ಸ್ಪಿರೆ ವಿನಯಮನಾಳ್ದು ಬಾಳ್ದವಂಗೆಣೆಯುಂಟೇ || ೧೦
ಭಾವಿಯೆನಿಸಿದ್ದುರ್ದದು ಪರಿ |
ಭಾವಿಸಿ ಕಳೆಯಲ್ಕೆ ಸಾಧ್ಯಮಾಗದು ಜಗದೊಳ್ ||
ದೇವಂಗಾದೊಡನೆಂಡೆಲೆದೇವ |
ಬುಧಂ ನೆಗಳಲಕ್ಕುಮೇ ಪೊಲ್ಲದುದಂ || ೧೧
ತುದಿಗೈದದುದಂ ಫಲಮಿ |
ಲ್ಲದುದಂ ಪಳಿಗೀಡುಮಾಳ್ಪುದಂ ಪರಸಂತಾ ||
ಪದಮಂ ಪರಗತಿವಿಲಯಾ |
ಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ || ೧೨
ಕರಣೀಯಮಿಷ್ಟಕರಣಮ |
ಕರಣೀಯಮನಿಷ್ಟಕರಣಮೆಂಬೀನಯಮಾ ||
ದರಣೀಯಮಲ್ಲದುದುಪರಿ |
ಹರಣೀಯಂ ಭೂಮಿಪಂಗಿಳಾಧಿಪತಿಳಕಾ || ೧೩
ಬಿಡದೆಸಪಕಜ್ಜಮಾವುದ |
ನಡಿಗಡಿಗಾಪ್ತರ್ಕ್ಕಳೊಳ್ವಿಚಾರಿಸಿ ಮಾಳ್ಪಂ ||
ಗೆಡರುಂಟೆ ಕಾರ್ಯಸಿದ್ಧಿಗೆ |
ತೊಡಂಕು ತೋರ್ಪುದೆ ವಿದಗ್ಧಜನವನ ಜೈತ್ರಾ || ೧೪
ನೆರಪಲ್ಸಿರಿಯುಂ ದುರಿತಮ |
ನುರಿಪಲ್ದಶದಿಶೆಯೊಳಿಂದುಕರರುಚಿಯುಶಮಂ |
ಪರೆಪಲ್ಪರನೃಪರುಮನೊ |
ತ್ತರಿಪಲ್ಸಾಲ್ವುದು ನಯಜ್ಞಹಿತಮಿತವಚನಂ || ೧೫

ಭ್ರಮರರಹಿತಾಮೋದಪ್ರದ |
ಸುಮನೋಗಣಹೃದ್ಯಮವಿಕಲಸ್ವಸ್ಥಮುದ ||
ಗ್ರಮನೋಜ್ಞಫಲದಮಖಿಲಾ |
ಗಮವಿನುತಂ ನೀತಿಸುರಮಹೀರುಹಮರಸಾ || ೧೬

ತನುಭೃದ್ಗಣದೊಳ್ತೋರ್ಪ್ಪೀ |
ತನುಧನಲೋಭಂಗಳೆಂತುಮೇಂ ತೋರ್ಕ್ಕುಮೆ ಪೇಳ್ ||
ನಿನಗೆ ಭುವನಾಕ್ಷಿಗಣಸುನ |
ಘನತಿಮಿರಂ ಭುವನದಕ್ಷಿಯಂ ಮುಸುಕುಗುಮೇ || ೧೭

ಅದುಕಾರಣದಿಂ ನಿಜಧೈರ್ಯ |
ದೆ ಗಣಿಸದೆ ಮುಂದೆ ಬರ್ಪ್ಪುದಂ ಬುಧರಲ್ತೆಂ ||
ಬುದನೆಸಗದೆ ಬೆಳ್ಪಸವಾ |
ಳ್ವುದು ಕಜ್ಜಂ ಸಜ್ಜನಾಬ್ಜವನದಿನನಾಥಾ || ೧೮

ವ|| ಎಂದವಂ ನುಡಿಯೆ ಮೊಗದೊಳ್ತಂದಸ್ಮಿತಂ ಮೊಳೆಯೆ ನರೇಂದ್ರತನಯನಿಂತೆಂದಂ

ವೃ|| ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ |
ಸಾರಮರಾಳನೇನುಳಿದುದೇ ನವಚಂಪಕಗಂಧಭೀತಿಯಿಂ ||
ಸಾರದೆ ಮಾಣ್ದುದೇ ವನವಿಹಾರಮನಾರಡಿ ಮುಳ್ಗಳಂಪ್ರಿಯಂ |
ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನ ಪ್ರಚಾರಮಂ || ೧೯

ವ|| ಅದುಕಾರಣದಿಂ

ಕಂ|| ಮುಂದೇಂ ಬರ್ಪ್ಪುದೊ ಹಾನಿಯ |
ದೆಂದಳ್ಕಿ ವಿನೋದಕೇಳಿಯಂ ತೊರೆವಾತಂ ||
ಪಂದೆಯಿವನೆಂಬನಿಂದೆಯು |
ನೊಂದುವನಿದು ರಾಜಧರ್ಮಮೇ ಬಗೆವಾಗಳ್ || ೨೦

ವ|| ಎಂದು ತಾನೆಂದುದನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆಪ
ತ್ರವೋಹಿನಂದನನಿಂತೆಂದಂ

ವೃ|| ಧರ್ಮಜನಂಬರಧ್ವನಿಯನಾಲಿಸಿ ತಾನುಳಿದಂಬುಪಾನಮಂ |
ನಿರ್ಮಳಬುದ್ಧಿ ತನ್ನಸುಜರಾಯುಮನಾಗಳೆ ಸತ್ತ್ರಸಂಗದಿಂ ||
ಕೂರ್ಮೆಯೊಳಲ್ಲಿ ಪೇಣ್ಪಡೆದನಾಪ್ತನಯೋಕ್ತಿಯನೊರ್ಮೆ ಕೇಳ್ದೊಡೇಂ |
ಪೆರ್ಮೆಗೆ ಹಾನಿ ಬರ್ಪುದೆ ವಿಚಾರಿಪುದಾತ್ಮಹಿತಾಹಿತಂಗಳಂ || ೨೧

ಂ|| ವಿತತಾಘನೂನನೀತಿ |
ಕ್ಷಿತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿ ||
ಚ್ಯುತಿಗಧನನಪ್ಪೊಡಂ ಭೂ |
ಪತಿಯುಳ್ಕಲ್ವೇಳ್ಕುಮಮಳಗುಣಗಣನಿಳಯಾ || ೨೨

ವಿದಿತನಿಜರೂಪಮಂ ಮುಕು |
ರದೊಳೀಕ್ಷಿಪವೋಲ್ತ್ರಿದೀಯನಯಕೌಶಲನಂ ||
ಪದಮನಿದನೆನ್ನೊಳೀಕ್ಷಿಪು |
ದಿದುಯುಕ್ತಂ ನಿನಗೆ ನೀತಿವಿದ್ಯಾಭರಣಾ || ೨೩

ವ|| ಎಂದತಿಹಿತಕರ ಪ್ರಸನ್ನತರ ಸದರ್ಥಸಮರ್ಥನಪ್ರಸಂಗಮನವಂ ನುಡಿ
ಯಲೊಡನೆ

ವೃ|| ಪುರಹರನಿಟ್ಟಪುಲ್ಲ ಮುರಿಯಂ ಮುರವೈರಿವಿರಂಚಿಮುಖ್ಯನಿ |
ರ್ಜರರದನೆತ್ತಲಾರದೆ ವಲಂ ಧೃತಿಗುಂದಿದರೆಂದೊಡಾವನಾ ||
ಪರಮಮಹೇಶಶಾಸನಮನುರ್ವರೆಯೊಳ್ಮಿಗೆ ಮೀರ್ವನಣ್ಣನೈ |
ತಿರೆ ಪೆರಪಿಂಗಿ ಪೋದಪುದೆ ಒರ್ಪ ಶುಭಾಶುಭಮಾರ್ಗಮಾದೊಡಂ || ೨೪

ವ|| ಅದಲ್ಲದೆಯುಂ

ವೃ|| ಪೊಸತುದ್ವೇಗಾಶ್ವಮೆಂದೇರದೊಡೆ ಸಮನಿಕುಂ ವಾಹಕತ್ವಕ್ಕೆ ಭಂಗಂ |
ನಿಸದಂ ವೈಹಾಳಿಯೊಳ್ಶಂಕರಶರಣಜನಂ ನೋಯೆ ಕಾಯ್ದಪ್ಪನೆಮ್ಮೀ ||
ವಸುಧೇಶಂ ಮಾಣಗೆಂದಳ್ಕುವುದನುಚಿತಮೀಶಾಜ್ಞೆಯಂ ಬಲ್ಲನಾವಮ್ಮರ್ಗಂ |
ದೆ ಸಮಂತಂತಾಗೆತೋರ್ಪೆಂವಿಪುಲಮಹಿಮೆಯುಂಮುಕ್ತಿಯುಂಸೂರೆಗೊಂಬೆಂ||

ಭ್ರಮರಹಿತಾಮೋದಪ್ರದ |
ಸುಮನೋಗಣಹೃದ್ಯಮವಿಕಲಸ್ವಸ್ಥಮುದ ||
ಗ್ರಮನೋಜ್ಞಫಲದಮಖಿಲಾ |
ಗಮವಿನುತಂ ನೀತಿಸುರಮಹಿರುಹಮರಸಾ || ೧೬

ತನುಭೃದ್ಗಣದೊಳ್ತೋರ್ಪ್ಪೀ |
ತನುಧನಲೋಭಂಗಳೆಂತುಮೇಂ ತೋರ್ಕ್ಕುಮೆ ಪೇಳ್ ||
ನಿನಗೆ ಭುವನಾಕ್ಷಿಗಡಸು ನ |
ಘನತಿಮಿರಂ ಭುವನದಕ್ಷಿಯುಂ ಮುಸುಕುಗುಮೇ || ೧೭

ಆದುಕಾರಣದಿಂ ನಿಜಧೈರ್ಯ |
ದೆ ಗಣಿಸದೆ ಮುಂದೆ ಒಪ್ಪುರ್ದಂ ಬುಧರಲ್ತೆಂ ||
ಬುದನೆಸಗದೆ ಬೆಳ್ಪಸಪಾ |
ಳ್ವುದು ಕಜ್ಜಂ ಸಜ್ಜನಾಬ್ಜವನದಿನನಾಥಾ || ೧೮

ವ|| ಎಂದವಂ ನುಡಿಯೆ ನೊಗದೊಳ್ತಂದಸ್ಮಿತಂ ಮೊಳೆಯೆ ನರೇಂದ್ರ ತನಯನಿಂತೆಂದಂ

ವೃ|| ತೀರದ ನೀರದಂ ಸೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ |
ಸಾರಮರಾಳನೇನುಳಿದುದೇ ನವಚಂಪಕಗಂಧಭೀತಿಯಿಂ ||
ಸಾರದೆ ಮಾಣ್ದುದೇ ವನವಿಹಾರಮನಾರಡಿ ಮುಳ್ಗಳಂಘ್ರಿಯಂ |
ಬಾರಿಪುದೆಂದು ಬಿಟ್ಟುಗೆ ಮದದ್ವಿರದಂ ಗಹನ ಪ್ರಚಾರಮಂ || ೧೯

ವ|| ಅದುಕಾರಣದಿಂ

ಕಂ|| ಮುಂದೇಂ ಬಪ್ಪುದೊ ಹಾನಿಯು |
ದೆಂದಳ್ಕಿ ವಿನೋದಕೇಳಿಯಂ ತೊರೆವಾತಂ ||
ಪಂದೆಯಿವನೆಂಬನಿಂದೆಯ |
ನೊಂದುವನಿದು ರಾಜಧರ್ಮಮೇ ಬಗೆವಾಗಳ್ ||

ವ|| ಎಂದು ತಾನೆಂದುದನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆಪ
ತಿವೋಹಿನಂದನನಿಂತೆಂದಂ

ವೃ|| ಧರ್ಮಜನಂಬರಧ್ವನಿಯನಾಲಿಸಿ ತಾನುಳಿದಂಬುಪಾನಮಂ |
ನಿರ್ಮಳಬುದ್ಧಿ ತನ್ನನುಜರಾಯುಮನಾಗಳೆ ಸತ್ತ್ರಸಂಗದಿಂ ||
ಕೂರ್ಮೆಯೊಳಲ್ಲಿ ಪೇಣ್ಪಡೆದನಾಪ್ತನಯೋಕ್ತಿಯನೊರ್ಮೆ ಕೇಳ್ದೊಡೇಂ |
ಪೆರ್ಮೆಗೆ ಹಾನಿ ಬರ್ಪ್ಪುದೆ ವಿಚಾರಿಪುದಾತ್ಮಹಿತಾಹಿತಂಗಳಂ || ೨೧

ಕಂ|| ವಿತತಾಭಿಮಾನನೀತಿ |
ಕ್ಷಿತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿ ||
ಚ್ಯುತಿಗಧನನಪ್ಪೊಡಂ ಭೂ |
ಪತಿಯುಳ್ಕಲ್ವೇಳ್ಕುಮಮಳಗುಣಗಣನಿಳಯಾ || ೨೨
ವಿದಿತನಿಜರೂಪಮಂ ಮುಕು |
ರದೊಳೀಕ್ಷಿಪನ್ತೊಲ್ತ್ವದೀಯನಯಕೌಶಲಸಂ ||
ಪದಮನಿದನೆನ್ನೊಳೀಕ್ಷಿಪು |
ದಿದುಯುಕ್ತಂ ನಿನಗೆ ನೀತಿವಿದ್ಯಾಭರಣಾ || ೨೩

ವ|| ಎಂದತಿಹಿತಕರ ಪ್ರಸನ್ನತರ ಸದರ್ಥಸಮರ್ಥನಪ್ರಸಂಗಮನವಂ ನುಡಿ
ಯಲೊಡನೆ

ವೃ|| ಪುರಹರನಿಟ್ಟಪುಲ್ಲ ಮುರಿಯಂ ಮುರವೈರಿವಿರಿಂಚಿಮುಖ್ಯನಿ |
ರ್ಜರರದನೆತ್ತಲಾರದೆ ವಲಂ ಧೃತಿಗುಂದಿದರೆಂದೊಡಾವನಾ ||
ಪರಮಮಹೇಶಶಾಸನಮನುರ್ವರೆಯೊಳ್ಮಿಗೆ ಮೀರ್ವನಣ್ಣನೈ |
ತಿರೆ ಪೆರಪಿಂಗಿ ಪೋದಪುದೆ ಒಪ್ಪರ್ಶುಭಾಶುಭಮಾರ್ಗಮಾದೊಡಂ || ೨೪

ವ|| ಅದಲ್ಲದೆಯುಂ

ವೃ|| ಪೊಸತುದ್ವೇಗಾಶ್ವಮೊಂದೇರದೊಡೆ ಸಮನಿಕುಂ ವಾಹಕತ್ವಕ್ಕೆ ಭಂಗಂ |
ನಿಸದಂ ವೈಹಾಳಿಯೊಳ್ಶಂಕರಶರಣಜನಂ ನೋಯೆ ಕಾಯ್ದಪ್ಪನೆಮ್ಮೀ ||
ವಸುಧೇಶಂ ಮಾಣದೆಂದಳ್ಕುವುದನುಚಿತಮೀಶಾಜ್ಞೆಯಂ ಬಲ್ಲನಾಮ್ಮಾರ್ಗಂ |
ದೆ ಸಮಂತಂತಾಗೆತೋರ್ಪ್ಪೆಂವಿಪುಲಮಹಿಮೆಯುಂಮುಕ್ತಿಯುಂಸೂರೆಗೊಂಬೆಂ||

ಬಗೆಗೊಗೆದಳ್ತಿಯುಂ ಸಲಿಸವೇಳ್ಪುದು ಬೇಡೆನವೇಡ ತಂದೆ ನೆ |
ಟ್ಟಗೆ ಮುಳಿದಪ್ಪನೆಂದೆಣಿಸದಿರ್ನ್ನಿನಗಾದಪರಾಧಮೆನ್ನದೆಂ ||
ದಗಣಿತಸಂಭ್ರಮಂ ಮಿಗೆ ತುರಂಗಮಯುಗ್ಮಮನೇರಿ ನೋಳ್ಪರೊ |
ಳ್ನಿಗಳೆ ಮಹೋತ್ಸವಂ ವಿಹರಿಪಂ ಪುರದೊಳ್ಪರಮಾಸುರಾಗದಿಂ || ೨೬

ವ|| ಎಂದರಾಜೇಂದ್ರನುಕ್ತಿಯನಂತಾನುಂ ಮನದೆಗೊಂಡು ನಿಜಮಹತ್ವ ದರ್ಶನಾರ್ಥಮಿದು ಶಿವಕೃತಮುಕ್ಕುಮೆಂದು ನಿರ್ಧರಂಗೈದು

ವೃ|| ಇನಿತೊಂದಾಗ್ರಹಮಂ ಮದೀಯನಯವಾಕ್ಯೋಲ್ಲಂಘನಂಗೈದು ಮಾ|
ಳ್ಪನಿವಂ ನೀತಿವಿದಂ ನವಾಶ್ವಗತಿಯಿಂದೇನಾನುಮೊಂದಕ್ಕುಮ ||
ಲ್ತೆ ನವೀನಂ ಕಡುಗಜ್ಜಮೆಂದೆಣಿಸಿಯುಂ ತಾನಪ್ಪುಕೈದಿರ್ದ್ದನಾ |
ತನ ಮಾತಂ ಪುದುವಾಳ್ತನಂಗಡ ಸಖರ್ಗ್ಗಂತಾದೊಡಂ ಮಿತ್ರರೊಳ್ || ೨೭

ವ|| ಅಂತಿರ್ಪ್ಪನ್ನೆಗಂ

ವೃ|| ತನುವೆರಡೊಂದುಗೂಡಿ ನಿಜಪಕ್ಷದೊಳಪ್ಪಿ ಮನೋನುರಾಗದಿಂ |
ಮನಸಿಜಸೌಖ್ಯಮಂ ಸವಿದು ನಾರಸತಳ್ಪದೊಳಿರ್ಪ್ಪವೇಳೆಯೊಳ್ ||
ವನರುಹಮಿತ್ರನಸ್ತಗಿರಿಮಸ್ತಕದಲ್ಲಿರೆ ನೋಡಿ ಬಾಡಿ ಬೆ !
ಚ್ಚನೆ ಬಿಸುಸುಯ್ದು ಬೇವಸದೆ ಬಿಚ್ಚಿರ್ದುವಕ್ಕಟಚಕ್ಕವಕ್ಕಿಗಳ್ || ೨೮

ಕಂ|| ಇಟ್ಟಣಿಸುತಲ*ರ್ದನೈದಿಲ |
ನಿಟ್ಟಿ*ಸರ್ಗ್ಗಳ್ತಾಗೆ ತಾಳ್ದು ಸಂಕೋಚತೆಯಂ ||
ನೆಟ್ಟನೆ ನಿಂದವೊಲೆಸೆಗುಂ |
ದಿಟ್ಟಿಗೆ ಕೊಳದೊಳಗೆ ಮುಗಿವಕಮಳಕದಂಬಂ || ೨೯

ತಲೆವಾಗಿದಸರಸಿಜದಿಂ |
ದಲರ್ವಂಡೊಕ್ಕುದು ನಿಜೇಶನಗಲುತ್ತಿರೆ ತ ||
ನ್ನಳಿನಿ ಮನಸ್ತಾಪದೆ ತಂ |
ಬುಲವಂ ಕೆಲಕುಗುಳ್ವ*ಳೆಂಬುದಂ ಪ್ರಕಟಿಪವೋಲ್ || ೩೦

ಅಪರಗಿರಿಕರಿಯ ಕುಂಭದ |
ಲಪನದ ಸಿಂದುರದೊಳರುಣಮಣಿಮುಕುರದೊಳೇ ||
ನುಪಮೆಗೆ ಬಂದುದೊ ಸಂಧ್ಯಾ |
ವಿಪುಳಾರುಣರುಚಿಯುಮುಹಿಮಕರಮಂಡಳಮುಂ || ೩೧

ವೃ|| ಕೊಳದೊಳ್ನಿಂದು ತರತ್ತರಂಗಜಳಮಂ ಮಿಂದಲ್ಲಿ ನಗ್ನಾಂಗಿ ಪೊ |
ಕ್ಕಳಿನಾದಚ್ಛಲದಿಂ ಕುಮಂತ್ರಜಪಮಂ ತದ್ದ್ವೇಷದಿಂ ಮಾಡೆ ಕೋ ||
ಮಳೆ ಶೂನ್ಯಾಧ್ವಮನೈದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬೀ |
ಳ್ದಳಿದಂ ದ್ರಾವಿತಚಂದ್ರಸಾಂದ್ರತರರುಗ್ಭಾಸ್ವತ್ಕರಂ ಭಾಸ್ಕರಂ || ೩೨

ಕಂ|| ಮೃಡನ ಕಿರುಜಡೆಯ ಕೆಂಗದಿ |
ರಡರ್ದೆಳವೆರೆ ಬಳೆದು ನಿಜಕಳಾವಿಭವಮನೀ ||
ಪೊಡವಿಗರಿಪಲ್ಕೆ ಬಂದವೊ |
ಲುಡುಪತಿಬಿಂಬಂ ಸರಾಗಮುದಯಿಸಿತಾಗಳ್ || ೩೩

ವೃ|| ಎನಗಾತ್ಮೇಶ್ವರನೀದಿನೇಶ್ವರನಗಲ್ದೋವೋಪೊ ತಾಂ ಪೋಗಿ ಕೆಂ |
ಮನೆ ರಾಗಾನ್ವಿತನಪ್ಪಿದಂ ವರುಣದಿಗ್ಯೋಷಾಂಗಮಂ ನೋಡಲಾ ||
ರೆನಿದಂ ಕಣ್ಗಳಿಸೆಂದು ಪಿಂದಿರುಗಿ ನಿಂದಿಂದ್ರಾಶೆಯೆಂದೆಂಬಕಾ |
ಮಿನಿಯುದ್ವೇಣಿಯಸೂರ್ಯಕಾಂತಿಯೆನಿಸಿತ್ತಿಂದ್ರಾದ್ರಿಯೊಳ್ಚಂದ್ರಮಂ|| ೩೪

ಅಂಬುಜಮುಂ ವಿಯೋಗಿವದನಾಂಬುಜಮುಂ ಕಳೆಗುಂದೆ ಕೂಡೆ ದು |
ಗ್ಧಾಂಬುಧಿಯುಂ ಜನೋತ್ಸವ ಸುಧಾಂಬುಧಿಯುಂ ನಲವೇರ್ಚೆ ಕಾಂತಕಾಂ||
ತಾಂಬಕಕೈರವಂ ಧವಳಕೈರವಮುಂ ನಗೆಯೊಂದೆ ಬಂದುದಾ |
ಲಂಬಿತರಾತ್ರಿ ರಮ್ಯರಮಣೀಮಣಿಕುಂಡಳಮಿಂದುಮಂಡಲಂ || ೩೫

ಕಂ|| ಸಕಳಂಕಕಳಂಕಲಸ |
ನ್ಮಕರಾಂಕನನೊಳಗೆ ತಾಳ್ದನೆಂದಂಧಕಮ ||
ರ್ದಕನ ನೊಸಲಗ್ನಿ ಹಿಮಕರ |
ನ ಕರಂ ಮುತ್ತಿದವೊಲೆಸೆದುದುದಯದರಾಗಂ || ೩೬

ಮದನನ ಘನಪ್ರತಾಪಮ |
ನುದಿತಯಶಶ್ರೀಯನರಿಪುವಂತೆಸೆದುದು ಮು ||
ನ್ನೊದವಿದಕೆಂಪುಂ ಕಡೆಯೊ |
ಳ್ಪುದಿದೆಳವೆಳಗುಂ ವಿಳಾಸದಿಂ ಶಶಧರನಾ || ೩೭

ನಿಜಪಾದದಿಂದೆ ತುಳಿದಂ |
ತ್ರಿಜಗದ್ಬಾಧಕನನಂಧಕಾರಾಂಧಕನಂ ||
ರಜನೀಶ್ವರೇಶ್ವರಂ ಶು |
ಕ್ರಿಜಗೌರಂ ಕುವಲಯಾಧಿಪಂ ಹರಿಣಧರಂ || ೩೮

ಶಂಬರಹರನಂಬುಜರಿಪು |
ಬಿಂಬಮೆನಿಪ್ಪೊಂದುಸಾಣೆಯೊಳ್ಮಸೆಯುತ್ತ ||
ನ್ನಂಬಂ ಪತ್ತಿತ್ತದರ ಕಿ |
ಲುಂಬೆನೆ ತನ್ಮಧ್ಯದಂಕಮೇಂ ಸೊಗಯಿಸಿತೋ || ೩೯

ದ್ವಿಜರಾಜಂ ನಿಜಕರದಿಂ |
ರಜನಿಯ ತಲೆಯುಲ್ಲಿ ತಳೆದತತದೀಧಿತಿಶು ||
ತ್ರಿಜಗದಕ್ಷತೆಯೆನೆ ಚೆಲ್ವಂ |
ಭಜಿಸಿದುದಾಸುಭಗಭಗಣಮಾನಭದೆಡೆಯೊಳ್ || ೪೦

ವೃ|| ಪರವಧುವೆಂದು ನೋಡದಿನನಿಲ್ಲದಿರುಳ್ಪರಿತಂದು ಪದ್ಮಿನೀ |
ತರುಣಿಯ ಕೋರಕಸ್ತನಮನಂಟಿ ಕರಾಗ್ರದೊಳಿಂದುವಲ್ಲಿ ಕಂ ||
ಡರಜನಿಗಳ್ಕಿ ರಾಗಮುಳಿದಾಸ್ಯಕೆ ಬೆಳ್ಪಿರದೇರೆ ಲಂಚವಿ |
ತ್ತುರುತರಮೌಕ್ತಿಕಂಗಳೆನೆ ಕಂಗೊಳಿಸಿರ್ದ್ದುವಲ್ತೆ ತಾರೆಗಳ್ || ೪೧

ವ|| ಅನಂತರಂ

ವೃ|| ಅಮರೇಭೇಂದ್ರಪ್ರಕಾಶಂ ಶಿಖಿಪುರವರ ಸೌಧಾಗ್ರಮುಕ್ತಾಘತೇಜಂ |
ಯಮಹಾಸಜ್ಯೋತಿ ರಾತ್ರಿಂಚರಪತಿಸಿತದಂಷ್ಟ್ರಾಂಕುರಂ ಪಾಶಿಹಾರೋ||
ರುಮಯೂಖಂ ವಾಯುಸತ್ಕೇತುರುಚಿ ಹರಸುಹೃನ್ಮೌಳಿಹೀರಾಂಶುವೀಶಾ |
ನಮಹಾದೇಹದ್ಯುತಿಶ್ರೀ ಬಳೆದುಬಳಸಿದಂತಾಯ್ತು ಬೆಳ್ದಿಂಗಳೆತ್ತಂ || ೪೨

ವ|| ಅಂತುಮಲ್ಲದೆಯುಂ

ವೃ|| ಶರಸಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾ |
ಕರದೆಡೆಯಲ್ಲಿ ತಳ್ತತಿಳಿಜೊನ್ನಮನಂಜೆಗಳುನ್ಮದಾಳಿಗಳ್ ||
ಸುರಮುನಿಗಳ್ಗಜಂಗಳೊಸೆದೀಂಟಲು ಮಾರ್ದ್ದೆರಗಲ್ಕೆಳುಂಗಲಾ |
ತುರಿಸಿ ಕರಾಗ್ರದಿಂದುಡಿಯಲಾಟಿಪ್ಪವೆಂದೊಡದೆಂತು ಬಣ್ಣಿಪೆಂ || ೪೩

ಇದುದಲ್ಲಿಂದ್ರಮನಲ್ತು ಸರ್ತಿಪಮುನೀದ್ರಂ ನಾರದಂ ನೋಳ್ಪೊಡಿಂ|
ತಿದು ತಾಂ ಲಾಂಛನಮಲ್ತು ತತ್ಕರವಿರಾಜದ್ವೀಣೆ ತಾರಾಳಿಯು ||
ಲ್ತಿದು ತತ್ಸ್ಫಟಿಕಾಕ್ಷಮಾಲೆ ನಿಜಡೋದ್ಯಚ್ಚಂದ್ರಿಕಾಶೋಭೆಯು |
ಲ್ತಿದು ತತ್ಕಂಠವಿಲಂಬದೇವಕುಜಪುಷ್ಪಸ್ರಗ್ರಜೋವಿಭ್ರಮಂ || ೪೪

ವ|| ಇಂತೊಗೆತಂದಜಂದ್ರಚಂದ್ರಿಕೆಯಿಂ ಸಮನ್ವಿತಮಾದಯಾಮಿನೀಪ್ರಥಮಯಾಮದೊಳ್ಭೂಮಿಪಲಲಾಮಂ ಸೋಮಧರನಂ ಪ್ರೇಮದಿಂದರ್ಚಿಸಿ ತತ್ಪ್ರಸಾದಸುಧಾಸಪ್ವಾದನಾನಂತರಂ ಸಕರ್ಪೂರತಾಂಬೂಲಪ್ರದಾನಪುರಸ್ಸರಂ ಪ್ರಧಾನತನೂಜನಂ ತದ್ಗೃಹಕ್ಕೆ ಬೀಳ್ಕೊಟ್ಟು ಸರ್ವಮಂಗಳಾಸಮನ್ವಿತನಮಳಕನಕಪರ್ಯಂಕಮೃದುಳತಳ್ಪಸ್ಥಳದೊಳ್ತದ್ರತಾಂತಸಂಜಾತಪರವಶಪ್ರಭೂತಪರಮಸುಖನಿದ್ರಾನುಭವದೊಳಿರ್ಪ್ಪನ್ನೆಗಂ

ವೃ|| ಇದೆ ಪದ್ಮಾಮೋದಮಂತಾಳ್ದೊಲೆದುಸುಳಿವಮಂದಾನಿಲಂಕಾಂತಿಗುಂದಿ
ತ್ತಿದೆ ನಕ್ಷತ್ರಾಳಿ ಶಂಖಧ್ವನಿಯಿದೆ ಶಿವಗೇಹಂಗಳೊಳ್ಕೆಂಪು ಮೂಡು ||
ತ್ತಿದೆ ಪೂರ್ವಾದ್ರೀಂದ್ರದೊಳ್ಚಂದ್ರಿಕೆ ಕಳೆಗಳೆದೀಗಳ್ಪಡಂಮೆಟ್ಟಿಪೋಗು |
ತ್ತಿದೆ ತಳ್ವೇಕೀಗಳೊಲ್ದುಪ್ಪವಡಿಸು ಜಗತೀಮಾನಿನೀಜೀವಿತೇಶಾ || ೪೫

ವ|| ಎಂದುಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ ಮೆಲ್ಲನೇಳ್ವಂತೆ ಹರಸ್ಮರಣಪೂರ್ವಕಂ ಕನತ್ಕನಕಪರ್ಯಂಕಮೃದುಳಶಯ್ಯಾತಳದಿನರಸಿವೆರಸೇಳ್ದು ತತ್ಪ್ರದರ್ಶಿತಾದರ್ಶದೊಳ್ನಿಜಮುಖಾವಲೋಕನಂಗೈದನಂತರಂ ಮರಂದದೊಳ್ಮುಳುಂಗುವ ಮಧುಕರನಂತೆ ಪರಿಮಳೋದಕದಿಂ ಜಳಕಂಬೊಕ್ಕು ಶಾರದಾಭ್ರಂ ತಳ್ತಶಶಾಂಕನೆಸಿಸಿ ಬೆಳ್ವಟ್ಟೆಯಂ ಪೊದೆ

ದುಟ್ಟು ಶಶಿಕಳೆಯಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುವಾವುಗೆಯಂ ಮೆಟ್ಟಿ ಪಾಲ್ಗಡಲ ಪೆರ್ದ್ದೆರೆಯೊಳ್ಪುಗುವಮರಾಳನಂತೆ ಶಶಿಕಾಂತರಚಿತವಾದ ಪೂಜಾಗಾರಮಂ ಪೊಕ್ಕು ನಿಂದು ನಿರೀಕ್ಷಿಪಾಗಳ್ಕಣ್ಗೆ ಕೌತುಕಮನಮರ್ಚ್ಚೆ ಥಳಥಳಿಸಿ ಪೊಳೆದು ಬಳಸಿ ಒಳೆದು ಬಳ್ಳಿವೆಳಗಂ ಕರೆವೆಳಮುತ್ತಿನಮೇಲ್ಕಟ್ಟಿನ ಕೆಳಗಳವಡಿಸಿದ ಮಿಸುನಿವೆಸದೆಸಕದ ಪೊಂದಾವರೆಯ ಸಾಲ್ಗಳ ಪರಿಸರದೊಳೆಳಲೆವಿಟ್ಟ ಮಣಿಮಂಜರಿಯಚ್ಚಕುಚ್ಚುಗಳ ಬಳಸಿ ತೊನೆವ ಪಸುರ್ವರಲ ಲಂಬಣಮಾಲೆಯ ಕೆಲಗೆಲದೊಳ್ಕಟ್ಟಿ ಬಿಟ್ಟ ಕುಸುಮಮಾಲಿಕೆಯ ಪಜ್ಜಳಿಪ ಬಜ್ಜರದ ಕುಟ್ಟಿಮಸ್ಥಳದ ಕರ್ಪೂರರಜದವೇದಿಕೆಯರಲ ಪರಾಗದ ಚಳೆಯದ ಮೃಗಮದದ ಸಾರಣೆಯೊಳ್ಕೈಗೈದ ಮುತ್ತಿನರಂಗವಲ್ಲಿಯ ಚೌಕದೊಳ್ಪಸಣಿಸಿ ಮಡಗಿದ ಸರಸಸುರಭಿಸಲಿಲಸಂಭೃತಸ್ವರ್ಣಕುಂಭಂಗಳ ಪೊಂಬರಿಯಣಂದೊಳಿಳಿಪಿದ ಮಿಸುನಿವಟ್ಟಲ್ಗಳ ತರಂಬಿಡಿದೊಪ್ಪುವ ಪೊನ್ನಗಿಂಡೆಲ್ಗಳ ಘುಸೃಣರಸಂ ಮಿಸುಪಶುಕ್ತಿಗಳ ಚಂದನರಸಂದೀವಿದ ಶಂಖಪಾತ್ರಂಗಳ ಥಳಥಳಿಪ ಮಣಿದೀಪಂಗಳ ಪೊರಗೆಜೆಲ್ಲಿದ ಕಸ್ತೂರಿಯರಜಕ್ಕೆ ಪರಿಮಳಿಗೊಂಬಮದಾಳಿಮಾಳಿಕೆ ಒಳಗೆ ಪುಗದಂತೆ ನೇಮಿಸಿದ ಚಂಪಕ ಮುಕುಲದಾಮದ ಬಾಗಿಲಾವ್ವಡದ ಬಗೆಗೊಳಿಪ ಧೂಪಾವೋದದೊಳ್ಪೊರೆದ ದವನದ ಸೀಗುರಿಯಂ ಪೊಂಬಾಳೆಯ ಚಾಮರಮಂ ಪುಂಡರೀಕಾತಪತ್ರಮಂ ತಳಿರ ತಾಳವೃಂತಮನರಲಕರಂಡಕಂಗಳಂ ಕೆಲಕೆಲ ದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡದಿಯರ ಪಿರಿಯ ಸಿರಿ ಕಮನೀಯಮಾಗೆ ಮನದೊಳುತ್ಸವಿಸಿನಡೆತಂದರ್ಚನೋಚಿತಾಸನದೊಳುತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದ್ದು

ವೃ|| ಘನಸದ್ಯೋಜಾತಮುಖ್ಯಪ್ರಭವಮುಪಿಮಖೋತ್ಪನ್ನಸಂಪನ್ನಿವೃತ್ಯಾ |
ದಿಸಿಯುಕ್ತೋತ್ಪತ್ತಿ ಭಾಸ್ವದ್ಗಣಯುತಕಪಿಲಾದ್ಯಪ್ರಭೂತಾವನೀಪಾ ||
ವನರೂಪಶ್ರೀವಿಭೂತಿ ಪ್ರಭೃತಿಯನುರೆ ಪತ್ಪೂರ್ವಕಂ ಲೇಪನಂಗೈ |
ದು ನಿತಾಂತಂ ತತ್ತ್ರಿಪುಂಡ್ರಂ ತೊಳಗೆ ತಳೆದು ವಿಧ್ಯುಕ್ತಮಂತ್ರಂಗಳಿಂದಂ ||

ಶಿವನೇತ್ರಾಂಭೋಜಮುಂಪೂಜಿಸಿ ಸದಮಳರುದ್ರಾಕ್ಷಮಂ ಭಕ್ತಿಯಿಂದು|
ಕ್ತವಿಧಾನಂದಪ್ಪದಾತಾಣದೊಳೆ ಗಣನೆಯುಂ ಮಿಾರದೋರಂತೆ ತಾಳ್ದೊ ||
ಪ್ಪುವಹೃತ್ಪಂಕೇಜದೊಳ್ಭಾಸಿಸಿದನಿನಘನದ್ಯೋತಿಯುಂ ಸಾಂಬನಂ ಶಂ |
ಭುವನಿಂದ್ವರ್ಧಾಂಕಕೋಟೀರನನಸಘನನಾನಂದದಿಂ ತನ್ನೃಪಾಲಂ || ೪೭

ವ|| ಅಂತು ಜಾನಿಸಿ ಜಲಕ್ಕನೆ ತೊಳಪಮೂರ್ತಿಯನೊಳಗೆ ಕಂಡು ಕರಣಂಗಳ್ಕಳೆಯೇರೆ ಮಾನಸೇಶ್ವರಂ ಮಾನಸಪೂಜೆಯುಂರಚಿಸಿ ಬಾಹ್ಯಪೂಜೆಗೆ ಮನಂದಂದು ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಹೃದಯದೊಳೆ ಜಾನಿಸಿದಪರಿ |
ಜದು ನಿಜಲಿಂಗದೊಳಭಿನ್ನಮೆನಿಸಿರೆಕಂಡೇಂ ||
ಮುದವಾಂತನೊ ನರಪತಿ ಒಗೆ |
ಗೊದವಿದುದದು ತೋರೆ ಪೊರಗೆ ಸುಖಿಸದವೊಳರೇ || ೪೮

ಇದುಮುನಿಗಳ ಮನದೊಳಜೆಳ|
ಗಿದುವಿಧಿವಿಷ್ಣುಗಳ ವಾದಮಂ ಮಾಣಿಸಿದ ||
ಗ್ಗದಪರಬೊಮ್ಮಂತಾನಿಂ |
ತಿದು ಮೋಕ್ಷಾಮಳಫಳಪ್ರದಂ ಸುರಭೂಜಂ || ೪೯

ವ|| ಎಂದು ಕಣ್ದೀವಿ ನೋಡಿ ಮನಂದೀವಿ ನೆನೆದು ಭಾವಂದೀವಿ ಭಾವಿಸಿ ಮತ್ತೆಮತ್ತೆ ಮಾಣದೆ

ಕಂ|| ಸುರಿವಮುದಶ್ರುವೆ ಜಳೆಯುಂ|
ಶರೀರದೊಳ್ಮೊಳೆವಪುಳಕಮೇ ಗುಡಿ ಲಾಸ್ಯಂ ||
ಕರಕಂಪಂ ಗದ್ಗದರುತಿ |
ವರವಾದ್ಯಮದಾಗೆ ಶಿವನನವನಿದಿರ್ಗೊಂಡಂ || ೫೦

ವ|| ಅಂತಿದಿರ್ಗೊಂಡು

ಕಂ|| ಶ್ರುತಿಸತಿಯ ಶಿರೋಮಣಿ ಯುತಿ |
ಪತಿಗಳ ಹೃದಯಾಬ್ಜದಿವ್ಯದಿನಮಣಿ ನತಸಂ ||
ತತಿಚಿಂತಾಮಣಿ ಭುವನ |
ಸ್ತುತಲಿಂಗಂ ತಾನಿದೆಂದುಪೊಗಳ್ದಂಭೂಪಂ || ೫೧

ವ|| ನಿರ್ವ್ಯಾಜಭಕ್ತಿಯಿನಂತು ಪೊಗಳ್ದನಂತರಂ ||

ಲಲಿತರಗಳೆ || ಸುಧೆದಧಿಘೃತಂಮಧುಸದ್ಯೈಕ್ಷವರಸಂಗಳಿಂ | ಮಧುರತರ ಭಸಿತಮಿಶ್ರಿತಸಿತಜಳಂಗಳಿಂ | ಹಿಮವಿಮಳಮಳಯಜಸುಗಂಧಾನುಲೇಪದಿಂ | ಕಮಳರಿಪುಧವಳಕಳಮಾಕ್ಷತಕಳಾಪದಿಂ | ಪರಿಮಳಮಿಳಿತದಳಿತನಳಿನಕುಮುದಂಗಳಿಂ | ಸರಸಚಂಪಕವಕುಳತಿಳಕಕುಸುಮಂಗಳಿಂ | ದಮನಮರುವಕಬಿಲ್ವಪಲ್ಲವಸ್ತೋಮದಿಂ | ಕಮನಘೃತಸಹಿತಗುಗ್ಗುಳಧೂಪಧೂಮದಿಂ | ಪ್ರಚುರಶುಚಿರುಚಿರರುಚಿಮಣಿದೀಪಮಾಲೆಯಿಂ | ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ| ನವನಾರಿಕೇಳಕದಳೀಫಳಪ್ರಸರದಿಂ | ವಿವಿಧತರಸುರಭಿರಸವೀಟಿಕಾವಿಸರದಿಂ | ಮದನಮದನುರ್ದಿಯಂ ಸದಮಳಕಪರ್ದಿಯಂ| ಕರಿದನುಜಭಂಗನಂ ಕರುಣಾಂತರಂಗನಂ| ಶ್ರುತಿನುತಚರಿತ್ರನಂ ವಿತತಶುಭಗಾತ್ರನಂ | ಗಿರಿಸುತಾಕಾಂತನಂ ಪರಿಹೃತಕೃತಾಂತನಂ| ಸಾರಮಹಿಮಾಕರಂ ವೈರಿಜನಭೀಕರಂ| ಭ್ರಾಜಿತದಿನಾಧಿಪಂ ರಾಜಿತಜನಾಧಿಪಂ | ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ ||

ವ|| ಅನಂತರಂ ನುತಿಸಲೆಂದು ಮನಂದಂದು

ವೃ|| ಜಯಜಯ ದೇವದೇವ ಪುರಶಾಸನಶಾಸನಶಾಸನೈಕಚಿ |
ನ್ಮಯ ಮಯನುತ್ಯ ಸಂಪದಸಮಾನಸಮಾನಸಮಾನತಾಂಘ್ರಿಸ ||
ನ್ಮಯ ನಯನತ್ರಯಾಂಚಿತವಪುಷ್ಕರಪುಷ್ಕರಪುಷ್ಕರಾಂಕನಿ |
ರ್ಭಯ ಲಯಕಾಲಸಾಯುಧಕರಾಲಕರಾಲಕರಾಲಸದ್ಭುಜಾ || ೫೭

ಪುರಹರ ದಿವ್ಯಭವ್ಯಜನಪೂಜಿತರಾಜಿತಪಾದ ವೇದಭಾ |
ಸುರತುರಗಾಂಗಸಂಗತವಿಚಿತ್ರಚರಿತ್ರ ಪವಿತ್ರಗಾತ್ರ ನಿ ||
ರ್ಜರಪರಭಂಗ ತುಂಗಮಹಿಮಾಕರ ಭೀಕರಮಿತ್ರಪುತ್ರಸಂ |
ಹರ ಸುರನುತ್ಯ ನಿತ್ಯಜಯ ಕಿಂಕರಶಂಕರ ಚಂದ್ರಶೇಖರಾ || ೫೮

ಅಂಬರಶಿರೋರುಹದಿಗಂಬರರಮಾವರಕಳಂಬರವಿಜಾತಹರತುಂಬುರಸುಗೀತಾ|
ಡಂಬರಗಣವ್ರಜಕುಟುಂಬಜಲಜಾತಸಖಬಿಂಬಗಸುಧಾಮಯಕದಂಬಕರಜಾಲಾ||
ಲಂಬನನಿಜಾಂಗಧೃತಕಂಬಲಧನಂಜಯವದಂಬಕಮಹಾಘನನಿತಂಬ ಗಿರಿಜಾತಾ|
ಚುಂಬನರಸಜ್ಞ ಜಯ ಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರದಿನೇಶಾ||

ಗದ್ಯ|| ಸಕಲಗಣಸಂದೋಹನಂದಿತನಂದೀಶ್ವರಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವಶೃಂಗಾರರಸತರಂಗಿತಸುರಾಂಗನಾಸಂಗೀತ ಸಂಗತರಂಗಸ್ಥಳಕೃತವಿತತಪಟುನಟನವಿಘಟಿತಜಟಾಪಟಲಗಳಿತಗಂಗಾತರಂಗ ಶೀಕರನಿಕರಸಿಮಿಸಿಮಿತನಿಟಿಲತಟಪಟುನಯನಶಿಖಿಶಿಖೋದ್ಧಾಮ ಧೂಮರೇಖಾರಚಿತವಿಘುಂತುದಭ್ರಾಂತಿಪರಿಸ್ವಿನ್ನಶಶಿಶಕಲಗಳದಮೃತರಸವಿಸರಕಣಗಣಭಾಸುರವದನವಿಧುಮಂಡಲಮಂಡಿತರವನರುಚಿನಿಜಯುಸಾಂದ್ರಚಂದ್ರಿಕಾ ದರದಳಿತಕರ್ಣಪೂರಕಲ್ಹಾರಕುಸುಮಸಮುದಂಚಚ್ಚಂಚರೀಕಮೃದುಳರವಮಿಳಿತಕರ್ಣಧೃತಕಂಬಳಾಶ್ವತರಸರಸಸಂಗೀತಾಕರ್ಣನಕೌತುಕಾಂತರಂಗಕರಕುರಂಗತುಂಗಶೃಂಗಾಗ್ರಘರ್ಷಣಚಕಿತನಿಜಕರಕಟಕೋತ್ಕಣಿತಫಣಿಫಣಾಮಣಿಘೃಣಿಗಣಾರುಣಿತ ನಿಜಭುಜಾಲಂಬಿತಗಜದನುಜಾಜಿನಾಂಬರಪ್ರಕಟತಾಂಡವಾಡಂಬರ ದೇವ ಜಯಜಯ

ವ|| ಇಂತುಸಾಹಿತ್ಯಸರ್ವಜ್ಞಂ ಸರ್ವಜ್ಞನಂ ನುತಿಯಿಸಿ ಯಂತ್ರವಾಹಕಂಗೆ ಮಂತ್ರಪುಷ್ಪಮನಿತ್ತು ನಿರ್ವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು ಸಂದಣಿಪ ಸಾತ್ವಿಕಂಗಳಿಂ ಕಂಗೊಳಿಸಿ ಪುರುಷಪುಂಗವಂ ಪುಂಗವಧ್ವಜಂಗಾತ್ಮಾರ್ಪಣಂಗೆಯ್ದುನಿಸಾಸುಂಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಪಳಿಕುಗೊಡದೊಳಗೆ ಪೊರಗು |
ಜ್ವಳಿಪಂತಜ್ಯೋತಿಯಂತಿರೊಳಗಂಪೊರಗಂ ||
ಬೆಳಪಮನೋಮಧ್ಯಸಮು |
ಜ್ವಳಲಿಂಗಮನರಸನಕ್ಕರಿಂ ಜಾನಿಸಿದಂ || ೫೫೪
ಅಣಿಯರಮುಭವನ ಸುಗುಣಮ |
ನೆಣಿಪಂತಿರೆ ನಚ್ಚಮಚ್ಚಿ ತನ್ನ ಪಿಮೆಗಳಂ ||
ಗುಣಿಪಂತಿರೆ ಜನಪಾಲಾ |
ಗ್ರಣಿ ಪಂಚಾಕ್ಷರಮನಮಮ ಜಪಿಸಿದನಾಗಳ್ || ೫೫೬

ವ|| ಇಂತು ಪೂಜಾಜಪಾದಿಗಳಂ ಸಾಂಗಮೆನೆ ರಚಿಸಿ ಮತ್ತಮಿರದೆ ||
ಚಾಮರವೃತ್ತಂ ||

ವೃ|| ಷಡಕ್ಷರಾತ್ಮಕಂ ಷಡೂರ್ಮಿವರ್ಜಿತಂ ಷಡಂಗಗಂ |
ಷಡಕ್ಷರಪ್ರಭಾವಸದ್ಗುಣಂ ಷಡಧ್ವವಲ್ಲಭಂ ||
ಷಡಕ್ಷರಾಗಸಾಕ್ಷಿಣಂ ಷಡಬ್ಜಕರ್ಣಿಕಾಸನಂ |
ಷಡಕ್ಷರಪ್ರಭುಂ ಶಿವಂ ಭವಂತಮನ್ವಹಂ ಭಜೇ || ೫೭
ನಿತ್ಯಾನಂದಂ ನಿಯುತವರದಂ ನಿಷ್ಕಳಂ ನೀಲಕಂಠಂ |
ಸತ್ಯಾರಾಮಂ ಸರಸಹೃದಯಂ ಸದ್ಘನಜ್ಯೋತಿರಂಗಂ ||
ಶ್ರುತ್ಯಾರೂಢಂ ಶುಭಗುಣಯುತಂ ಶುದ್ಧಸಿದ್ಧಾಂತಸಾರಂ |
ಭೃತ್ಯಾಧಾರಂ ಭುವನಶರಣಂ ತ್ವಾಂ ಶರಣ್ಯಂ ಪ್ರಪದ್ಯೇ || ೫೮
ಶ್ಲೋ|| ಮನೋಜಯಮಹಾಯೋಗೋ |
ರಾಜಾಂಕೋಮದಸುಪ್ರಿಯಃ ||
ಮನೋಜಯಮಹಾಯೋಗೋ |
ರಾಜಾಂಕೋಮದಸುಪ್ರಿಯಃ || ೫೯

ವ|| ಎಂದುಪೊಗಳ್ದು ಶರಣ್ಬೊಕ್ಕು ತತ್ಪಾದಾಂಬುಪ್ರಸಾದಸೇವನಂಗೈದು ಸಕಲಮಾಹೇಶ್ವರರಂ ಧನಕನಕಸುವಸನಮಣಿಭೂಷಣಾದಿಗಳಿಂ ತುಷ್ಟಿವಡಿಸಿ ಪೂಜಿಸಿ ತತ್ಪ್ರಸನ್ನತೆಯಂ ಪಡೆದನಂತರಂ ನೃಪಧ್ವನಿಕೇತನಕ್ಕೆ ನಡೆತಂದಿಕ್ಕಿದಕನಕ ಪರ್ಯಂಕಧವಳತಳ್ಪಮನಳಂಕರಿಸಿ ಸುಗುಣಾಲಂಕಾರನಲಂಕಾರಮಂತಳೆಯಲುಜ್ಜುಗಿಸಿಪ್ಪನವೊಪ್ಪನಲಂಕರಣಚತುರಂ ಬಂದು ಮುಖಕಮಳಕ್ಕೆಳವೆಣ್ಗಳ ದಿಟ್ಟಿ ತಾಗದಂತೆ ರಕ್ಕೆಗಿಡುವವೋಲ್ವಜ್ರಮಯಮಕುಟಮನಮರ್ಚಿಯುಂ, ಪೊಗಸಿರಿಯ ನಾಲಿಂಗಿಸಿದೆಳವೆರೆಯೆನಿಸಿ ಸಿತಭಸಿತತಿಳಕಮಂ ಪಣೆಯೊಳಳವಡಿಸಿಯುಂ, ಕಟಾಕ್ಷರುಚಿಲತೆಗೆ ಮುಗುಳಮಂಜರಿಯಂ ಪಡೆದಂತೆ ಮೌಕ್ತಿಕ ಚತುಷ್ಕಮಂಡಿತಕರ್ಣಾಭರಣಮಂ ಧರಿಸಿಯುಂ, ಹೃದಯಮಧ್ಯದೊಳಿಪ್ಪ ಮದನಹರನಂ ಮಲ್ಲಿಗೆಯಮಾಲೆಯಿಂದರ್ಚಿಸಿಪಂತೆ ಪೇರುರದೊಳ್ಮುತ್ತಿನ ಹಾರಮಂ ಕೆಳೆಗೊಳಿಸಿಯುಂ, ಮಂದಾಕಿನಿಯ ಡಿಂಡೀರಪಿಂಡಂಗಳ್ಬಳಸಿದೈರಾವತಕರಿಕರಾಗ್ರದ ಸಿರಿಯಂ ಕೈಗೊಳಿಸಿ ಮುಂಗೈಯೊಳ್ಮುತ್ತಿನ ಕಂಕಣಮನಿಕ್ಕಿಯುಂ, ಫುಲ್ಲ

ಶರನ ಪಲ್ಲವಶರಕ್ಕೆ ಕೆಂಗರಿಗಟ್ಟಿದಂತೆ ಕೆಂಬೆಳಗಂ ಕರೆವಕೆಂಬೆರಲುಂಗುರವುನಂ ಗುಲಿಯೊಳ್ತೊಡಚ್ಚಿರ್ಯಯುಂ, ತನುರುಚಿಯಂ ಪಡೆಯಲೆಳಸಿ ತರಣಿಕಿರಣಮಪ್ಪಿದಂ ದಮುಂ ನಿರವಿಸಿ ಕನಕಕವಚಮುಂ ತುಡಿಯಿಸಿಯುಂ, ನಳಿನನಾಳಮುಂ ಬಳಸಿ ತಳ್ತ ಳಿಮಾಲೆಯ ಲೀಲೆಯನೊಳಕೈಸಿ ನೀಲರತ್ನದ ಕಡೆಯುಮಂ ಪದಾಗ್ರದೊಳಂದಂ ಗೊಳಿಸಿಯುಮತಿಸಂತಸದಿನಿಂತು ಕಂತುವಂ ಪಸದನಂಗೊಳಿಪ ವಸಂತನಂತವಂಪಸ ದನಂಗೊಳಿಸಲೊಡನೆ

ವೃ|| ತೊಳಗಿದನಿಂದ್ರನಂದನನ ಮೈಸಿರಿಯಂ ಜರೆದಾಮೃಗಾಂಕನು |
ಜ್ಜ್ವಳಮನಿಳಿಂಕೆಗೆಯ್ದು ನಳಕೂಬರನಗ್ಗದಗಂಡಗಾಡಿಯಂ ||
ಪಳಿದು ಮನೋಜನೋಜೆಯವಿಳಾಸಮನೇಳಿಸಿ ಕಾಯಕಾಂತಿಮಂ |
ಜುಳವದನಾಂಶುವಿಭ್ರಮವಿಳಾಸವಿರಾಜಿತರಾಜಶೇಖರಂ || ೬೦

ವ|| ಆಗಳ್ಮಿತವಚನಕುಮಾರನಂತೆ ತಾನುಮನೂನಾಳಂಕಾರಾಲಂಕೃತನಾಗಿ

ವೃ|| ನುಣ್ಗದಪಂ ಪಳಂಚಲೆಯೆ ಕುಂಡಳಮುಂಡಳವಾನನಾಂಬುಜಂ |
ತಣ್ಗದಿರಂಗೆ ಸೋಲಮನಮರ್ಚ್ಚೆ ವಿಭೂಷಣಕಾಂತಿ ಭಾನುವಂ ||
ನಾಣ್ಗೆಡಿಪಂತೆ ಪರ್ಬ್ಬಿರೆ ಕನತ್ಕವಚಾಂಶುಸಮೇತನೊಪ್ಪಮಂ |
ಕಣ್ಗೆರದೀಯೆ ರತ್ನಮಕುಟದ್ಯುತಿ ಬಂದನಮಾತ್ಯನಂದನಂ || ೬೧

ವ|| ಅನಂತರಮವಂಬೆರಸಲ್ಲಿಂ ಸಲ್ಲೀಲೆಯಿಂದೇಳ್ತಂದು ಭದ್ರಮಂಟಪದ ಮುಂದಣಮುತ್ತಿನ ಮೊಗಸಾಲೆಯೊಳ್ಕತಿಪಯಭಟಪಟಲಪರಿವೃತನೋಲಗಂಗೊ ಟ್ಟು ಮಿತವಚವದನಮಂ ನಿರೀಕ್ಷಿಸಿ ರಾಜಾಲಯದೊಳೋಜೆಮಿಗೆ ರಾಜಿಪರಾ ಜವಾಜಿಗಳಂ ಬರಿಸೆಂಬುದುಮುವಂ ಬೆಸಸಲೊಡನೆ ಕಡುವೇಗದಿಂ ಕೈಗೈದುಪಲ್ಲ ಣಿಸಿ ಪಟ್ಟಸಹಣಿಗಳಿಕ್ಕೆಲದೊಳ್ಪಿಡಿದು ತಡೆಯದೆ ತಪರ್ಪ್ಪಗಳ್

ವೃ|| ಮಿಸುನಿಯಪಕ್ಕರಕ್ಕೆ ಪೊಸಮಾಣಿಕವಲ್ಲಣಮುಚ್ಚಮುತ್ತುತ |
ಳ್ತೆಸೆವಮುಖಪ್ರಸಾಧನಮುರಸ್ಸ್ಥಿತಕಿಂಕಿಣಿಕಾಳಿ ಪಕ್ಕದೊಳ್ ||
ಮಿಸುಗುವಜಲ್ಲಿ ಬೆಳ್ಗರಿ ಕೊಡಂಕೆಯಚಾಮರವೊಪ್ಪೆ ಬಂದುವಂ |
ದಸದೃಶವಾಜಿಗಳ್ಸುಗುಣ ರಾಜಿಗಳುತ್ತಮಸತ್ವಭಾಜಿಗಳ್ || ೬೨

ಕಂ|| ನೊಸಲೊಳ್ಮಿಸುಗುವಮಿಸುನಿಯ |
ಪೊಸಕನ್ನಡಿ ಕಣ್ಗೆವಂದುದಿನಬಿಂಬಂ ಬಂ ||
ದೆಸೆವಂತೆ ನಿಜಸಮನ್ವಯ |
ವಸುಧೇಶ್ವರವಿಹರಣೇಕ್ಷಣಾಪೇಕ್ಷತೆಯಿಂ || ೬೩

ವ|| ಅಂತುಮಲ್ಲದೆಯುಂ

ಕಂ|| ಜವದಿಂ ಗಮಿಪುದನೆನ್ನೊ |
ಳ್ತವೆಕಲ್ತಂ ಪವನನವನನಹಿ ನುಂಗುಗುಮೆಂ ||
ದವಧರಿಸಿ ಕಚ್ಚಿರ್ದಂತಿರೆ |
ನವಾಶ್ವಮಾಸ್ಯದ ಖಲೀನದಿಂ ಕಣ್ಗೊಳಿಕುಂ || ೬೪

ವ|| ಅಂತೆಸೆದು ಬಂದಾಸಗರ್ವಗಂಧರ್ವಂಗಳಂ ಸಸಂಭ್ರಮಂ ನಿರೀಕ್ಷಿಸಿ ಸಂತಸಂಬಟ್ಟು ವಿಹರಣಪ್ರಸ್ಥಾನಭೇರಿಯಂ ಪೊಯ್ಸೆಂದು ದಂಡನಾಥಂಗೆ ಧರಾಧಿಪಂ ಬೆಸಸೆ ತನ್ನಿರೂಪದಿಂ ಮೇಘನಾದಂ ಬಂದು ಭೇರಿಯಂ ಭೂರಿಸ್ವನಂ ನೆಗಳೆ ಕನಕಕೋಣಮನಡಸಿ ಪಿಡಿದು ಪೊಡೆಯಲೊಡನೆ

ವೃ|| ಬಿಡುಗಣ್ಣಾರ್ಕ್ಕಡುಬೆರ್ಚ್ಚೆ ಬಳ್ಕೆ ದಿಗಿಭಂಗಳ್ಭೋಂಗಿಪಂ ಬಾಗಿ ಕುಂ |
ಬಿಡೆ ಭಾಸ್ವದ್ರಥದಶ್ವಮಳ್ಕೆ ಕದಡೇಳ್ದಂಬೋಧಿಯುಂ ತುಳ್ಕೆ ಕ ||
ಣ್ಗಿಡೆ ವಿದ್ವತ್ತತಿಯುಬ್ಬಿರ್ಪಬ್ಬೆ ವಿಪುಳ ಬ್ರಹ್ಮಾಂಡಮಂ ತುಂಬಿ ತ |
ಳ್ತಿಡೆಗೊಂಡತ್ತು ಧಳಂಧಳಂಧಳನದದ್ಗಂಭೀರಭೇರೀರವಂ || ೬೫

ವ|| ಆಗಳಾವಿಹರಣವಿಳಾಸವಿಪುಳಭೇರೀರವಂಗೇಳ್ದು ಮೇಘನಾದಮಂ ಕೇಳ್ದಮಯೂರಂಗಳಂತೆ ಕಡುಸಡಗರಂ ಮಿಕ್ಕು ಪೊಕ್ಕು ಗಂಧಸಿಂಧುರಂಗಳಂ ಬಂಧುರಮೆನೆ ಪಿಂಗದೆ ಸಿಂಗರಿಸಿ ಗಜಾರೋಹಕರ್ಪ್ಪರ್ಸದನಂಬಡೆದೇರಿ ಮೀರಿ ನೆರಪಿದಾಗಳ್

ವೃ|| ಇಳಿದಿಳೆಯುಂ ಪದಂಗೊಳಿಸೆ ದಾನಜಳಂ ಜಳದಂಗಳಂತೆ ಮಂ |
ಜುಳಪೃಥುಕೂಟದಂತೆಸೆಯೆ ಕುಂಭತಟಂ ಕುಳಭೂಧರಂಗಳಂ ||
ತವಳಡೆ ದಂತಕಾಂತಿ ಸೊದೆಯಂತಿರೆ ಭದ್ರರವಾಗೃಹಂಗಳಂ |
ತಳರ್ದವಿಳಾವನೀತಳಮನೇಂ ನೆರೆದಿದ್ದುರ್ವೊ ಮತ್ತಹಸ್ತಿಗಳ್ || ೬೬

ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ ಸಂ |
ಗ್ರಥಿತೋದ್ಯಚ್ಚಾಮರಪ್ರಸ್ಫುರಿತಚಳಿತಕರ್ಣಂ ಭ್ರಮದ್ಭೃಂಗಸಂಘ ||
ಪ್ರಥಿತಪ್ರೋದ್ದಾನಧಾರಾಘಟಿತಕಟತಟಂ ಮೇಚಕೋಚ್ಚಂಡಚಂಚ |
ತ್ಪೃಥಿವೀಭೃತ್ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಲಂ||

ವ|| ಅಂತು ನೆರೆದೇಳ್ತಂದ ದಂತಿಸಂತತಿಯಲ್ಲದೆಯುಂ

ವೃ|| ಘನಘಂಟಾಖುರಮುನ್ನತಂ ಪೃಥುತರಸ್ಕಂಧಂ ಬೃಹದ್ದೀರ್ಘದೇ |
ಹಸಿಯುಕ್ತಂ ಸಮದಂತಮುಜ್ಜ್ವಳಮುಖಂ ಪ್ರಾಲಂಬಿವಾಲಂ ಲಸ ||
ದ್ಧ್ವನಿ ಚೇತೋಗತಿ ಸನ್ಮಣಿವ್ರಜಸಮಾಕೀರ್ಣಸ್ಫುರತ್ಸ್ವರ್ಣವುಂ |
ಡನಮೇಳ್ತಂದುದಭಂಗಭಂಗವಿಳಸದ್ರಂಗತ್ತುರಂಗವ್ರಜಂ || ೭೮

ವ|| ಇಂತೇಳ್ತಂದ ಪಂಚಪಲ್ಲವದವಾಜಿಗಳ ರಾಜಿಗಳ ಪಿಂದೆ ಸಂದಣಿಗೊಂಡು

ವೃ|| ಮಿಳಿರ್ದತ್ತಂ ತೋರೆ ಪೊಂಬಟ್ಟೆಯ ಪಳಯಿಗೆಗಳ್ಮೇಲೆ ಮುಕ್ತಾತಪತ್ರಾ|
ವಳಿ ಚೆಲ್ವಂ ಬೀರೆ ಚಕ್ರೋಚ್ಚಳಿತಚಟುಲಚೀತ್ಕಾರಮಾಶಾಪ್ರದೇಶಾ||
ವಿಳಮಾಗಲ್ಮೀರೆ ಸೂತವ್ರಜದ ಬಗೆ ತುರಂಗಂಗಳಾದಂತೆ ಮುಂದು |
ಜ್ಜ್ವಳಿಸುತ್ತುಂ ಪಾರೆ ಕೂಡಿತ್ತಮಮಪೃಥುವರೂಥವ್ರಜಂಪೆರ್ಮೆಯಿಂದಂ ||

ವ|| ಅಂತು ನೆರೆದೇಳ್ತಂದು ನಿಂದವರೂಥವಾಜಿಗಳಲ್ಲದೆಯುಂ |

ವೃ|| ಎಡಗಾಲೊಳ್ಪೋದೊಡತ್ತರ್ಗಳ್ತಿರೆ ಝಣಝಣನಿಕ್ವಾಣಮುದ್ಘೋರುಕಂನೇ
ರ್ಪಡೆ ಚೆಲ್ವಂ ಬೀರೆ ಗೇಣಂ ತಳೆದು ಮಿಸುಗೆ ಕೆಂದಟ್ಟೆ ಪೊಂಗುಪ್ಪಸಂದೊ||
ಟ್ಟೊಪ್ಪಡಸಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಲಾ |
ಳ್ಗಡಣಂ ಕೈಕೊಂಡು ನಾನಾಯುಧಮನವುಮ ಬಂದತ್ತದಂ ಪೇಳ್ವೆನೇನಂ||

ವ|| ಇಂತನಂತಸಂಭ್ರಮದಿಂ ನೆಲನೆಲ್ಲಮನಳುರ್ಕೆಗೊಂಡು ಘುಳುಘುಳಿಸಿ ನೆರೆದು ತೆಕ್ಕನೆ ತೀವಿದಚತುರಂಗಬಲಮುಂ ಕಂಡು ಕಡುಸಂತಸಂಮಿಕ್ಕು

ಕಂ|| ವಂದಿಗಳುಗ್ಗಡಿಸುತ್ತಿರೆ †
ದುಂದುಭಿ ಮಿಗೆ ಮೊಳಗೆ ಬಹಳಕಹಳಾನಾದಂ ||
ಮುಂದೆಸೆಯೊಳೆಸೆಯೆ ನೃಪನೊಲ |
ಪಿಂದಡರ್ದಂ ಪವನಗಮನನಾಮದಹಯಮುಂ || ೭೧

ವ|| ಅಂತೇರಿದಾಗಳಾಮಿತವಚನಕುಮಾರಂ ಹರಿಣಗತಿಯೆಂಬೆರಡನೆಯ
ತುರಂಗಮನಾರೋಹಿಸಿ ತನ್ನೊಡನೆ ಸಡಗರಂ ಮಿಕ್ಕು ಸುರತುರಂಗಮನಡರ್
ಜಯಂತನೊಡನೆ ಧನದಾಶ್ವಮನಡರ್ದುತಳರ್ವನಳಕೂಬರನಂತೆಸೆದು ಬರೆ ನಿ
ಮುಕುಟರುಚಿರರುಚಿ ರವಿಕಿರಣಮಂ ಪಳಂಚಲೆಯೆ ತೊಡೆದಮೃಗಮದಕರ್
ಮದ ಕಡುಗಂಪಿಂಗೆ ಪಿಂಗದೆ ಭೃಂಗಾಳಿ ಕವಿತರೆ ಪುಷ್ಕರಪುಂಡರೀಕಮಿಲ್ಲ
ಬಬಗೆಯಿನಿಲ್ಲೆನಿಪಂತೆ ಸಲ್ಲಲಿತಮುಕ್ತಾಮಯಾತಪತ್ರಂಗಳ್ಮೇಲೆ ಲೀಲೆಯಿಂ ಬ
ಗಗನಲಕ್ಷ್ಮಿಯ ಪಯೋಧರಮಂ ಪುಸುಂಕಿದಚೀನಾಂಬರದ ಸೆರಂಗಿನಂತೆ ತೊ
ತೊಳಪಪಳಯಿಗೆಯ ಪಟಂಗಳ್ಮೆಳಿರುತ್ತಿರೆ ವಿಭವರಮೆಯ ಕಟಾಕ್ಷಮೆಂಬಂ
ಭಾಮಿನೀಚಾಲಿತಚಾರುಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆ
ದತರಂಗದಂತೆ ಸೂಸುವಸೀಗುರಿ ದೇಸಿವಡೆಯೆ ಪಿರಿದುಸಂಭ್ರಮದಿಂ ಪುರವೀ
ಯೊಳ್ಪಪರ್ಪಾಗಳ್

ವೃ|| ಮಣಿಮಯಭೂಷಣಾಂಶು ಮುಕುಟದ್ಯುತಿ ಹಾರಮರೀಚಿ ವಜ್ರಕಂ |
ಕಣರುಚಿ ಮೆಯ್ಯ ನುಣ್ಬೆಳಗು ಕಯ್ಯಸಿತಾಸಿಯ ಕಾಂತಿ ಪೊನ್ನಪೇ ||
ರಣೆಯಪೊಗರ್ತ್ತಳರ್ತ್ತಳಿಸೆ ದಿವ್ಯಹಯಂಗಳನೇರಿ ಬಂದುದಂ |
ದಣಿಕೆಗಳುಂಬಮಾಗಿ ವಿಭವಂ ಮಿಗೆ ರಾಜಕುಮಾರಸಂಕುಳಂ || ೭

ಕಂ|| ಆರಾಜಸುತರ ನಡುವೆ ಮ |
ಹಾರಾಜಸುತಂ ಸಿತಾಶ್ವದಗ್ರದೊಳೆಸೆದಂ ||
ಶಾರದನೀರದದಗ್ರದೊ |
ಳಾರಾಜಂ ಭಗಣಪರಿವೃತಂ ರಂಜಿಪವೋಲ್ || ೭

ಗಗನದೊಳೆ ನೋಡಲೆಂದು |
ಜ್ಜುಗಿಸಿದಖಚರಿಯರ ಕಣ್ಗೆ ಬಲಧೂಳಿ ಕರಂ ||
ಪುಗವಂತೆ ಬೀಸಿದಪುದೆಸೆ |
ಮಿಗೆ ಮಿಳಿರ್ವಪಟಂಗಳಿಂದೆ ಪಳಯಿಗೆ ಮೆರೆಗುಂ || ೭

ವ|| ಅಂತುಮಲ್ಲದೆಯುಂ

ಕಂ|| ಕೆಂಬಳಯಿಗೆ ಲಂಬಿಸೆ ತ |
ಳ್ತಂಬುಜಸಖಬಿಂಬಮಕ್ಷಿಗಿಂಬಾದುದು ಕೆಂ ||
ಕಂಬಡೆದೆಸೆವಂಬುದದಿಂ |
ಚುಂಬಿತಮಾಯ್ತೆಂಬತೆರದೊಳಂಬರತಳದೊಳ್ || ೭೫

ಸ್ರ|| ವಿತತಾತೋದ್ಯಪ್ರಣಾದಂ ರಥನಿಕರಲಸಚ್ಚೀತ್ಕೃತಿಧ್ವಾನಮುಜ್ಜೃಂ |
ಭಿತರಾಜದ್ವಾಜಿಹೇಷಾರಸಿತಮಿಭಘಟಾಬೃಂಹಿತೋದ್ಯದ್ರವಂ ವಿ ||
ಶ್ರುತವಂದಿವ್ರಾತಕೋಲಾಹಲರುತಿ ಸುಭಟಸ್ಫಾರಹುಂಕಾರರಾವಂ |
ಶ್ರಿತಚಂಚತ್ಕೇತುಘಂಟಾರಣಿತಮಖಿಳದಿಗ್ದೇಶಮಂ ತೀವಿತಾಗಳ್ || ೭೬

ಬಲಭಾರಕ್ಕೆ ಧರಾತಳಂ ಕುಸಿಯೆ ಸೇನಾಧೂಳಿಯಿಂ ಮಿಕ್ಕು ಬಾಂ |
ಬೊಳೆ ಪಂಕಾವಿಳಮಾಗೆ ಭೇರಿಯ ಗಭೀರಧ್ವಾನದಿಂ ದಿಗ್ಗಜಾ ||
ವಳಿ ಕಂಪಂಗೊಳೆ ದೀರ್ಘಕೇತನಪಟಂ ಸಂದೋಹದಿಂದೊಂದಿ ಮಂ |
ಬುಳಸೂರ್ಯಾತಪಮಿಲ್ಲಮಾಗೆ ಪದೆದೇಳ್ತಂದಂ ನರೇಂದ್ರಾತ್ಮಜಂ || ೭೭

ವ|| ಅಂತೇಳ್ತಪ್ಪಾಗಳ್ಕಲಿಗಳ್ಕರತಳದಿನೊರೆಗಳೆದು ಕುರುಳ್ಚುವಕ್ಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ಸಂಚಳಿಸಿದಂತೆಯುಂ, ಪಡಿತಳಿಸಿ ನಡೆಗೊಳ್ವ ಸಿಂದೂರಾರುಣಿತಗಂಧಸಿಂಧುರಸಂದೋಹದಿಂ ಸಂಧ್ಯಾರುಣಿತಪಶ್ಚಿಮಾಚಲಂ ಪಲವುರೂಪಾಂತು ನಡೆಗೊಳ್ವಂತೆಯುಂ, ಪಕ್ಕಜಲ್ಲಿಗಳಿಂ ಪರಿಶೋಭೆವಡೆದು ಪರಿವತುರಂಗಸಂಘದಿಂ ನೊರೆಮಾಲೆವೆರಸಿ ತರಂಗೊಂಡು ತರಂಗಸಂಘಾತಂ ಬಳಜಳಧಿಯೊಳ್ನೆಗೆದಂತೆಯುಂ, ಮೇಲೆ ನೆಗೆದೊತ್ತರಿಸಿ ನಡೆವಮುತ್ತಿನ ಸತ್ತಿಗೆಗಳಿಂ ಚಂದ್ರಭುವನಮವತರಿಸಿದಂತೆಯುಂ, ಸಾಲ್ವಿಡಿದು ಸೂಸುವಧವಳ ಚಾಮರಂಗಳಿಂದಂ ಜೆವಿಂಡನೆಬ್ಬಿರ್ದಂತೆಯುಂ, ಭೋಂಕನೆ ನೂಂಕಿ ಬರ್ಪರ್ಮಣಿಮಯಮಾದತೇರ್ಗ್ಗಳಿಂದಿಂದ್ರಚಾಪಪಂಬೆತ್ತನೀರತೇರ್ಗ್ಗಳೆಳೆಗಿಳಿದು ತಳರ್ವಂತೆಯುಂ, ಕವಿತಪ್ಪರ್ಕಿನಖೇಟಕಂಗಳಿಂ ಕಮಠಕೋಟಿ ಕಣ್ಗೆ ಗೋಚರಿಸಿದಂತೆಯುಂ, ಮಕುಟವರ್ಧನರಮಣಿಮಕುಟಂಗಳಿಂ ಮಾರ್ತಾಂಡಮಂಡಳಂಗಳಳುರ್ಕೆಗೊಂಡುದಿಸಿದಂತೆ

ದುಟ್ಟು ಶಶಿಕಳೆಯುಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುವಾವುಗೆಯುಂ ಮೆಟ್ಟಿ ಪಾಲ್ಗಡಲ ಪೆರ್ದೆರೆಯೊಳ್ಪುಗುವಮರಾಳನಂತೆ ಶಶಿಕಾಂತರಚಿತಮಾದ ಪೂಜಾಗಾರಮುಂ ಪೊಕ್ಕು ನಿಂದು ನಿರೀಕ್ಷಿಪಾಗಳ್ಕಣ್ಗೆ ಕೌತುಕಮನಮರ್ಚೆ ಥಳಥಳಿಸಿ ಪೊಳೆದು ಒಳಸಿ ಒಳೆದು ಬಳ್ಳಿನೆಳಗಂ ಕರೆವೆಳಮುತ್ತಿನಮೇಲ್ಕಟ್ಟಿನ ಕೆಳಗೆಳ ವಡಿಸಿದ ಮಿಸುನಿವೆಸದೆಸಕದ ಪೊಂದಾವರೆಯ ಸಾಲ್ಗಳ ಪರಿಸರದೊಳೆಳಲೆವಿಟ್ಟ ಮಣಿಮಂಜರಿಯುಚ್ಚ ಕುಚ್ಚುಗಳ ಬಳಸಿ ತೊಸೆವ ಪಸುರ್ವರಲ ಲಂಬಣಮಾಲೆಯ ಕೆಲಗೆಲದೊಳ್ಕಟ್ಟಿ ಬಿಟ್ಟ ಕುಸುಮಮಾಲಿಕೆಯ ಪಜ್ಜಳಿಪ ಬಜ್ಜರದ ಕುಟ್ಟಿಮಸ್ಥಳದ ಕರ್ಪೂರರಜದವೇದಿಕೆಯರಲ ಪರಾಗದ ಜಳೆಯದ ಮೃಗಮದದ ಸಾರಣೆಯೊಳ್ಕೈಗೈದ ಮುತ್ತಿನರಂಗವಲ್ಲಿಯ ಚೌಕದೊಳ್ಪಸಣಿಸಿ ಮಡಗಿದ ಸರಸಸುರಭಿಸಲಿಲಸಂಭೃತಸ್ವರ್ಣಕುಂಭಂಗಳ ಪೊಂಬರಿಯಾಣದೊಳೆಳಸಿದ ಮಿಸುನಿವಟ್ಟಲ್ಗಳ ತರಂಬಿಡಿದೊಪ್ಪುವ ಪೊನ್ನಗಿಂಡಿಲ್ಗಳ ಘುಸೃಣರಸಂ ಮಿಸುಪಶುಕ್ತಿಗಳ ಚಂದನರಸಂದೀಪಿದ ಶಂಖಪಾತ್ರಂಗಳ ಧಳಧಳಿಪ ಮಣಿದೀಪಂಗಳ ಪೊರಗೆಜೆಲ್ಲಿದ ಕಸ್ತೂರಿಯುರಜಕ್ಕೆ ಪರಿಮಳಿಗೊಂಬಮುದಾಳಿಮಾಳಿಕೆ ಒಳಗೆ ಪುಗದಂತೆ ನೇಮಿಸಿದ ಚಂಪಕ ಮುಕುಲದಾಮದ ಜಾಗಿಲಾಪ್ಪಡದ ಒಗೆಗೊಳಿಪ ಧೂಪಾಮೋದದೊಳ್ಪೊರೆದ ದವನದ ಸೀಗುರಿಯುಂ ಪೊಂಬಾಳೆಯ ಚಾಮರಮುಂ ಪುಂಡರೀಕಾತಪತ್ರಮುಂ ತಳಿರ ತಾಲವೃಂತಮುನರಲಕರಂಡಕಂಗಳುಂ ಕೆಲಕೆಲದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡದಿಯರ ಪಿರಿಯ ಸಿರಿ ಕಮನೀಯಮಾಗೆ ಮನದೊಳುತ್ಸವಿಸಿನಡೆತಂದರ್ಚನೋಚಿತಾಸನದೊಳುತ್ತರಾಭಿಮುಖಂ ಪ್ರಸನ್ನಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದ್ದ

ವೃ|| ಘನಸದ್ಯೋಜಾತಮುಖ್ಯಪ್ರಭವಮುಹಿಮಖೋತ್ಪನ್ನಸಂಪನ್ನಿವೃತ್ಯಾ |
ದಿಸಿಯುಕ್ಕೋತ್ಪತ್ತಿ ಭಾಸ್ವದ್ಗುಣಯುತಕಪಿಲಾದ್ಯಪ್ರಭೂತಾವನೀಪಾ ||
ವನರೂಪಶ್ರೀವಿಭೂತಿ ಪ್ರಭೃತಿಯನುರೆ ಪತ್ಪೂರ್ವಕಂ ಲೇಪನಂಗೈ |
ದು ನಿತಾಂತಂ ತತ್ತ್ರಿಪುಂಡ್ರಂ ತೊಳಗೆ ತಳೆದು ವಿಧ್ಯುಕ್ತಮಂತ್ರಂಗಳಿಂದಂ ||

ಶಿವನೇತ್ರಾಂಭೋಜಮಂಪೂಜಿಸಿ ಸದಮಳರುದ್ರಾಕ್ಷಮಂ ಭಕ್ತಿಯಿಂದು|
ಕ್ತವಿಧಾನಂದಪ್ಪದಾತಾಣದೊಳೆ ಗಣನೆಯಂ ಮಿಾರದೋರಂತೆ ತಾಳ್ದು ||
ಪ್ಪುವಹೃತ್ಪಂಕೇಜದೊಳ್ಜಾನಿಸಿದನಿನಘನಜ್ಯೋತಿಯಂ ಸಾಂಬನಂ ಶಂ |
ಭುವನಿಂದ್ವರ್ಧಾಂಕಕೋಟೀರನನನಘನನಾನಂದದಿಂ ತನ್ನೃಪಾಲಂ || ೪೭

ವ|| ಅಂತು ಜಾನಿಸಿ ಜಲಕ್ಕನೆ ತೊಳಪಮೂರ್ತಿಯನೊಳಗೆ ಕಂಡು ಕರಣಂಗಳ್ಕಳೆಯೇರೆ ಮಾಸವೇಶ್ವರಂ ಮಾನಸಪೂಜೆಯಂರಚಿಸಿ ಬಾಹ್ಯಪೂಜೆಗೆ ಮನಂದಂದು ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ನೆಲೆಗೊಳಿಸಿ ನಿಸ್ಸಿಮೇಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಹೃದಯದೊಳೆ ಜಾನಿಸಿದಪರಿ |
ಜದು ನಿಜಲಿಂಗದೊಳಭಿನ್ನಮೆನಿಸಿರೆಕಂಡೇಂ ||
ಮುದವಾಂತನೊ ನರಪತಿ ಒಗೆ |
ಗೊದವಿದುದದು ತೋರೆ ಪೊರಗೆ ಸುಖಿಸದದೊಳರೇ || ೪೮

ಇದು ಮುನಿಗಳ ಮನದೊಳಬೆಳ|
ಗಿದು ವಿಧಿವಿಷ್ಣುಗಳ ವಾದಮಂ ಮಾಣಿಸಿದ ||
ಗ್ಗದಪರಬೊಮ್ಮಂತಾನಿಂ |
ತಿದು ಮೋಕ್ಷಮುಳಫಳಪ್ರದಂ ಸುರಭೂಜಂ || ೪೯

ವ|| ಎಂದು ಕಣ್ಣೇವಿ ನೋಡಿ ಮನಂದೀವಿ ನೆನೆದು ಭಾವಂಗೇವಿ ಭಾವಿಸಿ ಮತ್ತೆಮತ್ತೆ ಮಾಣದೆ

ಕಂ|| ಸುಖವಮುದಶ್ರುವೆ ಜಳೆಯಂ|
ಶರೀರದೊಳ್ಮೊಳೆವಪುಳಕಮೇ ಗುಡಿ ಲಾಸ್ಯಂ ||
ಕರಕಂಪಂ ಗದ್ಗದರುತಿ |
ವರವಾದ್ಯಮದಾಗೆ ಶಿವನನವನಿದಿಗೊಂಡಂ || ೫೦

ವ|| ಅಂತಿದಿಗೊಂಡು

ಕಂ|| ಶ್ರುತಿಸತಿಯ ಶಿರೋಮಣಿ ಯತಿ |
ಪತಿಗಳ ಹೃದಯಾಬ್ಜದಿವ್ಯದಿನಮಣಿ ನತಸಂ ||
ತತಿಚಿಂತಾಮಣಿ ಭುವನ |
ಸ್ತುತಲಿಂಗಂ ತಾನಿದೆಂದುಪೊಗಳ್ದಂಭೂಪಂ || ೫೧

ವ|| ನಿರ್ವ್ಯಾಜಭಕ್ತಿಯಿಸಂತು ಪೊಗಳ್ದನಂತರಂ ||

ಲಲಿತರಗಳೆ || ಸುಧೆದಧಿಘೃತಂಮಧುಸದ್ಯೈಕ್ಷವರಸಂಗಳಿಂ | ಮಧುರತರ ಭಸಿತಮಿಶ್ರಿತಸಿತಜಳಂಗಳಿಂ | ಹಿಮವಿಮಳಮಳಯಜಸುಗಂಧಾನುಲೇಪದಿಂ | ಕಮಳರಿಪುಧವಳಕಳಮಾಕ್ಷತಕಳಾಪದಿಂ | ಪರಿಮಳಮಿಳಿತದಳಿತನಳಿನಕುಮುದಂಗಳಿಂ | ಸರಸಚಂಪಕವಕುಳತಿಳಕಕುಸುಮಂಗಳಿಂ | ದಮನಮರುವಕಬಿಲ್ವಪಲ್ಲವಸ್ತೋಮದಿಂ | ಕಮನಘೃತಸಹಿತಗುಗ್ಗುಳಧೂಪಧೂಮದಿಂ | ಪ್ರಚುರಶುಚಿರುಚಿರರುಚಿಮಣಿದೀಪಮಾಲೆಯಿಂ | ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ| ನವನಾರಿಕೇಳಕದಳೀಫಳಪ್ರಸರದಿಂ | ವಿವಿಧತರಸುರಭಿರಸವೀಟಿಕಾವಿಸರದಿಂ | ಮದನಮದನಮರ್ದಿಯಂ ಸದಮಳಕಪರ್ದಿಯಂ| ಕರಿದನುಜಭಂಗನಂ ಕರುಣಾಂತರಂಗನಂ| ಶ್ರುತಿನುತಚರಿತ್ರನಂ ವಿತತಶುಭಗಾತ್ರನಂ | ಗಿರಿಸುತಾಕಾಂತನಂ ಪರಿಹೃತಕೃತಾಂತನಂ| ಸಾರಮಹಿಮಾಕರಂ ವೈರಿಜನಭೀಕರಂ| ಭ್ರಾಜಿತದಿನಾಧಿಪಂ ರಾಜಿತಜನಾಧಿಪಂ | ರಾಜಿಸುತೆ ನಲ್ಮೆಯಿಂ ಪೂಜಿಸಿದನೊಲ್ಮೆಯಿಂ ||

ವ|| ಅನಂತರಂ ನುತಿಸಲೆಂದು ಮನಂದಂದು

ವೃ|| ಜಯಜಯ ದೇವದೇವ ಪುರಶಾಸನಶಾಸನಶಾಸನೈಕಚಿ |
ನ್ಮಯ ಮಯನುತ್ತ ಸಂಪದಸಮಾನಸಮಾನಸಮಾನತಾಂಘ್ರಿಸ ||
ನ್ಮಯ ನಯನತ್ರಯಾಂಚಿತವಪುಷ್ಕರಪುಷ್ಕರಪುಷ್ಕರಾಂಕನಿ |
ರ್ಭಯ ಲಯಕಾಲಸಾಯುಧಕರಾಲಕರಾಲಕರಾಲಸದ್ಭುಜಾ || ೫೨

ಪುರಹರ ದಿವ್ಯಭವ್ಯಜನಪೂಜಿತರಾಜಿತಪಾದ ವೇದಭಾ |
ಸುರತುರಗಾಂಗಸಂಗತವಿಚಿತ್ರಚರಿತ್ರ ಪವಿತ್ರಗಾತ್ರ ನಿ ||
ರ್ಜರಪರಭಂಗ ತುಂಗಮಹಿಮಾಕರ ಭೀಕರಮಿತ್ರಪುತ್ರಸಂ |
ಹರ ಸುರನುತ್ಯ ನಿತ್ಯಜಯ ಕಿಂಕರಶಂಕರ ಚಂದ್ರಶೇಖರಾ || ೫೩

ಅಂಬರಶಿರೋರುಹದಿಗಂಬರರಸಾವರಕಳಂಬರವಿಜಾತಹರತುಂಬುರಸುಗೀತಾ|
ಡಂಬರಗಣವ್ರಜಕುಟುಂಬಜಲಜಾತಸಖಬಿಂಬಗಸುಧಾಮಯಕದಂಬಕರಜಾಲಾ||
ಲಂಬನನಿಜಾಂಗಧೃತಕಂಬಲಧನಂಜಯವದಂಬಕಮಹಾಘನನಿತಂಬ ಗಿರಿಜಾತಾ|
ಚುಂಬನರಸಜ್ಞ ಜಯ ಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರದಿನೇಶಾ||

ಗದ್ಯ|| ಸಕಲಗಣಸಂದೋಹನಂದಿತನಂದೀಶ್ವರಮುಕುಂದಹಸ್ತಾಹತವಿತತಮೃದುಮೃದಂಗಮಂಗಳರವಶೃಂಗಾರರಸತರಂಗಿತಸುರಾಂಗನಾಸಂಗೀತ ಸಂಗತರಂಗಸ್ಥಳಕೃತಪಿತತಪಟುನಟನವಿಘಟಿತಜಟಾಪಟಲಗಳಿತಗಂಗಾತರಂಗ ಶೀಕರನಿಕರಸಿಮಿಸಿಮಿತನಿಟಿಲತಟಪಟುನಯನಶಿಖಿಶಿಖೋದ್ದಾಮ ಧೂಮರೇಖಾರಚಿತವಿಧುಂತುದಭ್ರಾಂತಿಪರಿಸ್ವಿನ್ನಶಶಿಶಕಲಗಳದಮೃತರಸವಿಸರಕಣಗಣಭಾಸುರವದನವಿಧುಮಂಡಲಮಂಡಿತರದನರುಚಿನಿಚಯಸಾಂದ್ರಚಂದ್ರಿಕಾ ದರದಳಿತಕರ್ಣಪೂರಕಲ್ಹಾರಕುಸುಮಸಮುದಂಚಚ್ಚಂಚರೀಕಮೃದುಳರವಮಿಳಿತಕರ್ಣಧೃತಕಂಬಳಾಶ್ವತಸರಸಸಂಗೀತಾಕರ್ಣನಕೌತುಕಾಂತರಂಗಕರಕುರಂಗತುಂಗಶೃಂಗಾಗ್ರಘರ್ಷಣಚಕಿತನಿಜಕರಕಟಕೋತ್ಕಂಪಿತಫಣಿಫಣಾಮಣಿಘೃಣಿಗಣಾರುಣಿತ ನಿಜಭುಜಾಲಂಬಿತಗಜದನುಜಾಜಿನಾಂಬರವಿಕಟತಾಂಡವಾಡಂಬರ ದೇವ ಜಯಜಯ

ವ|| ಇಂತುಸಾಹಿತ್ಯಸರ್ವಜ್ಞಂ ಸರ್ವಜ್ಞನಂ ನುತಿಯಿಸಿ ಯಂತ್ರವಾಹಕಂಗೆ ಮಂತ್ರಪುಷ್ಪಮುಸಿತ್ತು ಸಿರ್ವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು ಸಂದಣಿಪ ಸಾತ್ತ್ವಿಕಂಗಳಿಂ ಕಂಗೊಳಿಸಿ ಪುರುಷಪುಂಗವಂ ಪುಂಗವಧ್ವಜಂಗಾತ್ಮಾರ್ಪಣಂಗೆಯ್ದಿಸಿಸಾಸುಂಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ

ಕಂ|| ಪಳಿಕುಗೊಡದೊಳಗೆ ಪೊರಗು |
ಜ್ವಳಿಪಂತಜ್ಯೋತಿಯಂತಿರೊಳಗಂಪೊರಗಂ ||
ಬೆಳಪಮನೋಮಧ್ಯಸಮು |
ಜ್ವಳಲಿಂಗಮನರಸಸಳ್ಕರಿಂ ಜಾಸಿಸಿದಂ || ೨೪೨

ಅಣಿಯರಮುಭವನ ಸುಗುಣಮು |
ನೆಣಿಪಂತಿರೆ ನಚ್ಚಿಮಚ್ಚಿ ತನ್ಮಹಿಮೆಗಳಂ ||
ಗುಣಿಪಂತಿರೆ ಜನಪಾಲಾ |
ಗ್ರಣಿ ಪಂಚಾಕ್ಷರಮನಮಮ ಜಪಿಸಿದನಾಗಳ್ || ೨೪೩

ವ|| ಇಂತು ಪೂಜಾಜಪಾದಿಗಳಂ ಸಾಂಗಮೆನೆ ರಚಿಸಿ ಮತ್ತಮಿರದೆ ||

ಚಾಮರವೃತ್ತಂ ||

ಕಂ|| ನೊಸಲೊಳ್ಮಿಸುಗುವಮಿಸುಸಿಯ |
ಪೊಸಕನ್ನಡಿ ಕಣ್ಗೆವಂದುದಿನಬಿಂಬಂ ಬಂ ||
ದೆಸೆವಂತೆ ಸಿಜಸಮನ್ವಯ |
ವಸುಧೇಶ್ವರವಿಹರಣೇಕ್ಷಣಾಪೇಕ್ಷತೆಯಿಂ || ೬೩

ವ|| ಅಂತುಮಲ್ಲದೆಯುಂ

ಕಂ|| ಜವದಿಂ ಗಮಿಪುದನೆಸ್ಕೊ |
ಳ್ತವೆಕಲ್ತಂ ಪವನನವನನಪಿ ನುಂಗುಗುಮೆಂ ||
ದವಧರಿಸಿ ಕಚ್ಚಿರ್ದಂತಿರೆ |
ನವಾಶ್ವಮಾಸ್ಯದ ಖಲೀನದಿಂ ಕಣ್ಗೊಳಿಕುಂ || ೬೪

ವ|| ಅಂತೆಸೆದು ಬಂದಾಸಗರ್ವಗಂಧರ್ವಂಗಳಂ ಸಸಂಭ್ರಮಂ ನಿರೀಕ್ಷಿಸಿ ಸಂತಸಂಬಟ್ಟು ವಿಹರಣಪ್ರಸ್ಥಾನಭೇರಿಯಂ ಪೊಯ್ಸೆಂದು ದಂಡನಾಥಂಗೆ ಧರಾಧಿಪಂ ಬೆಸಸೆ ತನ್ನಿರೂಪದಿಂ ಮೇಘನಾದಂ ಬಂದು ಭೇರಿಯಂ ಭೂರಿಸ್ವನಂ ನೆಗಳೆ ಕನಕಕೋಣಮನಡಸಿ ಪಿಡಿದು ಪೊಡೆಯಲೊಡನೆ

ವೃ|| ಬಡುಗಣ್ಣಾರ್ಕ್ಕಡುಬೆರ್ಚ್ಚೆ ಒಳ್ಕೆ ದಿಗಿಭಂಗಳ್ಬೋಗಿಪಂ ಬಾಗಿ ಕುಂ |
ಬಿಡೆ ಭಾಸ್ವದ್ರಥದಶ್ವಮಳ್ಕೆ ಕದಡೇಳ್ದಂಬೋಧಿಯುಂ ತುಳ್ಕೆ ಕ ||
ಣ್ಗೆಡೆ ವಿದ್ವಿಟ್ತತಿಯುಬ್ಬಿ ಪರ್ಬ್ಬಿ ವಿಪುಳ ಬ್ರಹ್ಮಾಂಡಮಂ ತುಂಬಿ ತ |
ಳ್ತೆಡೆಗೊಂಡತ್ತು ಧಳಂಧಳಂಧಳನದದ್ಗಂಭೀರಭೇರೀರವಂ || ೬೫

ವ|| ಆಗಳಾವಿಹರಣವಿಳಾಸವಿಪುಳಭೇರೀರವಂಗೇಳ್ದು ಮೇಘನಾದಮಂ ಕೇಳ್ದಮಯೂರಂಗಳಂತೆ ಕಡುಸಡಗರಂ ಮಿಕ್ಕು ಪೊಕ್ಕು ಗಂಧಸಿಂಧುರಂಗಳಂ ಬಂಧುರಮೆನೆ ಪಿಂಗದೆ ಸಿಂಗರಿಸಿ ಗಜಾರೋಹಕರ್ಪ್ಪಸದನಂಬಡೆದೇರಿ ಮೀರಿ ನೆರಪಿದಾಗಳ್

ವೃ|| ಇಳಿದಳೆಯಂ ಪದಂಗೊಳಿಸೆ ದಾನಜಳಂ ಜಳದಂಗಳಂತೆ ಮಂ |
ಜುಳಪೃಥುಕೂಟದಂತೆಸೆಯೆ ಕುಂಭತಟಂ ಕುಳಭೂಧರಂಗಳಂ ||
ತವಳಡೆ ದಂತಕಾಂತಿ ಸೊದೆಯಂತಿರೆ ಭದ್ರರವಾಗ್ರಹಂಗಳಂ |
ತಳರ್ದ ಖಿಳಾವನೀತಳಮನೇಂ ನೆರೆದಿರ್ದ್ದುವೊ ಮತ್ತಹಸ್ತಿಗಳ್ || ೬೬

ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ ಸಂ |
ಗ್ರಥಿತೋದ್ಯಚ್ಚಾಮರಪ್ರಸ್ಫುರಿತಚಳಿತಕರ್ಣಂ ಭ್ರಮದ್ಭೃಂಗಸಂಘ ||
ಪ್ರಥಿತಪ್ರೋದ್ದಾನಧಾರಾಘಟಿತಕಟತಟಂ ಮೇಚಕೋಚ್ಚಂಡಚಂಡ |
ತ್ಪೃಥಿವೀಭೃತ್ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಲಂ||

ವ|| ಅಂತು ನೆರೆಗೇಳ್ತಂದ ದಂತಿಸಂತತಿಯಲ್ಲದೆಯುಂ

ವೃ|| ಘನಘಂಟಾಖುರಮುನ್ನತಂ ಪೃಥುತರಸ್ಕಂಧಂ ಬೃಹದ್ದೀರ್ಘದೇ |
ಹನಿಯುಕ್ತಂ ಸಮದಂತಮುಜ್ಜ್ವಳಮುಖಂ ಪ್ರಾಲಂಬಿವಾಲಂ ಲಸ ||
ದ್ಧ್ವನಿ ಚೇತೋಗತಿ ಸನ್ಮಣಿವ್ರಜಸಮಾಕೀರ್ಣಸ್ಫುರತ್ಸ್ವರ್ಣಮುಂ |
ಡನಮೇಳ್ತಂದುದಭಂಗಭಂಗಪಿಳಸದ್ರಂಗತ್ತುರಂಗವ್ರಜಂ || ೭೮

ವ|| ಇಂತೇಳ್ತಂದ ಪಂಚಪಲ್ಲವದವಾಜಿಗಳ ರಾಜಿಗಳ ಪಿಂದೆ ಸಂದಣಿಗೊಂಡು

ವೃ|| ಮಿಳಿರ್ದತ್ತಂ ತೋರೆ ಪೊಂಬಟ್ಟೆಯ ಪಳಯಿಗೆಗಳ್ಮೇಲೆ ಮುಕ್ತಾತಪತ್ರಾ|
ವಳಿ ಚೆಲ್ವಂ ಬೀರೆ ಚಕ್ರೋಚ್ಚಳಿತಚಟುಲಚೀತ್ಕಾರಮಾಶಾಪ್ರದೇಶಾ||
ವಿಳಮಾಗಲ್ಮೀರೆ ಸೂತವ್ರಜದ ಬಗೆ ತುರಂಗಂಗಳಾದಂತೆ ಮುಂದು |
ಜ್ಜ್ವಳಿಸುತ್ತುಂ ಪಾರೆ ಕೂಡಿತ್ತಮಮ ಪೃಥುವರೂಥವ್ರಜಂಪೆರ್ಮೆಯಿಂದಂ ||

ವ|| ಅಂತು ನೆರೆದೇಳ್ತಂದು ನಿಂದವರೂಥವಾಜಿಗಳಲ್ಲದೆಯುಂ |

ವೃ|| ಎಡಗಾಲೊಳ್ಪೊಂದೊಡರ್ತರ್ಕ್ಕೆರೆ ಝಣಝಣನಿಕ್ವಾಣಮುದ್ಘೋರೀರುಕಂನೇ
ರ್ಪಡೆ ಚೆಲ್ವಂ ಬೀರೆ ಗೇಣಂ ತಳೆದು ಮಿಸುಗೆ ಕೇದಟ್ಟೆ ಪೊಂಗುಪ್ಪಸಂದೊ||
ಟ್ಟೊಡಸಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಲಾ |
ಳ್ಗಡಣಂ ಕೈಕೊಂಡು ನಾನಾಯುಧಮನಮಮ ಬಂದತ್ತದಂ ಪೇಳ್ವೆನೇನಂ||

ವ|| ಇಂತನಂತಸಂಭ್ರಮದಿಂ ನೆಲನೆಲ್ಲಮನಳುರ್ಕೆಗೊಂಡು ಘುಳುಘುಳಿಸಿ ನೆರೆದು ತೆಕ್ಕನೆ ತೀವಿದಚತುರಂಗಬಲಮಂ ಕಂಡು ಕಡುಸಂತಸಂಮಿಕ್ಕು

ಕಂ|| ವಂದಿಗಳುಗ್ಗಡಿಸುತ್ತಿರೆ |
ದುಂದುಭಿ ಮಿಗೆ ಮೊಳಗೆ ಬಹಳಕಹಳಾನಾದಂ ||
ಮುಂದೆನೆಯೊಳೆಸೆಯೆ ನೃಪನೊಲ |
ವಿಂದಡರ್ದಂ ಪವನಗಮನನಾಮದಹಯಮುಂ || ೭೧

ವ|| ಅಂತೇರಿದಾಗಳಾಮಿತವಚನಕುಮಾರಂ ಹರಿಣಗತಿಯೆಂಬೆರಡನೆಯ ತುರಂಗಮನಾರೋಹಿಸಿ ತನ್ನೊಡನೆ ಸಡಗರಂ ಮಿಕ್ಕು ಸುರತುರಂಗಮನಡರ್ದ ಜಯಂತನೊಡನೆ ಧನದಾಶ್ವಮನಡರ್ದುತಳರ್ವನಳಕೂಬರನಂತೆಸೆದು ಒರೆ ನಿಜ ಮಕುಟರುಚಿರರುಚಿ ರವಿಕಿರಣಮಂ ಪಳಂಚಲೆಯೆ ತೊಡೆದಮೃಗಮದಕರ್ದ ಮದ ಕಡುಗಂಪಿಂಗೆ ಪಿಂಗದೆ ಭೃಂಗಾಳಿ ಕವಿತರೆ ಪುಷ್ಕರಪುಂಡರೀಕಮಿಲ್ಲೆಂಬಬಗೆಯಾನಿಲ್ಲೆನಿಪಂತೆ ಸಲ್ಲಲಿತಮುಕ್ತಾಮಯಾತಪತ್ರಂಗಳ್ಮೇಲೆ ಲೀಲೆಯಿಂ ಬರೆ ಗಗನಲಕ್ಷ್ಮಿಯ ಪಯೋಧರಮಂ ಪಸುಂಕಿದಚೀನಾಂಬರದ ಸೆರಂಗಿನಂತೆ ತೊಳತೊಳಪಪಳಯಿಗೆಯ ಪಟಂಗಳ್ಮಿಳಿರುತ್ತಿರೆ ವಿಭವರಮೆಯ ಕಟಾಕ್ಷಮೆಂಬಂತೆ ಭಾಮಿನೀಚಾಲಿತಚಾರುಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆದತರಂಗದಂತೆ ಸೂಸುವಸೀಗುರಿ ದೇಸಿವಡೆಯೆ ಪಿರಿದುಸಂಭ್ರಮದಿಂ ಪುರವೀಧಿಯೊಳ್ಬಪ್ಪಾಗಳ್

ವೃ|| ಮಣಿಮಯಭೂಷಣಾಂಶು ಮಕುಟದ್ಯುತಿ ಹಾರಮರೀಚಿ ವಜ್ರಕಂ |
ಕಣರುಚಿ ಮೆಯ್ಯ ನುಣ್ಬೆಳಗು ಕಯ್ಯಸಿತಾಸಿಯ ಕಾಂತಿ ಪೊನ್ನಪೇ ||
ರಣೆಯಪೊಗರ್ತ್ತಳತ್ತಳಿಸೆ ದಿವ್ಯಹಯಂಗಳನೇರಿ ಬಂದುದಂ |
ದಣಿಕೆಗಳುಂಬವಾಗಿ ವಿಭವಂ ಮಿಗೆ ರಾಜಕುಮಾರಸಂಕುಳಂ || ೭೩

ಕಂ|| ಆರಾಜಸುತರ ನಡುವೆ ಮ |
ಹಾರಾಜಸುತಂ ಸಿತಾಶ್ವದಗ್ರದೊಳೆಸೆದಂ ||
ಶಾರದನೀರದದಗ್ರದೊ |
ಳಾರಾಜಂ ಭಗಣಪರಿವೃತಂ ರಂಜಿಪವೋಲ್ ||

ಗಗನದೊಳೆ ನೋಡಲೆಂದು |
ಜ್ಜುಗಿಸಿದಖಚರಿಯರ ಕಣ್ಗೆ ಬಲಧೂಳಿ ಕರಂ ||
ಪುಗದಂತೆ ಬೀಸಿದಪುದೆನೆ |
ಮಿಗೆ ಮಿಳಿರ್ವಪಟಂಗಳಿಂದೆ ಪಳಯಿಗೆ ಮೆರೆಗುಂ || ೭೪

ವ|| ಅಂತುಮಲ್ಲದೆಯುಂ

| ಕೆಂಬಳಯಿಗೆ ಲಂಬಿಸೆ ತ |
ಳ್ತಂಬುಜಸಖಬಿಂಬಮುಕ್ಕಿಗಿಂಬಾದುದು ಕೆಂ ||
ಕಂಬಡೆದೆಸೆವಂಬುದದಿಂ |
ಚುಂಬಿತಮಾಯ್ತೆಂಬತೆರದೊಳಂಬರತಳದೊಳ್ || ೭೫

ಸ್ರ|| ವಿತತಾತೋದ್ಯಪ್ರಣಾದಂ ರಥನಿಕರಲಸಚ್ಚೀತ್ಕೃತಿಧ್ವಾನಮುಜ್ಜ್ವಲಂ |
ಭಿತರಾಬದ್ಧಾಜಿಹೇಷಾರಸಿತಮಿಭಘಟಾಬೃಂಹಿತೋದ್ಯದ್ರವಂ ವಿ ||
ಶ್ರುತವಂದಿವ್ರಾತಕೋಲಾಹಲರುತಿ ಸುಭಟಸ್ಫಾರಹುಂಕಾರರಾವಂ |
ಶ್ರಿತಜಂಘಾಕ್ಕೇತುಘಂಟಾರಣಿತಮಖಿಳದಿಗ್ದೇಶಮಂ ತೀವಿತಾಗಳ್ || ೭೬

ಬಲಭಾರಕ್ಕೆ ಧರಾತಳಂ ಕುಸಿಯೆ ಸೇನಾಧೂಳಿಯುಂ ಮಿಕ್ಕು ಬಾಂ |
ಬೊಳೆ ಪಂಕಾವಿಳಮಾಗೆ ಭೇರಿಯ ಗಭೀರಧ್ವಾನದಿಂ ದಿಗ್ಗಜಾ ||
ವಳಿ ಕಂಪಂಗೊಳೆ ದೀರ್ಘಕೇತನಪಟಂ ಸಂದೋಹದಿಂದೊಂದಿ ಮಂ |
ಜುಳಸೂರ್ಯಾತಪಮಿಲ್ಲಮಾಗೆ ಪದೆದೇಳ್ತಂದಂ ನರೇಂದ್ರಾತ್ಮಜಂ || ೭೭

ವ|| ಅಂತೇಳ್ತಪ್ಪಾಗಳ್ಕಲಿಗಳ್ಕರತಳದಿನೊರೆಗಳೆದು ಕುರುಳ್ಚುವಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ಸಂಚಳಿಸಿದಂತೆಯುಂ, ಪಡಿತಳಿಸಿ ನಡೆಗೊಳ್ವಸಿಂದೂರಾರುಣಿತಗಂಧಸಿಂಧುರಸಂದೋಹದಿಂ ಸಂಧ್ಯಾರುಣಿತಪಕ್ಷಿಮಾಚಲಂ ಪಲವುರೂಪಾಂತು ನಡೆಗೊಳ್ವಂತೆಯುಂ, ಪಕ್ಕಜಲ್ಲಿಗಳಿಂ ಪರಿಶೋಭಿಪಡೆದು ಪರಿವತುರಂಗಸಂಘದಿಂ ನೊರೆಮಾಲೆವೆರಸಿ ತರಂಗೊಂಡು ತರಂಗಸಂಘಾತಂ ಬಳಜಳಧಿಯೊಳ್ನೆಗೆದಂತೆಯುಂ, ಮೇಲೆ ನೆಗೆದೊತ್ತರಿಸಿ ನಡೆವಮುತ್ತಿನ ಸತ್ತಿಗೆಗಳಿಂ ಚಂದ್ರಭುವನಮುವತರಿಸಿದಂತೆಯುಂ, ಸಾಲ್ವಿಡಿದು ಸೂಸುವಧವಳ ಚಾಮರಂಗಳಿಂದಂ ಜೆವಿಂಡನೆಬ್ಬಿರ್ದಂತೆಯುಂ, ಭೋಂಕನೆ ಸೂಂಕಿ ಬರ್ಪರ್ವಮಣಿಮಯಮಾದತೇರ್ಗಳಿಂದಿಂದ್ರಚಾಪಂಬೆತ್ತನೀರತೇರ್ಗಳೆಳೆಗಿಳಿದು ತಳರ್ವಂತೆಯುಂ, ಕವಿತಪ್ಪರ್ಕತಿನಖೇಟಕಂಗಳಿಂ ಕಮಠಕೋಟಿ ಕಣ್ಗೆ ಗೋಚರಿಸಿದಂತೆಯುಂ, ಮಕುಟವರ್ಧನರಮಣಿಮಕುಟಂಗಳಿಂ ಮಾತರ್ಾಂಡಮಂಡಳಂಗಳಳುಕ್ಕಿರ್ಗೊಂಡುದಿಸಿದಂತೆ

ಯುಂ, ನೆರೆನೆರೆದು ತರಂಬೆತ್ತು ಧರ್ಮ್ಯಹರ್ಮ್ಯಂಗಳೊಳ್ಕುರ್ಮ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮುಂ ಕರತಳಾಸ್ಫಾಲನಂಗೈದು ಮಡಸನ್ನೆಯುಂ ಮನದೊಳ್ನೆನೆವಲ್ಲಿ ಮುನ್ನಮೆ

ವೃ॥ ಕಂತುಕದಂತೆ ಪುಷ್ಕರತಳಕ್ಕೊಗೆದೂರ್ಮಿಕೆಯಂತೆ ಪಾಯ್ದು ಮಾ |
ನಂತಿರೆ ಮಾರಿಲಂಘಿಸಿ ಲಸನ್ಮೃಗದಂತಿರೆ ದಾಂಟಿ ಮಿಂಚಿದೆಂ ||
ಬಂತೆ ನಭೋಂತದೊಳ್ಪೊಳೆದು ಸುಟ್ಟುರೆಯಂತಿರೆ ಸುತ್ತಿ ಪತ್ತಿ ನಾ |
ಗಾಂತಕನಂತೆ ಪಾರಿದುದು ತುಂಗತುರಂಗವಿಳಾಧಿನಾಥನಾ || ೭೮

ಕಂ॥ ಆವಾಜಿಯ ಹೇಷಾರವ |
ಮಾವಾಸವನಶ್ವಕರ್ಣಮುಂ ಪುಗೆ ಭಯಮುತ್ತಿ ||
ತ್ತೀವೇಳ್ಪಿನ್ನುಮದನೇ |
ಭಾವಿಸುತುಚ್ಚೈಶ್ರವಸ್ತ್ವಮಾಳ್ದುದು ತೋರ್ಕ್ಕಂ || ೭೯

ವ॥ ಅಂತುಮಲ್ಲದೆಯುಂ

ಕಂ॥ ತುರಗಖುರಖುರಸಮುತ್ಥಿತ |
ಧರಾರಜಂ ನೆಗೆದು ತೀವೆ ನಿಜಲೋಕದೊಳಾ ||
ಸರಸಿಜಸಂಭವನದರೊ |
ಳ್ಪೊರೆದಂದಿಂದಲ್ತೆ ತಾಂ ರಜೋನ್ವಿತನಾದಂ || ೮೦

ನಗರಿಪುಗೆ ಚಿಂತೆ ಸಂತಸ |
ಮೊಗೆದುದು ರವಿ ರಾಗವಳಿದನಸುರಾರಿಯು ಸಿ ||
ಡ್ರೆಗೆ ಮುಳಿದಳ್ರಮೆ ಕವಿ ಮಿಗೆ |
ನಗುತಿರ್ದ್ದಂ ಚಿಂತೆಗೆಯ್ದನಮರಾಚಾರ್ಯಂ || ೮೧

ವ॥ ಆಗಳ್

ವೃ॥ ಪರಿಯಿಪ ನೆಟ್ಟನಟ್ಟುವಿದಿರೇರಿಪ ಪಾರಿಪ ಕಿಳ್ತುದಾಂಟಿಪಿ |
ಬ್ಬರಿಯೊಳೆ ಸುತ್ತಿಪಾಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯಲು ||
ಪ್ಪರಿಪ ಬೆಡಂಗಿನಿಂನಡಯಿಪಂಗಮುಲುಂಗದೆ ಪಂಚಧಾರೆಯೊ |
ಳ್ಪರಿಣತಿದೋಪ್ಪೆವಾಹಕಿತನಂ ಬಗೆಗೊಂಡುದು ಮಂತ್ರಿಪುತ್ರನಾ || ೮೨

ವ|| ಇಂತತುಳವಿಳಾಸಂಬಡೆದಶ್ವಾರೋಹಣಪರಿಣತಿಯಿಂ ಪರಿಶೋಭಿವಡೆದಾಮಿತವಚನಂಬೆರಸು ರಾಜಶೇಖರರಾಜೇಂದ್ರಂ ರಾಜವೀಧಿಯಂ ದಾಂಟಿ ಪುರಬಹಿರ್ದೇಶದ ವೈಹಾಳಿಯಬಯಲ್ಗೆ ಸಸಂಭ್ರಮಂ ಬರೆ ತದಾದೇಶಮಂ ಪಡೆದು

ವೃ|| ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊ |
ಟ್ಟುಲಿದು ವಿನೋದಯುದ್ಧಮನಮರ್ಚ್ಚಲೊಡರ್ಚ್ಚೆ ಹಯಂಗಳೊಳ್ಹಯಾ ||
ವಳಿ ಪೊಸತೇರ್ಗಳೊಳ್ಕುಪತೇರ್ಗಳಿಭಂಗಳೊಳೊಲ್ದಿಭಂಗಳು |
ಜ್ಜ್ವಲಭಟರಾಜಿಯೊಳ್ಸುಭಟರಾಜಿ ಪಳಂಚಿದುದೇನನೆಂದಪೆಂ || ೮೩

ವ|| ಅಂತುಭಯವಾರ್ಧಿಗಳಿದಿರ್ಚ್ಚಿ ಪಳಂಚುವಂತೆ ಪಳಂಚಿ ಮಿಸುನಿವೆಸದಪುಟ್ಟಿಗೋಲ್ಗಳಂ ಪಿಡಿದು ಜಡಿದೊಟ್ಟಜೆಯಿಂದಿಟ್ಟಣಿಸಿನಿಂದು

ವೃ|| ತಿವಿವ ಮರಳ್ದು ವಚ್ಚರಿಪ ಗರ್ವಿಪ ಬೊಬ್ಬಿರಿವಾರ್ವ ಸಾರ್ವ ಮೇ |
ಣ್ಕವಿವ ಕಡಂಗುವಿಟ್ಟಣಿಪ ಸುತ್ತುವ ಪತ್ತುವ ನಿಲ್ವ ಗೆಲ್ವ ಪೊ ||
ಣ್ಮುವ ಪುಟವೇಳ್ವ ಪಾಯ್ವ ಮಿಗೆಪೊಯ್ವ ತೊಡಂಕುವ ತೋಟಿಗೈವ ಕೂಂ |
ಕುವ ನೆರೆನೂಂಕುವೇಳ್ಗೆಯಬಲಂ ಬಗೆಗೊಂಡುದು ತತ್ಕುಮಾರರಾ || ೮೪

ವ|| ಮತ್ತಮಾಸೇನಾಚಕ್ರದೊಳಳುರ್ಕೆವೆತ್ತು

ಕಂ|| ಸುಳಿಸುಳಿದಶ್ವಮನೇರುತೆ |
ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚ್ಚುತೆ ಪೆರಕಾ ||
ಲ್ಗೊಳಿಸಿ ಪಡಂಮೆಟ್ಟುತ್ತ |
ವ್ವಳಿಸುತ್ತೆ ಪಳಂಚಿದತ್ತುರಂಗಿಗಳದರೊಳ್ || ೮೫

ವ|| ಇಂತು ಪಳಂಚುವ ತುರಂಗಿಗಳಂ ಕಂಡು ಸಡಗರಂ ಮಿಕ್ಕು

ಕಂ|| ಅಣೆದಲೆದು ನೂಂಕಿ ಗರ್ಜಿಸು |
ತಣಿಯರಮೆಣೆಗೊಂಡಿಭಂಗಳಂ ಭರಿಕೈಗ ||
ಳ್ಪೆಣೆದಿರೆ ಕಾದಿಸಿ ತಾಮುಂ ||
ಪೊಣರ್ದರಿಭಾರೋಹಕರ್ವಿಳಾಸದಿನಾಗಳ್ || ೮೬

ವ|| ಇಂತು ಪೊಣರ್ವ್ವಿರ್ಭಾರೋಹಕರ ಕಡುಪಂ ನೋಡಿ ನೀಡುಂಕಡಂಗಿ

ಕಂ|| ಇದಿರೊಳ್ಪರಿಯಿಸಿ ರಥಮಂ |
ತುದಿಯೊಳ್ಕಿಳಿರ್ದಾಡೆ ಕೇತನಂ ಪೂಸರದಿಂ ||
ಪದೆದೆಚ್ಚಾಡಿದರದಟಿಂ |
ದದರ ಪರಾಗಂ ನಿಜಾಂಗದೊಳ್ಪೊರೆವಿನೆಗಂ || ೮೭

ವ|| ಆರಥಿಕಾಟೋಪಮನುಭಯಪದಾತಿ ಕಂಡು ಕೈಗಣ್ಮಿಸಿಂದು

ವೃ|| ಅಲರ್ಗಳ ಚಂಡು ಕುಂಕುಮದ ಸೀರ್ಗ್ಗಳ ಕುಪ್ಪಿಗೆ ಚಂದನಚ್ಛಟಾ |
ಕಲಿತಸರೋಜಕೋರಕಮುದಾತ್ತಮೃಗೋದ್ಭವ ಚೂರ್ಣಪೂರ್ಣಮು ||
ಜ್ಜ್ವಲಿತರಸಾಲಪಲ್ಲವದ ಪೊಟ್ಟಳಮೆಂಬಿವರಿಂದಿದಿರ್ಚ್ಚಿ ತ |
ದ್ಬಲಮೆರಡಿಟ್ಟು ತಳ್ತಡಸಿ ಬೊಬ್ಬಿರಿದಾಡಿದುದೇನನೆಂದಪೆಂ || ೮೮

ವ|| ಇಂತು ವಿನೋದಯುದ್ಧಮಂ ಚತುರತೆಯಿಂ ರಚಿಸಿ ಚಾತುರಂಗಂ ಪುರಾಭಿಮುಖಮಾಗಿ ತಿರುಗಿ ಸರಭಸಂ ಬರೆವರೆ

ವೃ|| ಕರಿದಾನಾಸಾರದಿಂ ತಳ್ತಿಳೆ ಬಳಭರದಿಂ ತಾಂ ಬೆಮರ್ತ್ತಂತೆ ತೋರು |
ತ್ತಿರೆ ವಾಜಿವ್ರಾತ ವಕ್ತ್ರಚ್ಯುತಸಿತವಿಸರತ್ಫೇನಪಿಂಡೌಘಮೊಕ್ಕಂ ||
ತಿರೆ ಭೇರೀಧ್ವಾನದಿಂದಂ ಭಗಣಮಿನನಡಂಗಿರ್ದ್ದವೋಲೊಪ್ಪುತಿರೆ ಕೇತೂ |
ತ್ಕರಭೀತಂ ಧೂಳಿಜಾಳಂ ಕವಿಯೆ ಜವದಿನೈತಂದುದಾರಾಜಸೈನ್ಯಂ || ೮೯

ಖರಖುರಘಾತಜಾತಧರಣೀತಳರೇಣುವಜಾಂಡಪಂಕಜಾ |
ತರಜಮಿದೆಂಬಿನಂ ನೆಗೆದು ತೀವಿರೆ ವೇಗಕೆ ಸೋಲ್ತುಗೊಂಟಿನೊ ||
ಳ್ಮರುತನಡಂಗೆ ಮೈಗರೆಯೆ ಪುಲ್ಲೆ ವನಾಂತದೊಳಿಂದ್ರನಶ್ವಮು |
ಳ್ಕಿರೆ ಸುರಲೋಕದೊಳ್ಕಿಳಿರ್ದದೇಂ ಪರಿದತ್ತೊ ತುರಂಗಮವ್ರಯಂ || ೯೦

ವ|| ಮತ್ತಂ

ವೃ|| ಸುಳಿಸುಳಿದೊತ್ತಿ ಪತ್ತಿ ತಪೆ ಸುತ್ತಿ ಕಡಂಗಿ ಬೆಡಂಗುವೆತ್ತು ಸಂ |
ಚಳಿಸಿ ನಭಕ್ಕೆ ಮಾರಿ ಮಿಗೆ ಪಾರಿ ಚಮತ್ಕೃತಿವೀರಿ ತೋರಿ ತ ||
ನ್ನಳವನಿಳಾತಕ್ಕೆ ಕಿಳಿರ್ದುಪ್ಪರಿಸುತ್ತಿರೆ ಮಾಂಟಿ ದಾಂಟಿ ಕಂ |
ಟಳಿಸಿ ಪೊದಳ್ದು ಪಾಯ್ದು ಪರಿಯಿಟ್ಟುದು ವಾಯುರಯಂ ಹಯವ್ರಯಂ||

ವ|| ಇಂತನಂತಸಂಭ್ರಮಂ ಮಿಗೆ ಜವಗಜವಮನತಿಕ್ರಮಿಸಿ ಪರಿವಾರರಾಜವಾಜಿಗಳನೋಜೆ ಮಿಗೆ ರಾಜವೀಧಿಯೊಳಾಕುಮಾರರಿರ್ವ್ವರ್ವಿವಿಧತರಗತಿ ಚತುರತೆಯಿನೇರುತ್ತುಂ ಬರ್ಪ್ಪಾಗಳ್

ವೃ|| ಕನಕಸ್ಫಾಟಿಕರತ್ನಹರ್ಮ್ಯಚಯಮಂ ಬಂದೇರಿ ನಿಂದಲ್ಲಿ ಕಾ |
ಮಿನಿಯರ್ಸ್ವರ್ಲ್ಪಿಡಿದೀಕ್ಷಿಸುತ್ತಿರೆ ತದಾಸ್ಯಶ್ರೇಣಿಯುಂ ದೀರ್ಘಲೋ ||
ಚನದಿವ್ಯದ್ಯುತಿಯುಂ ಪಳಂಚಲೆದು ದುದ್ಯದ್ದರ್ಪಣೇಂದೀವರಾ |
ಳಿನಿಯುಕ್ತೋನ್ನತಚಾರುತೋರಣಮನಾವೀಧೀಪುರೋಭಾಗದೊಳ್ || ೯೨

ವ|| ಆವಿಳಾಸಿನಿಯರಲ್ಲದೆಯುಮಲ್ಲಿ ಕೆಲಂಬರಾನರೇಂದ್ರನನಭೀಕ್ಷಿಸಲೆಂದು

ವೃ|| ತೊಡವೆಳಗಿಂದ್ರಚಾಪಲತೆ ಸೋರ್ಮ್ಮುಡಿ ಕಾರ್ಮ್ಮುಗಿಲುರ್ವ್ವಿ ಪಾಯ್ವಕ
ಣ್ಗಡೆ ಕುಡಿಮಿಂಚು ಮಂಜುಮಣಿನೂಪುರಸಿಂಜಿತಮುಬ್ಬರಾವಮೊ ||
ಗ್ಗೊರ್ಡೆಯುಡೆ ಮೇಲೆ ಸೂಸುವಸುಲಾಜೆಗಳೊಳ್ಸರಿಯಾಗೆ ಬಂದು ಕಾ |
ರೊಡತಿಯರಿಲ್ಲಿ ನಿಂದರೆನೆ ಸೌಧನಗಾಗ್ರದೆ ಪೆಣ್ಗಳೊಪ್ಪಿದರ್ || ೯೩

ವ|| ಅಂತುಮಲ್ಲದೆಯುಂ

ವೃ|| ಎಳಲತೆ ತೋಳ್ಗಳಿಂದುಟಿಯೆ ಚೆಂದಳಿರೊಳ್ತೊಡೆ ಬಾಳೆ ನಾಭಿ ತಂ |
ಗೊಳಮುಲಘುಸ್ತನಂ ಕೃತಕಶೈಲಮಪಾಂಗಮರೀಚಿ ಪುಷ್ಪಸಂ ||
ಕುಳಮಳಕಂ ಮದಾಳಿಕಳಭಂ ಮೊಗಮಂಬುಜಮಾಗೆ ಬಂದಕೋ |
ಮಳೆಯರಿಳೇಶಚಂದ್ರಮನನಾವನಲಕ್ಷ್ಮಿಯರಂತೆ ನೋಡಿದರ್ || ೯೪

ಕ್ಷಿತಿಪತಿ ರಾಜಶೇಖರಶಿವಂ ನವಮೌಕ್ತಿಕಭೂಷಣಾಂಶುಭೂ |
ಷಿತತನು ಮುಂದೆ ಮುಂಬರಿವ ತುಂಗತುರಂಗಮನೇರಿ ಬರ್ಪ್ಪವಂ ||
ಮಿತವಚನಂ ಮೃಗಾಕ್ಷಿ ನಡೆನೋಡಿವನಲ್ತೆ ನವೀನಭೂಷಣ |
ಪ್ರತತಿಯನಾಂತು ನರ್ತಿಪಸಿತಾಶ್ವಮನೇರುತೆ ಪಿಂದೆ ಬರ್ಪ್ಪವಂ || ೯೫

ವ|| ಎಂದಲ್ಲಿ ವಿದಗ್ಧೆಯುಮುಗ್ಧೆಯ್ಗೆ ತೋರಿ ನುಡಿಯುತ್ತಿರೆ ಮಂತ್ರಲಕ್ಷ್ಮಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆ ಹರಪ್ರೇರಣೆಯಿಂ ತಿರುಕೊಳವಿನಾಚಿಯೆಂಬಶಿವಭಕ್ತೆಯಣುಗಂ ಶಂಕರನೆಂಬ

ಪೆಸರ ಪಂಚವರ್ಷದಕುಮಾರಂ ನಿಜಜನನಿ ನೀರ್ಗೆಪೋದಪೊೞ್ತಿನೊಳಾಕಳಕಳಮಂ ಕೇಳ್ದು ನೋಡಲೆಳಸಿ ಸಡಗರಂ ಮಿಗೆ ನಡುವೀಧಿಗೆ ತಡೆಯದೆ ಬಂದು ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವಪಡೆಯ ತಡೆಗಾಲ್ಪೊಡೆಯೆ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು ತಾಯಂ ಕರೆಕರೆದು ಬಾಯಂ ಬಿಟ್ಟಳಲ್ದು ಕಯ್ಯೂರಿ ಮೆಲ್ಲನೇಳ್ವನಿತರಲ್ಲಿ

ವೃ|| ಶಿವಶಿವಪೇಳ್ವೆನೇನನವನೀಪತಿ ತನ್ನ ತುರಂಗಮಂ ಮಹಾ |
ಜವದೊಳೆ ಕಂಡು ದಾಂಟಿಸಿ ಕೆಲಂದೆಗೆಯೆಂಬನಿತಕ್ಕೆ ಮುಂಚಿ ಮು ||
ನ್ನವೆ ಸಚಿವಾಶ್ವಮೈದೆ ಕೊಳಗಿಂ ತಲೆ ಖಂಡಿಸಿ ಪಾರೆ ಮೆಟ್ಟಿತಂ |
ದವಿರಳರಕ್ತಧಾರೆ ಪೊರಸೂಸಿರೆ ಬಾಲನ ಕಂಠನಾಳಮಂ || ೯೬

ವ|| ಅಂತು ಪರಿದಾರಕ್ತರಸದೊಳಳ್ದು ಬಿಳ್ದಾಶಿರಃಪುಂಡರೀಕಮಂ ಕಂಡು ಸಚಿವಸುತನುಂ ತಾನುಂ ಮನಂನೊಂದು ಮತಿಯುಡುಗಿ ಮರುಗಿ ಶಿವಶಿವಾ ಶಿವಭಕ್ತಶಿಶುವಧಮಾದುದಿದಂ ಶಿವಂ ಬಲ್ಲನೆಂದುಮ್ಮಳಿಸುತಿನಿಸಾನುಂಬೇಗಮಿರ್ದ್ದು

ಕಂ|| ಇಂಸಿದಕೆ ಚಿಂತೆಗೆಯ್ದೊಡೆ |
ಪಂನತಿಕೆಗೆ ಬನ್ನವಲ್ತೆ ಫಡಫಡ ಫಣಿಭೂ ||
ಷಂ ನೆಟ್ಟನೆ ಮರ್ಚ್ಚಿರೆ ತೋ |
ರ್ಪಂನಿಜಸಾಹಸಮನಿದಕೆ ತಕ್ಕುಜ್ಜುಗಮಂ || ೯೭

ವ|| ಎಂದು ನಿಶ್ಚೈಸಿ ಮನಸ್ತಾನಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆಪೊಯ್ದು ನಡೆತಂದು ರಾಜಾಲಯದ್ವಾರೋಪಾಂತದೊಳ್ವಾಜಿಗಳನಿಳಿದು ದಂಡನಾಥಮಂಡಳಿಕಾದಿಯುಂ ಯಥಾಕ್ರಮಂ ಬೀಳ್ಕೊಟ್ಟು ನಿಜಗೃಹಂಗಳಂ ಪೊಕ್ಕಿರ್ದ್ದರನ್ನೆವರಮಿತ್ತಲ್ನೆರೆದಪುರಜನಮಾರುಂಡಮಂ ಮುಂಡಮಂ ಕಂಡು

ಕಂ|| ಅಕಟಕಟದಾರುಣಗನೀ |
ಸುಕುಮಾರಂ ಮಡಿದನಶ್ವಖುರಹತಿಯಿಂ ಬಾ ||
ಲಕವಧಮಿದನರಿದೊಡೆ ತಾ |
ನಕುಟಿಲಮತಿ ಚೋಳನೃಪತಿಯೇಂ ಸೈರಿಪನೇ || ೯೮

ಶರಣಜನವನಜವನದಿನ |
ಕರನಾಸತ್ಯೇಂದ್ರಚೋಳಧರಣೀಶ್ವರನೀ ||
ಶ್ವರಭಕ್ತವಧವನಿದನಾ |
ದ್ಘೋರಕೊಳಿಸಿದರೆಂದು ಮುಳಿಯದಿರ್ಪನೆ ಬಳಿಯಂ || ೯೯
ಮನುಚೋಳಂ ಮನ್ನಿಸಿದನೆ |
ತನಯನನಪರಾಧಯುಕ್ತನಂ ಪಿತನೆಂದೇಂ ||
ನೆನೆದನೆ ಚಂಡೇಶಂ ತ |
ನ್ನನೆ ಬಗೆದನೆ ಬಗೆಯೊಳಾಪಗಲ್ತೋಳನೃಪಂ || ೧೦೦
ಅದರಿಂದೇನಪ್ಪುದೊ ಬ |
ಪ್ಪುದನೀಶಂ ಬಲ್ಲನೆಂದು ಮರುಗುತ್ತಿರೆ ತ ||
ಳ್ವದೆ ಘುಟಮನಿಳಿಪಿ ಕಾಣದೆ |
ಸುದತಿ ನಿಜಾತ್ಮಜನನರಸಿ ತೊಳಲುತ್ತಿರ್ದಳ್ ೧೦೧

ವ|| ಅಂತುತೊಳಲ್ದು ಕಾಣದೆ ತಲ್ಲಣಿಸಿ ತಳವೆಳಗಾಗಿ

ವೃ|| ಎಲೆಸುಕುಮಾರ ಶಂಕರಕುಮಾರಕ ಚಾರ ಮದೀಯಲೋಚನೋ |
ತ್ಪಲರಜನೀಶ ನಿನ್ನಮೊಗದಾವರೆಯಂ ಮಿಗೆ ತೋರದೆತ್ತ ಪೋ ||
ದೆ ಲಲಿತಮಂದಹಾಸ ಲಲಿತಸ್ಖಲದಕ್ಷರವಾಣಿ ಗೆಜ್ಜೆ ಮೆ |
ಲ್ಲುಲಿಗುಡೆ ಬಂದು ಬಳ್ಳಿರಿಯನಪ್ಪದೆ ತಳ್ವಿದೆಯೆಲ್ಕೆ ತನೂಭವಾ || ೧೦೨

ವ|| ಎಂದು ಸಿಡುಸರದಿಂ ಕೂಗಿ ಕರೆಕರೆದು ಕಾಣದೆ ಕರಕರಿಸಿ ರಾಜಪುತ್ರನ ವಿಹರಣಮಂ ನೋಡಲೆಳಸಿ ರಾಜವೀಥಿಗೆ ಬಂದನೆಂದು ಬಗೆದು ಬಗೆಗೆಟ್ಟು ಬಾಯ್ವಿಟ್ಟು ಜನನಿ ಜವದಿನೇಳ್ತಂದಲ್ಲಿಯುಮರಸಿ ಕಾಣದೆ

ಕಂ|| ಕರಿಗಳ ಕಾಲ್ಗೊಳಗಾದನೊ |
ವರೂಥಚಕ್ರಕ್ಕೆ ಸಿಲ್ಕಿದನೊ ಹಯಚಂಚ ||
ತ್ಖುರಹತಿಯಿಂದಳಿದನೊ ಶಂ |
ಕರನಕಟಕಟೆಂದು ಬಗೆದು ಬಾಯ್ವಿಡುತಿರ್ದಳ್ || ೧೦೩

ತನುಭವನೆಲ್ಲಿದನೆಲ್ಲಿದ |
ನಿನಿವಾತಿನ ನೀರನೆಲ್ಲಿದಂ ಮೆಲ್ಪುಗೆಯಿಂ ||
ಪಿನ ಸೊಬಗನೆಲ್ಲಿದಂ ಚೆ |
ಲ್ವಿನ ಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ || ೧೦೪

ವ|| ಎಂದು ಪಲುಂಬಿ ಪಲವಾಡಿ ಬಪ್ಪರ್ಗಳಾಪುರಜನಂ ಕಂಡೀಮಡಿದ ಶಿಶುವಿವಳದೆಂದು ತಿಳಿದಳವಳಿದು ಪಳಯಿಸುವಳಂ ಕರೆದು ನೆರೆದಜನದೊಳಪುಗಿಸಿ ನರೇಂದ್ರತುರಗಖುರಹತಿಯಿಂ ಮಡಿದನೆಂದು ತೊಟ್ಟನೆ ತೋರಲೊಡನಾರುಂಡಮಂ ಮುಂಡಮಂ ಕಂಡಡವಿಗಿಚ್ಚುರ್ಗೊಂಡಪುಲ್ಲೆಯಂತೆ ಹರಣಂ ಹಂಮ್ಮೈಸಿ ಪರ್ದ್ದೆರ ಗಿದುರಗಿಯಂತೆ ಮಿಡುಮಿಡನೆ ಮಿಡುಕಿ ಕಡಿವಡೆದೆಳವಳ್ಳಿಯಂತೆ ಕೊರಗಿ ಪೊಸೆ ದಿಟ್ಟ ಪೂಮಾಲೆಯಂತೆ ಕಂದಿ ಕುಂದಿ ಮಂಸ್ಯೆಸಿದಳಲಿಂ ಮುಂದುಗೆಟ್ಟು ಕೆಟ್ಟೆಂ ಕೆಟ್ಟೆನೆಂದು ಬಸಿರಂಪೊಸೆದು ದೆಸೆದೆಸೆಗೆ ಬಾಯಂಬಟ್ಟು ಮೊರೆಯಿಟ್ಟು ಮರುಗಿ

ವೃ|| ಎಳಗಿಳಿಯಂ ಕೊರಲ್ಮುರಿದು ಮೋದಿದರಾರ್ಮ್ಮರಿಯಂಚೆಯಂ ಭಯಂ |
ಗೊಳಿಸುತೆರಂಕೆಯಂಪರಿದು ಪೊಯ್ದವರಾರ್ಮ್ಮಗಶಾಬಮುಂ ಕರಂ ||
ಮುಳಿದು ಶಿರೋಧಿಯಂ ಕೆಡೆಯುಲೆಚ್ಚವರಾರ್ಬ್ಬಿಸನಾಳಕಾಂಡಕೋ |
ಮಳತರಕಂಠಮಂ ಕಡಿದುರುಳ್ಚಿದರಾರ್ಸ್ಸುಕುಮಾರಶೇಖರಾ || ೧೦೫

ವ|| ಎಂದಾಕಬಂಧಮನೆತ್ತಿ ತೊಡೆಯೊಳಿಟ್ಟಾರುಂಡಮಂ ಕರಯುಗದೊ ಳ್ಪಿಡಿದಶ್ರುಮಿಶ್ರಕಟಾಕ್ಷದಿನೀಕ್ಷಿಸಿ ಮೊಗದೊಳ್ಮಸುಂಕಿದಧೂಳಿಯಂ ಮೇಲು ದಿನೊಳೊಯ್ಯನೊರಸಿ ಕೆಲಸರಿದಮೂಂಗಾಯ್ಗಳನೋಸರಿಸಿದರಳೆಲೆಯಂ ಸ್ಥೈತು ಮಾಡಿ ಗಲ್ಲಮಂ ಪಿಡಿದು ಮೆಲ್ಲನಲುಗಿ ಮುದ್ದಿಸಿ ಮುಂಡಾಡಿ ನೋಡಿ ಮೇರೆದ ಪ್ಪಿದಳಲಂ ಸ್ಯೆರಿಸಲಾರದೆ

ಕಂ|| ಹಾಮಗನೆ ಹಾಮನೋಜ್ಞನೆ |
ಹಾಮುದ್ದುಗ ಹಾಮದೇಭಗತಿಮಂಜುಳ ಹಾ ||
ಹಾಮಧುರವಾಣಿ ಹಾಮ |
ತ್ಪ್ರೇಮಾಸ್ಪದ ಹಾಮದೀಶವಂಶಲಲಾಮಾ || ೧೦೬

ಎಲ್ಲಿಯುಹಯುಮೆಲ್ಲಿಯುನೃಪ |
ನೆಲ್ಲಿಯುವೈಹಾಳಿ ಯೆಲ್ಲಿಯುತಿಕಳಕಳವಿಂ ||
ತೆಲ್ಲಿಯುದರ್ಶನಗಮನವಿ |
ದೆಲ್ಲಿಯುವೃತಿ ನಿನಗೆ ಬಂದುದೆಲೆಸುಕುಮಾರಾ || ೧೦೭

ಮುನ್ನರುವರಳಿದಳಲನೆಲೆ |
ನಿನ್ನಂ ಸೆರೆನೋಡಿ ಮಗನೆ ಮರೆದಿರ್ದ್ದೆಂ ಪೇಳ್ ||
ಇನ್ನಾರಿಂದಂ ಮರೆದಪೆ |
ನೆನ್ನೊಳುಸಿಸ್ಸುರ್ವಮ್ಮನಿರದಿರೆಲೆತನುಜಾತಾ || ೧೦೮

ಗಳಗಳನೆ ಬಳೆದು ಧನವಃಂ |
ಗಳಿಸಿ ಚರಾರ್ಚಯುನೆಸಗಿ ಹರಕೃಪೆವಡೆದು ||
ಜ್ಜ್ವಳಸುಖಮನೀವನೆಂದಿರೆ |
ತಿಳಿವಿಲ್ಲದೆ ಮಗನೆ ತುರಗಹತಿಯಿಂ ಮಡಿದೈ || ೧೦೯

ಕೊರಲಂ ಮೆಟ್ಟುವಪದದೊ |
ಳ್ತುರಗಂ ಕಂಗೆಟ್ಟು ಜನನಿಯೆಂದೆನ್ನಂ ನೀಂ ||
ಕರೆದೆಯೊ ಮರೆದೆಯೊ ದೋಷಾ |
ಕರೆಯೆಂದೇಂ ತೊರೆದೆಯೋ ತನೂಜನೆ ಪೇಳೈ || ೧೧೦

ವ|| ಇಂತಳವಳಿದವಳ್ಪಲವಾಡಿಪಳಯಿಸುತ್ತಿಪ್ಪಾರ್ಗಳ್

ಕಂ|| ಇವಳವನಿಪಂಗೆ ಮೊರೆಯಿ |
ಕ್ಕುವಳಾನಿರೆ ಕುವರರೆಸಗಿದಪರಾಧಮನೆಂ ||
ದವಧರಿಸಿ ಪೋದನೆಂದೆನೆ |
ರವಿ ಪಶ್ಚಿಮಗಿರಿಯ ಶೃಂಗಮಂ ಮರೆಗೊಂಡಂ || ೧೧೧

ವ|| ಆಗಳ್

ವೃ|| ವರುಣಾಶಾವನಚೂತವಲ್ಲಿ ಗಗನಾಲಂಬಕ್ಕೆ ಪರ್ಬ್ಬಿದರ್ದ್ದ ಭಾ |
ಸ್ಕರಚೈತ್ರಂ ಬರೆ ಸಂಜೆಗೆಂಪೆನಿಪ ಭಾಸ್ವತ್ಪಲ್ಲವಂದಾಳ್ದು ಸೈ ||
ತಿರೆ ಪೂರ್ವಾಶೆಯಿನಲ್ಲಿಗೈದುವಪಿಕಾನೀ ಕಂಬೊಲಿಂಬಾಯ್ತು ನೋ |
ಳ್ಪರ ಕಣ್ಗಂಧತಮಂ ತಮಾಲಕತಮುಶ್ರೀಶಾಂಬುದಶ್ಯಾಮಳಂ || ೧೧೨

ವ|| ಅಂತು ತನ್ನಳಲುರಿಯ ಪೆರ್ಬೊರ್ಗೆ ಕವಿದಂತೆ ಕವಿದಕಡುಗಳ್ತಲೆಯೊಳಾತಿರುಕೊಳವಿನಾಚಿ ತನ್ನಣುಗನ ಕಳೇವರಮನೆತ್ತಿ ತಳ್ಕೈಸಿಕೊಂಡೆಂತಾನುಮಲ್ಲಿಂದೆಳ್ದು ನಿಜಗೃಹಕ್ಕೆಳ್ತಂದು ಮುಂಡಮುಂ ರುಂಡಮುಂ ಪತ್ತಿಸಿ ನೋಡಿ ಮುತ್ತವಿರದೆ

ಕಂ|| ಕಡವರಮಡಂಗಿತೇ ಪೊಸ |
ಕಡಾರಮಿಂದಕಟಮಾಯುಮಾದುದೆ ಮೆರೆವಿಂ ||
ಗಡಲಿಂಗಿಪೋದುದೇ ಕಡಿ |
ವಡೆದುದೆ ಕಲ್ಪಾವನೀಜಮಿದು ವಿಧಿವಶದಿಂ || ೧೧೩

ಪಸಿದೆಯೆಲೆಕಂದ ಬತ್ತಿತು |
ಬಸಿರಿದು ಕಳೆಗುಂದಿತಾನನಂ ಕಣ್ಬೊಣಗರ್ ||
ಮಸುಳ್ದುವುಣಲ್ಬಡೆಯದೆ ಮಿಗೆ |
ಬಸವಳಿದಿಂತಿರ್ಪುದುಚಿತಮೇ ಸುಕುಮಾರಾ || ೧೧೪

ಸರಿವರೆಯದ ಮಕ್ಕಳ್ಳಂ |
ಕರನೆಯ್ದದನಾಡಲೆಂದು ಬೆಸಗೊಳಲೇನೆಂ ||
ದಿರದೆ ಮರುಮಾತುಗೊಟ್ಟಪೆ |
ಸರಸನ ಹಯುದಿಂದೆ ಮಡದನೆಂಬೆನೆ ಮಗನೇ || ೧೧೫

ನೀನಾಡಿದೆಡೆಗಳಂ ಸುತ |
ನೀನೊರಗಿದಪಾಸುವಂ ತನೂಭವ ಪದಪಿಂ ||
ನೀನುಂಡತಾಣಮುಮನಿ |
ನ್ನಾನೆಂತೀಕ್ಷಿಸುವೆನೆಂತು ಸೈರಿಪೆನಕಟಾ || ೧೧೬

ವೃ|| ಗಾಡಿಯೊಳಾಡಿ ಮಕ್ಕಳೊಡನಂಗಣಕ್ಕೈದಿರೆ ತಳ್ತಧೂಳಿಯಂ |
ನಾಡೆ ಸೆರಂಗಿನಿಂದೊರಸಿ ಮೈದೊಳೆದೊಳ್ಪುಣಿಸಿಕ್ಕಿ ಮುದ್ದುಗೈ ||
ದೂಡಿ ವಿಳಾಸಮುಂ ಮೆರೆದು ಸಿಂಗರಿಸುತ್ತಮದರ್ಪ್ಪಿ ಬೇಡಿತಂ |
ನೀಡಿ ನಿರೀಕ್ಷಿಪೆನ್ನನುಳಿದೊರ್ವ್ವನೆ ಪೋಪುದೆ ನೀಂ ತನೂಭವಾ || ೧೧೭

ಕಂ|| ಅಳಲದಿರು ತಾಯೆ ದುಃಖಂ |
ಗೊಳದಿನ್ನಿರ್ಸೆಂದು ನೋಡಿ ಸಂತೈಸದೆ ಕ ||
ಣ್ಗಳ ಜಳಮಂ ತೊಡೆಯದೆ ಕಡು |
ಮುಳಿದರವೋಲ್ಸುಮ್ಮನಿರ್ಪ್ಪುದೇ ಸುಕುಮಾರಾ || ೧೧೮

ನೋಡುವಕಣ್ಣೊಡೆದುದು ಮಾ |
ತಾಡಿಪನಾಲಿಗೆ ಮುರುಂಟಿದುದು ನಿನ್ನಂ ಮುಂ ||
ಡಾಡುವಕಯ್ಯುಡಿದುದು ಸಲೆ |
ಪಾಡುವಬಾಯ್ಬಿಂದುದಣುಗ ನೀಂ ಮಡಿಯಲೊಡಂ || ೧೧೯

ಆರೊಡನುಸಿರ್ವೆಂ ದುಃಖಮ |
ನಾರುಂಟೆನಗಕಟ ಮಗನೆ ಮಗನೆ ಮನೋಜಾ ||
ತಾರಿಯ ಕೃಪೆ ತಪ್ಪಿದಬಳಿ |
ಕಾರಾದೊಡಮೇನೊ ನಿನ್ನನೇಂ ಕಾಣಿಪರೇ || ೧೨೦

ವ|| ಎಂದಾಕ್ರಂದನಂಗೈದಳಲ್ದು ಬಳಲ್ದು ಬಸವಳಿದು ಬಲ್ಪುಗುಂದಿ ಬಿಸುಸುಯ್ದು ಬಸಿರಂ ಪೊಸೆದು ದೈನ್ಯಂಬಟ್ಟು ಬಾಯಂಬಿಟ್ಟು ಪೆಸರ್ಗೊಂಡು ಕರೆಕರೆದೊಳದ್ದು

ತ್ರಿವುಡೆ|| ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ದೈಶಂಕರಾ |
ಸುಗುಣನಿಧಿ ನೀನೆನ್ನಮೊರೆಗಳನೊಮ್ಮೆ ಕೇಳ್ದೈ ಶಂ || ೧೨೧

ಪರಸಿ ಪಾಡಿ ಮಹೇಶನಿಂದಪೆ ಬೇಡಿ ಮುನ್ನಂ ಶಂ |
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂ || ೧೨೨

ಎಂತು ಮರೆವೆನೊ ಸವಿಯಸಾಲಿಡುವಮುದ್ದುಪಗೆಯಂ ||ಶಂ||
ಕಾಂತಿ ಶೋಭಿಸೆ ಮುದ್ದುವೀರುವ ಮೊಗದ ಬಗೆಯಂ ||ಶಂ|| ೧೨೩

ಝುಣಝುಣಿಸೆ ಕಿರುಗೆಜ್ಜೆ ಕರತಳತಾಳರವಕೆ ||ಶಂ||
ಕುಣಿವನಿನ್ನಯ ಬಿನದಮೊಪ್ಪುಗುಮೆನ್ನಮನಕೆ ||ಶಂ|| ೧೨೪

ಶರಣಪದಪಂಕಜರಜಂಗಳೊಳಾಳದಂತು ||ಶಂ||
ತುರಗಖುರಹತಿಜನಿತಧೂಳಿಯೊಳಳಿದೆಯಿಂತು ||ಶಂ|| ೧೨೫
ಎನ್ನ ಸೋವುವನೆಂದು ನಂಬಿರಲಿಂತು ಮಡಿದೈ ||ಶಂ||
ಮುನ್ನಮೆನ್ನಯ ಹರ್ಷವಲ್ಲಿಯ ಕುಡಿಯನುಡಿದೈ ||ಶಂ|| ೧೨೬
ನಿನ್ನಳಿವನೀಕ್ಷಿಸಿಯುಮೆನ್ನಸು ಪೋಗದಂದು ||ಶಂ||
ನಿನ್ನೊಳೆನ್ನಯ ಕೂರ್ಮೆ ನಿಜಮೆಂತೆನಿಪುದಿಂದು ||ಶಂ|| ೧೨೭
ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ||ಶಂ||
ಶಿರವರಿದು ನಿನ್ನಂದವಾಗದೆ ಪಿಂಗಿದಪನೇ ||ಶಂ|| ೧೨೮

ವ|| ಎಂದು ನಂದನನ ಗುಣವೃಂದಮಂ ನೆನೆನೆನೆದಾಕ್ರಂದಿಸಿ ಮತ್ತಮಿರದೆ

ಕಂ|| ಪರಮಕೃಪಾಕರನೆಂಬೀ |
ಬಿರುದಂ ಬಿಸುಟಕಟ ಶಂಕರಾ ಶಂಕರಸಂ ||
ಹರಿಸಿ ನಡುಗಾಪೊಳಂಧೆಯ |
ಕರದಂಡಮನೆಳೆದುಕೊಂಡವೋಲ್ಮಾಡಿದೆಯೈ || ೧೨೯

ವೃ|| ಎಲೆಗಿರಿಜಾತೆ ಮಾತೆ ಕರುಣಾಕರೆ ಶಾಂಕರಿ ದಿವ್ಯರೂಪೆ ನಿ |
ರ್ಮಲೆ ನಿಗಮಾಗಮಸ್ತುತೆ ಮಹೇಶ್ವರಿ ಮಂಗಳಮೂರ್ತಿ ಭಕ್ತವ ||
ತ್ಸಲೆ ರತಿಗಂದಳಲ್ಗಳಿದ ದೇವಿ ರಮಾನತೆ ನೊಂದೆನಿಂದು ನಿ |
ನ್ನಲಘುಕೃಪಾಕಟಾಕ್ಷದಿನಭೀಕ್ಷಿಸಿ ರಕ್ಷಿಪುದೆನ್ನ ನಂಬಿಕೇ || ೧೩೦

ವ|| ಎಂದು ಪಂಬಲಿಸಿ ಪಳಯಿಸುತ್ತುಮಿರೆಯಿರೆ

ಕಂ|| ಇಂಬೆನ್ನ ವಂಶಭವರೊಲ |
ವೆಂದಂ ಪನ್ನತಿಕೆದೋರಿ ಬರಿಪಗ್ಗಡ ಬಾ ||
ಲೇಂದುಶಿರೋಮಣಿಯಂ ನೋ |
ಳ್ಪಂ ದಿಟಮೆಂದೆಯ್ದಿದಂತೆ ಮೂಡಿದನರ್ಕಂ || ೧೩೧

ವೃ|| ಮೂಡಣದಿಕ್ಕು ಕೆಂಪಡರೆ ಮೂಡಿದದಿವ್ಯದಿನೇಶಬಿಂಬಮಂ |
ನೋಡಿ ಶಶಾಂಕಶಂಕೆದಳೆದಂತೆವೊಲುತ್ಪಳಮುಂ ಸರೋಜಮುಂ ||
ಕೂಡಿರೆ ಸಂಜೆ ನೀಳ್ದಿಸಳನೊಂದನಮುಚ್ಚುವಬಿಚ್ಚುವಾಟಮಂ |
ಮಾಡಿದುವಂತೆ ಸಂದೆಗಮೆ ಸತ್ವರಕಾರ್ಯಕೆ ವಿಘ್ನವಲ್ಲವೇ || ೧೩೨

ಕಂ|| ನೀಲಾಚಲನಿಚಯಂ ಸಲೆ |
ಸಾಲಿಟ್ಟೈದಿದುದು ಕದನಕೆಂದಂಥತವೋ ||
ಜಾಲಮನಾಲೋಕಿಪಸುರ |
ಪಾಲನ ಮಕುಟಂಬೊಲೆಸೆದುದಾರವಿಬಿಂಬಂ || ೧೩೩

ವ|| ಆಗಳವಳ್ನಿಜಾಲಯಮಂ ಪೊರಮಟ್ಟು ರಾಜವೀಧಿಗೇಳ್ತಂದು

ವೃ|| ನೊಂದು ಪಲುಂಬಿ ಪಂಬಲಿಸಿ ಮೇಣ್ಪಲವಾಡಿ ಬಳಲ್ದು ಬಾಡಿ ಕ |
ಣ್ಣಿಂದಿಳಿವಶ್ರು ಕಾಳ್ಪುರಮದಾಗಿರೆ ಬಾಯ್ದೆರೆ ಬತ್ತೆ ಮತ್ತೆ ಶೋ ||
ಕಂ ದಳವೇರೆ ಪೌರರಳಲುತ್ತಿರೆ ತಾನಳುತಲ್ಲಿ ತಾಳ್ದು ತ |
ನ್ನಂದನನಂಗಮಂ ಮೊರೆಯಿಡಲ್ಕಡೆಗೊಂಡಳಿಳಾಧಿನಾಥನೊಳ್ || ೧೩೪

ಕಂ|| ದೆಸೆಗಳ್ಮಾರ್ದನಿಗುಡೆ ಬಿಡ |
ದಸವಸದಿಂದೊಳರ್ದನಿನದದಿಂ ಕಣ್ಬನಿಯಿಂ ||
ರಸೆ ಕೆಸರೆಳ್ದಿರೆ ಬಂದ |
ಳ್ಬಸವಳಿಯುತ್ತಳಲುತರಸನರಮನೆಯತ್ತಲ್ || ೧೩೫

ವ|| ಅಂತು ಬಂದು ಸತ್ಯೇಂದ್ರನಂತಃಪುರಬಹಿದ್ವಾರದೇಶದೊಳ್ನಿಂದು ನಿಡುಸರಂದೋರಿ ಕೊರಲೆತ್ತಿ ಕರಮಂ ಸೆಗಪಿ

ಕಂ|| ವಿಪುಳತರಧರ್ಮಸಾಮ್ರಾ |
ಜ್ಯಪಾಳ ಸತ್ಯಾಬ್ಧಿಚಂದ್ರ ಸತ್ಯೇಂದ್ರಧರಾ ||
ಧಿಪ ಮೊರೆಯೊ ಶಿವ ಸದಾಶಿವ |
ಕೃಪಾರಸಾಮತ್ರಪುತ್ರನಳಿದಂ ಕಳಿದಂ || ೧೩೬

ವ|| ಎಂದವಿದಿಡುವಾಕ್ರಂದನಸ್ವರಮಂ ಕೇಳ್ದಿದು ಶಿವಭಕ್ತಗಾರ್ಗದನೋವಪ್ಪುದೋಯೆಂದು ಘನಸಿನಾದಮಂ ಕೇಳ್ದರಾಜಹಂಸನಂತೆ ರಾಜಹಂಸಂ ಸೆಡೆದು ಸಿಡಿಮಿಡಿಗೊಂಡಂತವುರದಿಂ ಚಿಂತಾಭರದಿನೇಳ್ತಂದು ಸಿಂಹಾಸನಾರೂಢನಾಗಿ ರೋದನಾಲಾಪಮೆತ್ತಣದೆಂಬನಿತರೊಳ್ಬಂದೊರ್ವವೃದ್ಧಕಂಚುಕಿ ಕೈಮುಗಿದಿಂತೆಂದಂ

ಕಂ|| ಕಂದನ ಪಂದಲೆಯಂ ಪಿಡಿ |
ದಿಂದೀವರನಯನೆಯೊರ್ವಳುರೆ ವೊರೆಯಿಡುತುಂ ||
ಕಂದರ್ಪರಿಪುಗೆ ಬಾಗಿಲೊ |
ಳಂದಂಗೆಟ್ಟಳುತುಮಿರ್ಪ್ಪಳವನಿಪತಿಲಕಾ || ೧೩೭

ವ|| ಎನಲಾನೆ ವಿಚಾರಿಪೆಂ ತಳ್ವದೊಳಪುಗಿಸೆಂಬುದುಮವಂ ಮಹಾಪ್ರಸಾದಮೆಂದವಳ ನೊಳಪುಗಿಸಿಕರೆದು ತಪ್ಪಾಗಳ್

ವೃ|| ಕರತಳದಲ್ಲಿ ತಾಳ್ದತಲೆ ಸೋಗಿಲೊಳಿಟ್ಟಕಬಂಧಮೆತ್ತಲುಂ |
ಪರೆದಳಕಾಳಿ ಧೂಳಿಪುದಿದಂಗಮುಡಂಗಿದಬಲ್ಪು ನೆತ್ತರೊಳ್ ||
ಪೊರೆದಸೆರಂಗು ಪಾಯ್ದುಗುವಕಣ್ಬನಿ ಬತ್ತುವಬಾಯ್ಪೊದಳ್ದಪು |
ಯ್ಯೊಕರಗಿದವಕ್ತ್ರಮುಚ್ಚಳಿತಹಾರವನೊಪ್ಪಿರೆ ಬಂದಳಾರ್ತದಿಂ || ೧೩೮

ವ|| ಅಂತುಬಂದಾನರೇಂದ್ರನಿದಿರೊಳಾರುಂಡಮುಂ ಮುಂಡಮನಿಳಿಪುತಳ್ಲಿರ್ಮ್ಮಡಿಸೆ ಶೋಕೋದ್ರೇಕಗದ್ಗದಕಂಠೆಯಾಗಿ ಗಂಟಲೊಡೆವಿನವೊಳದ್ದುವೊರೆಯಿಟ್ಟು ಮರುಗಿ ಮಗುಳ್ದುಮಗುಳ್ದಳುತ್ತುಮಿರೆಯಿರೆ

ಕಂ|| ಅಳದಿರೆಲೆತಾಯೆ ನೀನಾ |
ರಳಿದಣುಗನಿದಾರವಂ ಕೊಂದಲ್ಗೊರೆದಮುಹಾ ||
ಖಳನಾವನಾತನಂ ಪೇ |
ಳ್ಬಳಿಯೊಳ್ಕರೆಕೊಣ್ಡೆನಿದಕೆ ತಕ್ಕುಜ್ಜುಗಮಂ || ೧೩೯

ವ|| ಎನಲೆಂತಾನುಮಳಲಂ ಸಂತೈಸಿಕೊಂಡು ಕೈಮುಗಿದು ನಿಂದು ಕರುಣಾಂತಕರಂಗಂಗೆ ಸತ್ಯೇಂದ್ರಂಗೆ ಗದ್ಗದಾಂಕುರಿತಶಿಥಿಲಾಕ್ಷರಂಗಳ್ಪೊರಮಡೆ ಪೇಳಲ್ಮಗುಳ್ದಿಂತೆಂದಳ್

ವೃ|| ಕೇಳವನೀಶನರ್ಯ್ಯ ಭವದೀಯಪುರಸ್ಥಿತನಾಗಿ ಸದ್ವಣಿ |
ಗ್ಜಾಳದೊಳೇಳ್ಗೆವೆತ್ತು ಸಿರಿಯಿಂ ಗುಣದಿಂ ಶಿವಭಕ್ತಿಯಿಂ ಕರಂ ||
ಬಾಳುತುಮಿರ್ದ್ದನೊರ್ವ್ವರವಿನಾಮಪೆಸರ್ಗ್ಗರನೆನ್ನವಲ್ಲಭಂ |
ಪಾಳಿಯೊಳೀಶಭಕ್ತಚರಣಾಬ್ಜಸಮರ್ಚನೆಗೆಯ್ವುತಳ್ಕರಿಂ || ೧೪೦

ಕಂ॥ ಪಿರಿದು ಸಿರಿಯೊಸಕದಿಂದಾ |
ಸಿರುತವನೊಡಗೂಡಿ ಪಡೆದೆನರುವರುಮಂ ಪು ||
ತ್ರರನಮಳಗಾತ್ರರಂ ಭೂ |
ವರ ಕೇಳ್ಸುಖದಿಂದಮಿರ್ದೆನಿಪ್ಪನ್ನೆವರಂ || ೧೪೧

ಸ್ರ॥ ತನಗುಳ್ಳರ್ಥಮನೆಲ್ಲಮಂ ಬಿಡದೆ ಕೊಂಡುತ್ಸಾಹದಿಂದಂ ವಣಿ |
ಗ್ಜನಯುಕ್ತಂ ಕಡಲೊಳ್ಪಡಂಗಡದೊಳ್ ಪೋಗುತ್ತಿರ್ದೊಡಾನಾವೆ ತ ||
ದ್ವನರಾಶಿಯೊಳಾಗಳಾಗಳೆ ಮುಗುಳ್ದೆನ್ನಾಳ್ದಂ ಸಮಂತಾಳ್ದು ಜೇ |
ನನದೊಳ್ಜೀವನಮಂ ವಿಸರ್ಜಿಸಿದನೇನೆಂಬೆಂ ಮಹೀಪಾಲಕಾ || ೧೪೨

ವ॥ ಅಂತು ಮೂವರಾರ್ತಾಂಡನಸ್ತಮಯಮಾರ್ತಾಂಡನಂತೆ ನಿಜವಸುಸ
ಮೇತಂ ವಸಥಮಧ್ಯದೊಳ್ಮುಳುಂಗಿ ಪೋಗಲೊಡನೆ

ಕಂ॥ ಸಮನಿಸಿದುದೆನಗೆ ಚಿಂತಾ |
ತಿಮಿರಂ ಮತಿನೇತ್ರಮಳಿದುದಮಳಿನತರಹ್ಯ ||
ತ್ಕಮಳಂ ಕೊರಗಿದುದಸುಜ |
ಕ್ರಮುದುಬ್ಬೆಗಮಾಂತುದಾರ್ತಜನವನಚ್ಯುತಾ || ೧೪೩

ಎನಗಿನಸಿಂತಳಿವಂದಿನ |
ದಿನಕ್ಕೆ ಮೂದಿಂಗಳೆಸೆವಗರ್ಭಂ ನೆಲಸಿ ||
ತ್ತನುಗತಮಾದುದು ಕಡುಬಡ |
ತನನೊಡರಿ ವಿಸ್ತೃತಸೂಕ್ತಿರತ್ನಾಭರಣಾ || ೧೪೪

ಕಡುಬಡೆವುತಸಿದತನುವಂ |
ಬಡತನಮೆಡೆಗೊಂಡಬಾಳ್ಕೆಯುಮಂ ಖಲಜನರೊಂ ||
ದೊಡನಾಟಮುಮುರ್ದೆಗಳಲಂ |
ಪಡೆಯದೆ ನಾಣ್ಪುದೆ ಶ್ರೈವಟಿತಶುಭಚರಿತಾ || ೧೪೫

ಪತಿ ಗತಿಯೆ ಸತಿಗೆ ಗತಿಯುಂ |
ಬತಿಶಯಮುಂ ತಾಳ್ಪು ತನುವಹಿತ್ರಸಮೇತಂ ||
ತತದುಃಖಾಂಬುಧಿಯೊಳ್ಸಂ |
ಗತಿವಡೆದಾಳ್ದಂ ಶಿವಾಂಘ್ರಿನಖಮಣಿಮುಕುರಾ || ೧೪೬

ಬಡಬಶಿಖಿಯಲ್ಲಿ ಪಬ್ಬುರ್ವ |
ಪೊಡರ್ಪ್ಪನೊಳಕೊಂಡು ಮೇಲೆಮೇಲ್ಮೈತರ್ಪ್ಪ ||
ನ್ನೊಡಲುರಿಯುಸವಧರಿಸು ನಿ |
ನ್ನಡಿಗೆರಗಿದಪೆಂ ಪರೋಪಕೃತಿಗುಣಧಾಮಾ || ೧೪೭

ಅರುದಿಂಗಳೊಳಗೆ ತನುಭವ |
ರರುವರ್ಗ್ಗಳಗಳನೆ ರುಜೆಯಿನಳಿದರ್ಪ್ಪೆಳಲ್ ||
ಪೆರತೇನೊ ದುಃಖಮಿಂತೆಂ |
ದರಿಪಲ್ಕೆರೆದಪೆನೆ ಕೀರ್ತಿಧವಳಿತಭುವನಾ || ೧೪೮

ಉರಿದುದು ಬಗೆ ಮಿಗೆ ಬೆಂದುದು |
ಹರಣಂ ತನು ಕಂದಿ ಕುಂದಿದುದು ಕಳವಳವೊ ||
ತ್ತರಿಸಿದುದು ಮೂರ್ಛೆ ಬಡದಾ |
ವರಿಸಿದುದೆನಗಾಗಳತುಳಸತ್ವನಿಧಾನಾ || ೧೪೯

ವ|| ಆಮೂರ್ಛೆಯೊಳಾನಿರ್ಪ್ಪಾಗಳು ಮಾರಣನಮಿತಕೃಪೆಯಿನೆಳ್ತಂದಂಜ
ದಿರೆಂದಭಯಮಿತ್ತು

ವೃ|| ಕಯ್ದುಳಿರಿಂದೆ ಮೈದಡವಿ ವಾಮವಿಲೋಚನದಿಂದೆ ನೋಡಿ ಸೈ |
ಪೆಯ್ದೆ ಪದಾಬ್ಜಮಂ ಪಣೆಯೊಳಿಟ್ಟಳಬಿಸ್ಸನಗೊರ್ವ್ವಸೂನು ತಾ ||
ನೆಯ್ದೆ ಗುಣಾಂಕನುದ್ಭವಿಪನಿಮ್ಮುಳಲಂ ಪಂದಿಕ್ಕಿ ಮುಕ್ತಿಗೊ |
ಲ್ದೊಯ್ದಪನೆಂದು ಪೇಳ್ದು ತಳರ್ದಂ ತರುಣೇಂದುಧರಂ ಧರಾಧಿಪಾ || ೧೫೦

ಕಂ|| ತಿಳಿದುದಸಿತರೊಳೆ ಮೂರ್ಛಾ |
ಕುಳತೆ ಮನಸ್ತಾಪಮುಳಿದುದೊಳಸಾರ್ದ್ದುದು ವಿ ||
ಹ್ವಳತೆ ಶಿವನೊಲವದೇನಂ |
ಕಳೆಯದೊ ಮನದಳಲನವನಿಪಾಲಕತಿಲಕಾ || ೧೫೧

ನಂಬಿದೆನಂಬಿಕೆಯರಸನೊ |
ಡಂಬಡೆ ಪೇಳ್ದಮಳವಚಮನನಿತರೊಳೊಗೆತಂ ||
ದಂ ಬಾಲಕನಿವನೆನ್ನಳ |
ಲಂ ಬರಕೈದಂ ವಿಳಾಸದಿಂದಿಳೆಯರಸಾ || ೧೫೨

ಹರನೊರೆದತೆರದೊಳುರೆ ಶಂ |
ಕರನೆಂದೊಳ್ವೆಸರನಿಟ್ಟು ಗತಿಯುಂ ಮತಿಯುಂ ||
ಪರಸುಖದನೀತನೆಂದಾಂ |
ಪೊರೆದೆಂ ಪೊರೆವಂತೆ ಕಲ್ಪಭೂಜದ ಸಸಿಯಂ || ೧೫೩

ಇನನಸ್ತಮಿಸಿದೊಡೊದವಿದ |
ಘನತಿಮಿರಮನಿಂದು ಕಳೆವವೋಲ್ಕೆರೆಕಳೆದಂ ||
ಇನನಸ್ತಮಿಸಿದೊಡೊದವಿದ |
ಘನದುಃಖಮನಿಂದುನಿಭನಿಸಂ ಮನುಜೇಂದ್ರಾ || ೧೫೪

ಹರೆಯಂ ಕಿರಿದಾದೊಡಮೇಂ |
ಪಿರಿದೊ ವಿವೇಕಂ ಶಿವಾಂಕಮಾಲೆಯನತ್ಯಾ ||
ದರದಿಂ ಪಾಡುವ ನಭವನ |
ಶರಣರ್ಗೆರಗುವನವಂದಿರೊಳ್ಬೆನದಿಸುವಂ || ೧೫೫

ಶಿವಕೀರ್ತನಮಂ ಕೇಳ್ವಂ |
ಶಿವಾಂಘ್ರಿಪೂಜೆಯನೊರಲ್ದು ನೋಳ್ಪಂ ಮುದದಿಂ ||
ಶಿವನಾಮಮನುಚ್ಚರಿಪಂ |
ಶಿವಂಗೆ ಕೊಟ್ಟಲ್ಲದೇನುಮಂ ಕೊಳಲೊಲ್ಲಂ || ೧೫೬

ವ|| ಇಂತಭಿನವಾಶ್ಚರ್ಯಕರಪವಿತ್ರಚರಿತ್ರನೆನಿಸಿ ಪುತ್ರಂ ಪಂಚವರ್ಷಂಬರಂ ನೆರೆದೆಸೆದಿರ್ದನಿಪ್ಪನ್ನೆಗಂ

ವೃ|| ನಿನ್ನಿನ ಮುಂಬಗಲ್ಪದೆದು ನಿನ್ನಕುಮಾರನಮಾತ್ಯಪುತ್ರನುಂ |
ಚೆನ್ನೆಸೆದಿರ್ಪನಂ ವಿಹರಿಪಲ್ಲಿ ಪುರಾಂತದೊಳ್ಬೆದಿಬರ್ಪ್ಪನೇ ||
ನೋನ್ನತಿಯಂ ನಿರೀಕ್ಷಿಸಲಿಪಂ ಪೊರಮಟ್ಟಿರೆ ತತ್ತುರಂಗಮೇ |
ತನ್ನಿಜಮಸ್ತಕಂ ಪರಿಯೆ ಮೆಟ್ಟಿದುದುತ್ಸುರದಿಂ ಧರಾಧಿಪಾ || ೧೫೭

ಕಂ|| ಇವನಿಂದೆ ಮುಂದೆ ಪಡೆದಪೆ |
ನವಿರಳತರಸುಖಮನೆಂದು ನಂಬಿರ್ದೆಂ ಕೇ ||
ಳ್ಯವರಾಜನಶ್ವಖುರಕೀ |
ಕುವರಂ ಬಲಿಯಪ್ಪನೆಂದು ಬಲ್ಲೆನೆ ನೃಪತೀ || ೧೫೮

ಎಂದಿಂತೆಲ್ಲಮನವಳೆ |
ಲಿಂದುಸಿರೆ ನರೇಂದ್ರವರ್ಯನಾಲಿಸಿ ಮನದೊಳ್ ||
ಸೊಂದು ಶಿವಶಿವ ಶಿವಂ ಬ |
ಲ್ಲಂ ಗಿಟಮಿದನೆಂದು ಮಗುಳ್ದು ತಲೆದೂಗುತ್ತುಂ || ೧೫೯
ಒಡಬಾನಳಮಂ ಜಲಮಂ |
ಕಡಲೊಡನಾಂತಂತೆ ಕಾಯ್ಪುಮಂ ಕರುಣಮನಾಂ ||
ತೊಡನೊಪ್ಪಿದನಾತ್ಮಜನೊ |
ಳ್ಪಡುಶೋಕಂಗೈವಸುಪತಿಯೊಳ್ಸತ್ಯೇಂದ್ರಂ || ೧೬೦

ವ|| ಅಂತೊಪ್ಪುತ್ತುಮಿರ್ದ್ದ ಪತಿನೋಹಿಮಂತ್ರಿಪನಂ ಬರಿಸೆಂದು ವೃದ್ಧ ಕಂಚುಕಿಗೆ ಬೆಸಸುತ್ತುಮಿರೆಯಿರೆ

ವೃ|| ಜನನಿ ಜಗತ್ತ್ರಯಾತ್ರಿತೆ ಜನಾರ್ದನವಂದ್ಯೆ ವದಾನ್ಯೆ ಮಾನ್ಯೆ ಮಾ |
ನಿನಿ ಮಹನೀಯ ಮಂಗಳೆ ಮಹೇಶ್ವರಿ ಮಾನುತೆ ಮಂದಯಾನೆ ಸ ||
ಜ್ಜನಹಿತೆ ಸದ್ಗುಣಾನ್ವಿತೆ ಸದಂಚಿತೆ ಸತ್ಯನಿದಾನೆ ಸೌಖ್ಯದಾ |
ಯಿನಿ ಸನಾತನೆ ಶೋಭನೆ ಪರಾತ್ಪರೆ ಪಾಲಿಪುದೆನ್ನನಂಬಿಕೇ || ೧೬೧

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣ ಮಹಾಪ್ರ
ಭಾಪಟಲಪರಿವೃತಪರಶಿವ ಶ್ರೀಪಾದನಖಚಂದ್ರ ಸಾಂದ್ರರುಚಿ
ರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನ
ಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷ
ರದೇವ ವಿರಚಿತಮಪ್ಪ ರಾಜಶೇಖರವಿಳಾಸ
ವಿಪುಳಪ್ರಬಂಧದೊಳ್ತಿರುಕೊಳವಿನಾಚಿ
ಪ್ರಳಾಪವರ್ಣನಂ ತ್ರಯೋದಶಾ
ಶ್ವಾಸಂ ಸಂಪೂರ್ಣಂ.

# ಚತುರ್ದಶಾಶ್ವಾಸಂ.

---

ಕಂ|| ಶ್ರೀಮದನಗಜಾಭುಜಾಸುಮ |
ನೋಮಂಜುಳಮಾಲಿಕಾವೃತಶ್ರೀಕಂಠಂ ||
ಸೋಮಕಳಾಧರನೆಮ್ಮಂ |
ಪ್ರೇಮಂ ಮಿಗೆ ಪೊರೆಗೆ ಸಂತತಂ ಶಿವಲಿಂಗಂ || ೧

ವೃ|| ವಿಳಸದ್ರತ್ನಕಿರೀಟಕಾಂತಿ ಬಿಸಿಲಂ ತಳ್ಪೊಯ್ಯೆ ವಕ್ತ್ರಂಗಳುಮಂ |
ಡಳಮಂ ಪೊಂಬಿಸತಾರೆ ತಾನೆನಿಸಿ ಮುಕ್ತಾಕುಂತಳಂ ಗಂಡಮೊಲ್ ||
ಮಿಳಿರ್ದಾಡುತ್ತಿರೆ ತಾರಹಾರಕಿರಣಂ ಚೆಕ್ಕಂಗಳಂ ಬಾರಿ ಕಾಂ |
ಗೊಳಿಸುತ್ತುಂ ನಟಿತಂದು ಮಂತ್ರಿತಿಳಕಂ ಪೊಕ್ಕಂ ತದಾಸ್ಥಾನಮಂ || ೨

ವ|| ಅಂತು ಪೊಕ್ಕು ಶಿವೇಶ್ವರಾಂಘ್ರಿಗೆರಗಿ ಕೃತಾಂಜಳಿಪುಟನಾಗಿ ನಿಂದಿ
ರ್ದನಿತರೊಳಿದರೊಳಾಬಾಲತಿರಮಂ ಪಿಡಿದಳ್ಳಿ ಹರಭಕ್ತೆಯಪ್ಪ ಸುದತಿಯುಂ
ಕಂಡಿದೇನೆಂದು ತನ್ನೊಳನುಮಿಸಿ

ಕಂ|| ಇದು ಸನ್ನಿಸ್ಪದೇಶಂ |
ಟದೊಳೆನ್ನ ತನೂಜನಿಂ ಸ್ವಮಾತ್ಮಜನಿಂ ಬಂ ||
ದುದುಗಡ ತಾನಲ್ಲದೊಡೇಂ |
ಸುದತಿ ಸಭಾಸ್ಥಳಕೆ ಮೊರೆಯನಿತಲ್ಲೈದುವಳೇ || ೩

ಇದಕೆ ಪ್ರಹಾರಮಣಿಯ |
ಲ್ಲದು ಶಿವಕೃತಮಕ್ಕುಮಭವನೊಲ್ಮೆಗೆ ಸ್ವಪನ ||
ಗ್ಗದಮಹಿಮೆಗೆ ಕಾರಣಮಿಂ |
ತಿದು ತಾನೆಂದರಿದನವನಗೇಂ ಶಿತಮತಿಯೋ || ೪

ವ|| ಇಂತಮಾತ್ಯವರೇಣ್ಯಂ ತಿಳಿದಬಗೆಯುಂ ಮೊಗಮುಂ ನೋಡಿದನಿತರೊ ಳ್ಪರೇಂಗಿತಪ್ರಜ್ಞನಾದನರೇಂದ್ರಂ ತಿಳಿದವನಭಿಜ್ಞತೆಗೆ ಮನದೊಳ್ಮೆಚ್ಚಿ ತಾನು ಮುಸಿರದೆಯುಂ

ಕಂ|| ಕರೆಕರೆ ಕೃತಾಪರಾಧಕ |
ಧರಾತಿಭಾರಕಕುಮಾರಕರನೀಗಳೆನು ||
ತ್ತರಸನುಸಿರ್ದಸಿತರೊಳ್ಬಂ |
ದರಳಾಪತಿಸೂನುಸಚಿವಸೂನುಗಳಿರ್ವರ್ || ೫೪

ವ|| ಅಂತೈತಂದು ಎಣೆಮಕುಟಕಿರಣಮರುಣಕುಸುಮಮುಂ ಪದಪೀಠ ದೊಳ್ಬಲಿಗೆದರ್ದಂತಾಗೆ ಬಾಗಿ ಪೊಡಮಟ್ಟು ನಿಜಾಪರಾಧಮನರಸನರಿದಪನೆಂದು ಶಂಕಿಸುತ್ತಂತಂತೆ ಕಂಪಿಸುತ್ತುಂ ಕೆಲಸಾರ್ದು ನಿಂದಿರ್ದ ನಿಜಕುಮಾರನುಮಂ ಸಚಿವಸುತನುಮಂ ಕೆಂಪಡರ್ದಕಡೆಗಣ್ಗಳಿಂದಡಸಿನೋಡಿ

ಕಂ|| ಕುಟಿಮಿಾಸೆ ಕುಣಿಯೆ ಪಣೆಯೆಳ |
ಕ್ಪಿಡದೊಗೆತರೆ ಘರ್ಮಜಳಕಣಂ ಭ್ರುಕುಟಿ ಪೊದ ||
ಳ್ದೆಪೆಗೊಂಡಿರೆ ಕೋಪಾಗ್ನಿಯು |
ಪೊಡಪ್ಪರ್ ರೂಪಾಂತತೆರದೆ ಘುಡಿಘುಡಿಸುತ್ತುಂ || ೬

ವೃ|| ಇನಿತೊಂದೌದ್ಧತ್ಯಮೇಂ ಸಲ್ವುದೆತನುಜದಿಂ ಯೌವನೋದ್ರೇಕಲಕ್ಷ್ಮೀ |
ಜನಿತೋದ್ಯದ್ದರ್ಪದಿಂ ಮುಂದರಿಯದೆಪಯಶಕ್ಕಳ್ಕದತ್ಯಂತದೋಷ ||
ಕ್ಕನಿತಾಂತಂ ಬಳ್ಕದೆನ್ನತ್ತಣೆನಿನಿತುಭಯಂದೋರದೀಧಾತ್ರಿಯೊಳ್ಸ |
ಜ್ಜನರಲ್ತೆನ್ನೆಂಬರೆಂದೆಂಬುದನೆ ಬಗೆಯದೀಬಾಲನಂ ಕೊಂದಿರಲ್ತೇ || ೭

ವ|| ಎಂದು ಮತ್ತಮಿರದೆ

ವೃ|| ಶರಣಪದಂಗಳಂ ಪದೆದು ಪೂಜಿಸಿ ಶಂಕರಪೂಜೆಗೆಯ್ದು ಸ |
ಚ್ಚರಿತಮನಾಂತು ಶೈವಮತವರ್ತನೆಯುಂ ಬಗೆಗೊಂಡು ತಾಳ್ದು ಭಾ ||
ಸುರಗುಣವೃಂದಮುಂ ವಿಮಳಕೀರ್ತಿಯನಾರ್ಜಿಸಿ ಬಾಳ್ದುಮೆಮ್ಮನು |
ದ್ಧರಿಸುವನೆಂದು ನಚ್ಚಿರೆ ಕುಮಾರಕ ಲೇಸನಿದಂ ನೆಗಳ್ಚಿದೈ || ೮

ಆರಿನೃಪರಂ ಪತಲ್ಪಡಿಪಕೇಳಿಮನೊಲ್ಲದೆ ಶಂಭುಪಾದಪಂ |
ಕರುಹಮನೊಲ್ದು ಪೂಜಿಪವಿಳಾಸಕೆ ಸಲ್ಲದೆ ಶೈವಕಾವ್ಯಮಂ ||
ಸರಸತೆಯಿಂದೆ ಕೇಳ್ವಬಗೆಯೊಳ್ಮಿಗೆಸಲ್ಲದೆ ಭರ್ಗಭಕ್ತಭಾ |
ಸುರಶಿಶುವಂ ಕೊರಲ್ಗೊರೆವಲೀಲೆಗೆ ಸಂದುದೆ ಚಿತ್ತಮಾತ್ಮಜಾ || ೯

ಶಿವಭಕ್ತಂಗೊರ್ಮೆ ಭಿಕ್ಷಾನ್ನಮನೆವಿನಯದಿಂದಿತ್ತವಂ ಕೋಟಿಯಜ್ಞೋ|
ದ್ಭವಪುಣ್ಯಾವಾಪ್ತಿಯಂ ತಾಂ ಪಡೆವನೆಸೆ ತದಾಗಸ್ಕರಂ ಕೋಟಿಪಾಪಾ ||
ಘಪಿಶೇಷಾವಾಪ್ತಿಯಂ ಮೇಣ್ಪಡೆಯನೆ ಸುಕೃತಕ್ಕಾದಬಲ್ಪೇನಘಕ್ಕಿ |
ಲ್ಲವೆ ಪೇಳೀದೋಷಕಿನ್ನಾವುದೊ ಪರಿಹರಣಂ ಧಾತ್ರಿಯೊಳ್ನೋಡೆ ನೀಡುಂ ||

ಕಂ|| ಶರಣರ ಮನಕ್ಕೆ ನೋವಂ |
ದೊರಕೊಳಿಸಿದಘಕ್ಕೆದೊರೆಯದನೆ ಪರಿಹಾರಂ ||
ಶರಣಶಿಶುಶಿರಮನರಿದೀ |
ದುರಿತಂ ನಿಜಶಿರಮನಿತ್ತೊಡಂ ಪೋದಪುದೇ || ೧೧

ಹರಪೂಜೆಯಿಂದೆ ಮಿಗಿಲೀ |
ಶ್ವರಭಕ್ತರ ಪೂಜೆಯೆಂಬುದಾಗಮಮುಡರಂ ||
ಹರಚರಣದ್ರೋಹವಿನೀ |
ಶ್ವರಶರಣದ್ರೋಹಮುಗ್ಗಳಂ ವಸುಮತಿಯೊಳ್ || ೧೨

ವ|| ಎಂದು ಸತ್ಯೇಂದ್ರಚೋಳಾಧಿಪಂ ಯುವರಾಜನುಮಂ ಮಿತವಚನನು ಮನಂತೆ ಜಡಿದು ನುಡಿದುಮೀಶಿಶುವನಿವ್ವರೊಳಾವಾತಂ ಕೊಂದನೆಂಬುದಂ ಬೇಗಂ ಬೆಸಸಿಮೆನೆ ಮಿತವಚನಂ ಮುಂದಣ್ಗೆ ವಂದು ಕರಾರವಿಂದಮುಂ ಮುಗಿದು ನಿಂದು

ವೃ|| ದೇವ ಮದೀಶ ಬಿನ್ನಪಮುಸೂನಪಯುಂಗಳನೇರಿ ಮೀರಿ ಸೇ |
ನಾವಳಿಗೂಡಿ ಗಾಡಿಮಿಗೆ ಬರ್ಪಿನಮೀಶಿಶು ನೋಳ್ಪೊಡೈದೆ ಕಂ ||
ಡೀವಿಭು ತನ್ನ ವಾಜಿಯನೆ ದಾಂಟಿಸಿದಂ ತಲೆ ಪಾರೆ ರಕ್ತಧಾ |
ರಾವಿಳಮಿಕ್ಕಿ ಮೆಟ್ಟಿದುದು ಮತ್ತುರಗಂ ಖುರದಿಂ ಶಿರೋಧಿಯಂ || ೧೩

ಕಂ|| ಅದರಿಂದೆ ದೇವ ತಪ್ಪಿ |
ನ್ನದು ಬಳಿಕೀಶಿರಕೆ ಪಳಿಯುಸೆನ್ನಯ ಶಿರಮಂ ||
ಪದೆದೀವುದುಚಿತಮೆಂದಾ |
ಡಿದನಾಮಿತವಚನನಚಳಸೂನೃತವಚನಂ || ೧೪

ವ|| ಅಗಳಾಸತ್ಯೇಂದ್ರನಾಮಾತಂ ಬಗೆಗೊಂಡು ನಿಜಮಂತ್ರಿಯಂ ನಿರೀಕ್ಷಿಸುತ್ತುಮೀತನ ಶಿರಮುಮರ್ಗೀಶಿಶುಶಿರಕ್ಕೆ ಪಕಗುಡುವುದೆನೆ ಗಳಿಲನೆ ಪಳಿಪೊರ್ದ್ದದ ಮಳಚರಿತನಿದಿರ್ಗೆವಂದೆನ್ನ ಶಿರಮಿದಕ್ಕೆ ಸಳಿಯೆಂದು ತೋರ್ಪ್ಪಂತೆ ಪಣೆವರೆಯೊಳ್ಕರಾಂಜಲಿಯುಮನಮರ್ಚ್ಚಿ ನಿಂದು ||

ಕಂ|| ಪರಸತ್ತ್ವವಾಣಿ ಗಂಭೀ |
ರರವಂ ಕೌತುಕಮುವಾಸೆ ನಭಿ ಸ್ವಾಮಿಸ ಮಾನಂ ||
ಹರಿಸಮುಸಮುರ್ಚ್ಚಿ ಸಚಿವಂ |
ಗಿರದಳಿಪಿಮ್ಮರ್ಟಿನೆ ಮಂತ್ರಲಕ್ಷ್ಮಂ ಸುತಿಪಂ || ೧೫
ಅವಧರಿಪ್ರುದು ಬಿನ್ನಪಮಂ |
ಭುವನೇಶ್ವರ ತಪ್ಪದೆನ್ನಗಂಕೆನಲಾಂ ಸ್ವೈಂ ||
ಧವನಿತ್ರಸ್ವೈಂಧನಮುನೀ |
ರುಪಬಗೆಪಿಟಪಿದ್ದ್ರ ಕೇಳ್ದೊಡೀಮಿ ಶವಾಕಸಂ || ೧೬

ವೃ|| ಪೊಸತೀಪಾಂಬಿಯುಗಂ ಪುರಂ ಪ್ರಬಳಕ್ಕೆಪವಾಸ್ರಿತಮಂ ತೀವಿ ರಂ |
ಜಿಸುಗುಂ ಸ್ವೈನ್ನಮುಗಣ್ಯಾಮುಸ್ವತಮುದಂ ಮುದ್ದೂಧುಸಂಭಕ್ಷ್ಯಮಾ ||
ನಸಸಂತಾಪಕರಾಸಮಿಷ್ಟುವದುಂಡೀಕಜ್ಜಮುಂ ಕೂತ್ತುರ್ ಯೊೀ |
ಚಿಸಲೇನಕ್ಕುಮೆ ಮಾಣ್ಬುದೆಂದಸಿವಸೆನ್ನಂ ಮುಸ್ನಮುರ್ನೀಶ್ವರಾ || ೧೭

ಕಂ|| ಎನೆ ನಿನಗೆ ಬಂದತಪ್ಪಂ |
ದೆನಗೆ ವಿನೋದಕ್ಕೆ ವಿಘ್ನಮಂ ಮಾಡದಿದೇ ||
ಳೆನುತಾಗ್ರಹಿಸುತೊಡಂಬಡ |
ಲನುಗ್ಯೆದೆಂ ದೇವ ಪಿಡಿಪೊಂದುಬ್ಬುಗಮಂ || ೧೮

ಅದರಿಂದಪರಾಧಮಿದೆ |
ನ್ನದುಗಡ ನೀಮರಿಯದುದೆ ಮಹೇಶ್ವರ ಸರ್ವ ||
ಜ್ಞ ದಯಾನಿಧಿ ಪಳಿಗೀವುದು |
ಮದುತ್ತಮಾಂಗಮನುಮಾಧವಂ ಮುಚ್ಚುವಿನಂ || ೧೯

ಅನಿಮಿತ್ತಮೀಶಭಕ್ತಿಯು |
ತನುಭವನಿಂತಳಿದನೆಂದು ಮರುಗಿದಪುದು ಮ ||
ನ್ಮನಮಸಿತಲ್ಲದೆ ಮುಗ್ಧೇ |
ವನಮಂ ತೊರೆದಲ್ಲಿ ಮರುಕನೀಂ ತೋರುಗುಮೇ || ೨೦

ವ|| ಎಂದು ನುಡಿದಾ ರಾಜಕೇಸರಿಕುಮಾರನ ಒಗೆಗೆ ಸಭಾಸದ
ವೃದ್ಧಪ್ರಸಿದ್ಧರಾಜನ್ಯಕಂ ಬಗೆಮೆಚ್ಚಿ ಮಣಿಮಕುಟಮಂ ಹೊರೆದ, ತೂಗಿ
ಕಂ|| ಪುಸಿಪೊಂದದ ಪೊಸನುಡಿಯಿಂ |
ನಸುಮತಿಯೊಕ್ಷಿತಿಯುಬಿಕ್ಕವಿದಾನ್ಯನೃಪಸುತನಂ ||
ತನುವಿಗುರ್ಬೇರ್ರಿಗೆಯೊಳ್ |
ಮುಸಿರುವವಸ್ಸಿಗಳ್ ನಾಜ್ಜಿಕೆವೆಟ್ಟಿರವೊಳಕೆ || ೨೧

ವ|| ಎಂದು ಸ್ತುತಿಸುತ್ತಿರ್ಪ್ಪ ನವರುಪತ್ಯೇಂದ್ರನಾಕುವರಂ ಗಾಢಾಪ್ಲುನ
ದವನೆಂದು ನಪ್ರ್ಭಸ್ಪೈಯುಸದಿರಾತ್ನ್ಯಮುಂ ಪರೀಕ್ಷಿಸಿ
ಕಂ|| ಸಂದೆಗಮೇಸಿಸ್ಸಿಗಕೆಲೆ |
ಕೊಂದವನಿವನಾದಮಾಜಸೀತನ ಶಿರಮಂ ||
ತಂದೀವುದು ವಳಿಗುಚಿತಮಿ |
ದೆಂದಂ ಶಿವಶಿವ ಸಭಾಸದಮ್ಮರುಗುವಿನಂ || ೨೨

ಎನೆ ಕಳೆಯೇರಿದಸುರ್ವ್ವಿದ |
ನನುರಾಗಂದಾಳ್ದನಭವನಡಿದಾವರೆಯಂ ||
ನೆನೆದನಮಚ್ಚಿದನಾನಿಜ |
ಜನಕನ ಕನದಂಘ್ರಿ ಕಂಜಮೊಳ್ಪೆರೆನೊಸಲಂ || ೨೩

ವೃ|| ಘನತರಭಕ್ತಿ ಕೈಮುಗಿದಪದಾಬ್ಜಮನರ್ಚಿಸಿ ಪೂರ್ಣರಾಗದಿಂ |
ಧನಕನಕಾಂಬರಪ್ರಸರಸನ್ಮಣಿಭೂಷಣಸ್ಸಂದಮುಂ ಮಹಾ ||
ವಿನಯದಿನಿತ್ತು ಕೈಮುಗಿದು ಕಿಂಕರಭಾವಮನಾಳ್ದು ಪೇಳ್ದು ಮು |
ನ್ನಿನ ನಿಜವೃತ್ತಮುಂ ಪಡೆದಸಂದಿರಸತ್ಕೃತಿಯುಂ ಕುಮಾರಕಂ || ೩೩

ಕಂ|| ತೊಡವೆಳಗುಪ್ಪೊಳೆವ ವದನದು |
ದುಡುಪತಿಯುಂ ಪಳಿಯ ನೇತ್ರರುಚಿ ಚಂದ್ರಿಕೆಯುಂ ||
ಜಡಿಯೆ ನಡೆತಂದನೊಲವಿಂ |
ಮೃಡನಂ ಜಾನಿಸುತೆ ಜನನಿಯರಮನೆಗಾಗಳ್ || ೩೪

ವ|| ಅಂತು ಬಂದು ಮಣಿಸೋಪಾನಮನಳಂಕರಿಸಿ ವಿನಿಯೋಗದನುಕ್ರಮದಿಯುತ
ನಡುವೆ ಕುಳ್ಳಿರ್ದ್ದಮಾತೃತಮುತದೇವಿಯುಮರಸಿಗೆಂಗಳೊಡನ ||

ವೃ|| ಕಡಗಂ ಗಲ್ಕೆನೆ ತೋಳ್ಗಳಿಂ ನೆಗಪಿದಳ್ತಕ್ಕೈಸಿದಳ್ಮನ್ನ |
ಣ್ಣಗೆಯಿಂ ತುಳ್ಕೆ ಮುದಶ್ರು ಸೋಂಕಿ ನಲಿದಳ್ತಂದಾಡಿದಳ್ಮುದ್ದಿಸು |
ತ್ತೊಡನರ್ಧಾಸನದಲ್ಲಿ ಕುಳ್ಳಿರಿಸಿದಳ್ಸತ್ಕೃತ್ಯಮುಂದಳ್ಕ್ಷತ್ರೆಮ |
ಲ್ಲಡಿಗೊಟ್ಟಳ್ಮದನಾಂಗಜಂಗೆ ಜನನೀ ಪುತ್ರಸ್ನೇಹಮೆಂತಪ್ಪುದೋ || ೩೫

ವ|| ಅನಂತರಂ

ಕಂ|| ಮಗನ ಪೊಸಪೊಂಬುಕಪ್ಪಿಂ |
ನೆಗಳ್ದ ನಗೆಮೊಗದೊಳಿಪ್ಪ ನೇಸಱುಬಿಸಿಂ ||
ದೊಗುಮಿಗೆಯುಂ ಮುಗ್ಧಸಿ ಮಿಗೆ |
ಮೃಗಶಾಬೇಕ್ಷಣೆ ಕುಮಾರನಂ ಬೆಸಗೊಂಡಳ್ || ೩೬

ವೃ|| ಜನನಿ ತುರಂಗಮೇಱಿ ಬಗೆಗೂಡೆ ಬರುತ್ತಿರೆ ಪೆಟ್ಟಿತೊಪ್ಪಿ ಘ |
ಕ್ಕನ ಶಿಶುವಂ ಕೊರಳ್ಪಿಡಿಯೆ ಮಂತ್ರಿಕುಮಾರಕನಶ್ವಮಾತನ ||
ಲ್ತಿನೆ ಸಿನಗಾಂಪತಷ್ಟನಗೆಸುತ್ತುಸಿರ್ದಂ ಮೊದಲಿಂತದಕ್ಕೆ ಮು |
ಜ್ಜನಕನರೇಂದ್ರನೆನ್ನ ಶಿರಮಂ ಪಳಿಗಿತ್ತು ಮಸಿಂದು ಸಿಕ್ಷೆಯುಂ || ೩೭

ಕಂ|| ಅಂಬಿಕೆ ನಿಮ್ಮಡಿಗೆರಗುತ್ತೊ |
ಡಂಬಡೆ ಬೀಳ್ಕೊಂಡುಪೋಗಲ್ಬಿಡಿದೆನಿನ್ನಂ ||
ಪಂಬಲಿಸದೆ ಮಿತವಚನನ |
ನಿಂಬರಿದೆನ್ನಂತೆ ಕಾಣ್ಬುದಿಂತಿದೆ ಕಜ್ಜಂ || ೩೮

ವ|| ಎಂದು ಮುಗುಳ್ದಿಂತೆಂದಂ

ವೃ|| ಮೊದಲೆಳೆಯರ್ಕಳಿಲ್ಲದುರೆ ದೂರಿಸಿ ಮದ್ಗುರುಪುತ್ರನುಂತ್ರದಿಂ |
ಪದಪಿನೊಳೀತನಂ ಪಡೆದು ಬಾಲ್ಯದ ಲೀಲೆಯನೊಲ್ದು ನೋಡಿ ನೆಂ ||
ಪೊದವಿದಯೌವನೋದಯವಿಳಾಸಮನೀಕ್ಷಿಪಕಾಲಕಿಂತು ಬಂ |
ದುದೆ ವ್ಯತಿಯೆಂದು ಚಿಂತಿಸದಿರಿಂತಿದನಾಂ ಸೆರಗೊಡ್ಡಿ ಬೇಡಿನೆಂ || ೩೯

ವ|| ಎಂದಾಯುವರಾಜರಾಜಶೇಖರಂ ಬಿನ್ನವಿಸೆ ತಾನತ್ಯಂತ ಶಿವನಿಷ್ಠೆಯಪ್ಪುದರಿಂ ತಲೆನೋರ್ಪ್ಪಮನಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮುಗುಳ್ನು ಬರಸೆಳೆದು ನೊಸಲತೊರೆಯೆ ಬಗಿದಪ್ಪಿ ಮೊಗಮಂ ನೋಡಿ ಮುದ್ದುಗೆಯ್ದು ||

ಕಂ|| ಎನ್ನಾಳ್ದನ ಸತ್ಯಂ ಗೆಲೆ |
ನಿನ್ನಸುವಂ ಭಕ್ತಶಿಶುಗೆ ಕುಡು ಚಿಂತೆಯದೇಂ ||
ಕೆನ್ನಸುವೆ ಪಾರ್ವತೀಪತಿ |
ಪನ್ನಗಿಸಭ್ರಮರಲೀಲೆದಳೆ ತಳರೆಂದಳ್ || ೪೦

ಈಸತ್ಯವಚನಮೀಸಯ |
ಮೀಸದ್ಗುಣಮೀವಿವೇಕಮೀಸಕಳಕಳೋ ||
ದ್ಯಾಸತೆಯಿದಾಘನಧೃತಿವಿ |
ನ್ಯಾಸಂ ಮತ್ತೊನ್ನುಗಲ್ಲದನ್ಯರೊಳೊಳವೇ || ೪೧

ವ|| ಎಂದು ಕೆಲದೊಳಿದ್ದರ್ಕಳದಿಯರೊಳ್ಪೊಗಳುತ್ತಿರ್ಪ್ಪಿನಮಲ್ಲಿಂ ಬೀಳ್ಕೊಂಡು ಧೃತಿಧರಾಧರಂ ರಾಜವೀಥಿಗೇಳ್ತಂದು ಸಚಿವವೃತ್ತಮುಂ ದೂತವಚನದಿನರಿದು ಜನಕನಿರ್ಪ್ಪೆಡೆಗೇಳ್ತಂದೀವೃತ್ತಾಂತಮೆಲ್ಲಮಂ ಪೇಳಲೊಡನೆ ಕೇಳ್ದು ಸಕೌತುಕಾಂತರಂಗಂ ಸಂದಾಯಿಯೆಂಬ ಹಡಪವಳನಾನನಮಂ ಪಿಂದಿರುಗಿ ನಿರೀಕ್ಷಿಸಿ ||

ಕಂ|| ಹರಚರಣಭಕ್ತಿರಸಭಾ |
ಸುರಹೃದಯಾಂಬುರುಹನಾನರೇಶ್ವರನವನಂ ||
ಕರೆದೆಲವೊ ಪೋಗು ಕುವರನ |
ಶಿರಮಂ ಮಿಗೆ ತಪ್ಪುದೆಂದು ಬೆಸಸಿದನಾಗಳ್ || ೪೨

ವೃ|| ಜೀಯ ಮಹಾಪ್ರಸಾದಮೆನುತಂದೊಡನೇಳ್ತರೆ ಖಡ್ಗಮಾಂತು ಸಂ |
ದಾಯಿಯೆನಿಪ್ಪಭೃತ್ಯನವನೀಶಸಭಾಂತರದತ್ತಣಿಂ ಸರೋ ||
ಜಾಯತನೇತ್ರನೊಲ್ದು ಪೊರಮಟ್ಟಗಟಿಂ ನಡೆಗೊಂಡನಲ್ಲಿಪ್ಪು |
ವ್ವಾಯುಧವೈರಯಂಘ್ರಿಗಳನಾಂತೆರ್ದಯೊಳ್ಮಿಗೆ ರಾಜಶೇಖರಂ || ೪೩

ವ|| ಅಂತು ರಾಜವೀಥಿಯೊಳೈತಪ್ಪಿರ್ಕಮಾಪೌರಜನಂ ನಿರೀಕ್ಷಿಸಿ

ವೃ|| ಚತುರಂಭೋನಿಧಿಮುಟ್ಟಿದುರ್ವರೆಗಧೀಶತ್ವಂಗಡಾ ವಿಶ್ವವಿ |
ಶ್ರುತಸಾಮಂತನರೇಂದ್ರಮೌಳಿಘಟಿತಾಂಘ್ರಿತ್ವಂಗಡಾ ಯೌವನಾ ||
ನ್ವಿತಸೌಂದರ್ಯತನುತ್ವಮುಂಗಡ ಒಳಿಕ್ಕಂತಾದೊಡಂ ತನ್ನ |
ಜೀವಿತಮಾವಂಗಡ ನನ್ನಿಗೀಕುವರನಂ ಪೋಲ್ವನ್ನರಾಧಾತ್ರಿಯೊಳ್ || ೪೪

ಕಂ|| ಅಕ್ಕಟ ಘಸತ್ಯೇಂದ್ರಂಗಿದು |
ತಕ್ಕುದೆ ನುಡಿದಂಡನೊಳವೆ ಸಚಿವಸುತಾಶ್ವಂ ||
ಚೆಕ್ಕನೆ ನುಗುವಂ ಮಡಿಪಿದೊ |
ಡಿಕ್ಕಿದಪಂಗಡ ಕುಮಾರಕುಸುಮಾಯುಧನಂ || ೪೫

ವ|| ಎನುತ್ತಿರೆಯಿರೆ ಮತ್ತೆ ಕೆಲಂಬರಬಲೆಯನ್ನೆರೆದು

ವೃ|| ಬಿಸುಸುಯ್ದುಂಬಕದಂಬುವಂ ಮಿಡಿದು ಹಾಯೆಂದಳ್ತು ಕೈನೀಡಿ ತೆ |
ಳ್ವಸಿರಂ ಮೋಣ್ಪೊಸೆದೆಲ್ಲಿಬಂದುದೊ ತುರಂಗಂ ಕೇಳಿಯೋಕಾದುದೀ ||
ಶಿಶುವಿಂತೇಕಳಿದತ್ತೊ ದೂರಿದಳದೇತಕ್ಕೀಕೆ ವೋವೋವೊ ಕೋ |
ಪಿಸಿ ಚೋಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ || ೪೬

ವ|| ಎಂದೆಂದಳಲ್ದು ಬಳಲ್ದು ಮರುಗುತ್ತಿರ್ಪನ್ನೆಗಂ

ವೃ|| ನಡೆತಂದಂ ಧೃತಿಮೇರು ಸತ್ಯನಿಧಿ ಸಾಹಿತ್ಯಾಬ್ಧಿಸೂರ್ಯಂ ಮಹಾ |
ಮೃಡಭಕ್ತಿಪ್ರಮದಾಮನೋರಮಣನಾಶ್ರೀಮಂತ್ರಲಕ್ಷ್ಮಾಂಕನೊ ||
ಳ್ಪಡರ್ದುದ್ಯಾನಧರಿತ್ರಿಯಲ್ಲಿಗಘಟಿಂ ಪದ್ಮಾಸನಂಗೊಂಡು ನೇ |
ರ್ಪಡೆ ಕುಳ್ಳಿರ್ದ್ದಗಜೇಶನಂ ನಿಜಮನಃಪಂಕೇಜದೊಳ್ತಾಳ್ದಿದಂ || ೪೭

ವ|| ಅಂತುತಾಳ್ದಖರ್ವಭಕ್ತಿಯಿಂದೆರಗಿ

ವೃ|| ಪ್ರಮಧಗಣಾನ್ವಿತಂ ವಿಧಿವಿಧುಪ್ರಮುಖಾಮರಸಂಕುಳಾವೃತಂ |
ಹಿಮಗಿರಿಕನ್ಯಕಾಸಹಿತನಂ ಗಜಮರ್ದನನಂಪುರಪ್ರದೇ ||
ಶಮನಡರ್ದಲ್ಲಿ ನೋಡುತಿರೆ ರಾಜಕುಮಾರಕನೋಜೆಯಿಂದೆ ಖ |
ಡ್ಗಮನಿರದೆತ್ತಿ ಮೇಣ್ಗುಡಿದು ಕಿಂಕರಕಮುಚ್ಚರ್ಲೊಡಹ್ಚರ್ತಿರ್ಪ್ಪನಂ || ೪೮

ಕಂ|| ಕರಪೊಸತು ಜೀಯಪಂಚಾ |
ಕ್ಷರಮಂ ನೀಂ ಮರೆದು ಮಡಿಯಲುಜ್ಜುಗಿಪ್ಪದಿದೆಂ ||
ದಿರದನುಜರಸೆಸೆ ಮೊಗದೊ |
ಳ್ದರಹಸನಂ ಮೊಳೆಯೆ ಮಂತ್ರಲಕ್ಷ್ಮಂ ನುಡಿದಂ || ೪೯

ಎನಗಾಪ್ತನಲ್ತೆ ಮರೆದಿರೆ |
ನೆನೆಯಿಸಿದ್ದೈ ಛಾವು ನಿನಗದಾರ್ಪ್ಪರಿ ಪೇಳೆಂ ||
ದೆನೆ ಕೌತುಕವೊಗೆತರೆ ನೃಪ |
ತನಯನನಾಕಿಂಕರಂ ಕರಂ ಬೆಸಗೊಂಡಂ || ೫೦

ವೃ|| ಸರಸನೆ ದೇವ ಕಿಂಕರನೊಳಿಂತಿದರೊಂದಿರವಿಂತುಟೆಂದು ಬಿ |
ತ್ತರಿಪುದು ಜೀವನಿಷ್ಕ್ರಮಣದೊಳ್ಶಿವಮಂತ್ರಜಪಂ ಪ್ರಶಸ್ತಮೆಂ ||
ದೊರೆವಹಿತೋಕ್ತಿಯೇ ಪುಸಿಯೊ ಪೇಳೆನೆ ನಿನ್ನಯ ಭೃತ್ಯವೃತ್ತಿ ಭೂ |
ವರನ ನಿಜಾಜ್ಞೆ ಕಟ್ಟಪುದೆನುತ್ತುಳಿದೆಂಗಡ ದಿವ್ಯಮಂತ್ರಮಂ || ೫೧

ವ|| ಎಂದಾರಾಜಕುಮಾರನ ಗಂಭೀರೋಕ್ತಿಯನಾಕಿಂಕರನಾಕರ್ಣಿಸಿ

ಕಂ|| ಇದುಚಿತ್ರಂ ನೀಂ ಜಪಿಸಿದೊ |
ಡಿದರಿಂದೆನ್ನಾಳ್ತನಂ ಜನಾಧಿಪನಾಜ್ಞಾ ||
ಪದಮುಳಿಗುಮೆಂಬಬಗೆ ಬಗೆ |
ಗೊದವಿದಸಂದೆಗಮನಿಳಿಪಿಳಾಧಿಪತಿಳಕಾ || ೫೨

ವೃ|| ಇಂತೆಂದೋರಂತೆ ಲೆಂಕಂ ಬೆಸಗೊಳೆ ಕಮಳಾಕಾಂತನುಂ ಬೊಮ್ಮನುಂ ತಾ
ಮೆಂತುಂ ವೇದಂಗಳುಂ ಕಾಣದಪರಶಿವನಂ ತೋರ್ಪ ಸಾಮರ್ಥ್ಯಮುಂ ತಾ ||
ಳ್ದಂತಿಂತೆಂಬೂಹೆಯುಂ ಪೂರಿದನಿರುಪಮಸನ್ಮಂತ್ರಮುಂ ಪೇಳಲಾಂ ಖ |
ಡ್ಗಂ ತಾಂ ಪೂಮಾಲೆಯಾದಪ್ಪುದು ಪರಿಯದೆ ಪೋದಪ್ಪುದೆಂದಂ ಕುಮಾರಂ ||

ವ|| ಆದುದರಿಂ ನರಸಾಜ್ಞೆಯುಂ ನಿನ್ನಭೃತ್ಯತೆಯುಂ ಪೊಡಸೆ ಕೆಡುಗುಮೆನ ಲೊಡಂ ಕೇಳ್ದು ಕೌತುಕಂದಾಳ್ದು

ಕಂ|| ಅದೊಡಮೆನ್ನಯ ಭೃತ್ಯತೆ |
ಪೋದೊಡಮೆನ್ನರಸನಾಜ್ಞೆಯಳಿಗೊಡಮೋಂ ನೀಂ ||
ನೋದದೆ ಮಂತ್ರಮನಳಿದೊಡೆ |
ಮಹಾದೇವಸೂಕ್ಷ್ಮಕೃತ್ಯವೃತ್ತಿಯೋಂ ಸಮನಿಕುಮೋ || ೨೯೪

ವ|| ಎನೆ ಮುಗುಳ್ನಗೆನಕ್ಕು

ಕಂ|| ಒಂದಿಸಿತುಪ್ಪೊಳ್ತು ಸ್ಮರಿಸಿ |
ನಂದನಾಯಿ ನಿರೀಕ್ಷಿಸುತ್ತುಮಿರು ತೋರ್ದ್ದನಿಸೆ ||
ಸ್ನಂದಮನೆನುತ್ತೆ ಪೂಣ್ಮುಸಿ |
ದಂದರಸಂ ಖಡ್ಗಮುಂ ಕೊರಲ್ಗೊಂದಿಸಿದಂ || ೨೯೫

ವೃ|| ಎಲೆಎಲೆ ದೇವದೇವ ಕುವರಂ ಕೊರಲಂ ಕೊರೆದಪ್ಪನಯ್ಯೋ ನಿ |
ಷ್ಕಲಕರುಣಾಸಮುದ್ರ ಶಶಿಶೇಖರ ಶಂಕರ ಕಾವುದೀವುದು ||
ಜ್ವ ಸುಖಸುಂ ನಮಂತೆನೆ ಕೃಪಾಕರೆ ಶಾಂಕರಿ ಮುಂದೆ ಕಜ್ಜಮುಂ |
ಜೆಳೆಗಿರಿಜಾತೆ ಸೈರಿಪುದಪೇಕ್ಷಿಪುದದ್ಭುತಭಕ್ತಿಯುಕ್ತರಂ || ೨೯೬

ವ|| ಎಂದಂಬರದೊಳ್ತ್ರ್ಯಂಬಕನಂಬಿಕೆಯನೊಡಂಬಡಿಸುತ್ತುಮಿರೆಯಿರೆ

ವೃ|| ನಡೆನೋಡುತ್ತಿರೆ ಕಿಂಕರಂ ಮುಗಿದ ಕಯ್ಯಂ ಪೊತ್ತು ಚಿತ್ತಾಂತದೊ |
ಳ್ಮೃಡನಂ ಬಾಸಿಸಿ ಖಡ್ಗಮುಂ ಪಿಡಿದು ಸಾಹಜ್ಜ್ಯತ್ತಾತ್ಮಕಂಠಕ್ಕೆ ಕೈ ||
ಗುಡೆ ಸಾಹಸಂ ಘರಿಲೆಂಬನುಂ ಕೊರೆದಿಳಾಧೀಶಂ ಮಹಾಮಂತ್ರಮುಂ |
ಬಿಡದೋರಂತೊದರುತ್ತುಮಿರ್ಪ್ಪ ಶಿರಮಂ ತಾಳ್ದಂ ಕರಾಂಭೋಜದಿಂ || ೨೯೭

ಕಂ|| ಪೊಸತೊಂದುತೇಜಮುದಾರಂ |
ಜಿಸೆ ಧಳಧಳಿಸುತ್ತೆ ನೋಡಲಣ್ಮದೆ ಭೃತ್ಯಂ ||
ಕುಸಿದೆರಗಿ ನಿಂದು ಮಿಗೆ ಕೀ |
ರ್ತಿಸುತಿರೆ ತತ್ಕರಕೆ ನೀಡಿದಂ ನಿಜಶಿರಮಂ || ೫೮

ವೃ|| ಅರಮುಗನೆಂದಪ್ಪೋಲ್ಕೆಗಳ್ದ ಕಜ್ಜಮ ನೀಕ್ಷಿಸಿ ಚೋದ್ಯವಟ್ಟು ಕಿಂ |
ಕರನೆರಗುತ್ತೆ ಮತ್ತಮವನ ನಲ್ನುಡಿ ತಾನುಪದೇಶಮಾಗೆ ತ ||
ತ್ಸುರುಚಿರಮೂರ್ತಿ ತನ್ನ ಬಗೆಯೊಳ್ನಲಿಗೊಂಡಿರೆ ಕೀಟಭೃಂಗದಂ |
ತಿರೆ ಶಿವಮಂತ್ರಸಿದ್ಧನೆನಿಸಿರ್ದನದಂತೆ ಮಹಾತ್ಮಸಂಗಮಂ || ೫೯

ವಿಲಸತ್ಪಂಚಾಕ್ಷರೀಸಲ್ಲಲಿತತರಲತಾಕಂದಮೋ ಭಕ್ತಿವಲ್ಲೀ |
ಫಲಮೋ ನಿರ್ವಾಣಲಕ್ಷ್ಮೀಕಲಿತಕಮಲಮೋ ಸತ್ಯದುಗ್ಧಾಬ್ಧಿಪೂರ್ಣಾರ್ಕ ||
ಮಲಿನಪ್ರಾಲೇಯರುಙ್ಮಂಡಳಮೊ ಮಹಿತಚಿದ್ವ್ಯೋಮದಾದರ್ಶಮೋ ಮಂ |
ಜುಲ ತೇಜಃಪಿಂಡಮೋ ಪೇಳೆನೆ ಮೆರೆದುದು ತದ್ರಾಜಪುತ್ರೋತ್ತಮಾಂಗಂ|| ೬೦

ವ|| ಅಂತುಮಲ್ಲದೆಯುಂ

ವೃ|| ಅದುಗಗನಂಬೊಲಬ್ಜಮಧುರಂ ಮಧುರಂಜಿತನಂದನಂಬೊಲ |
ಭ್ಯುದಿತರಸಾಲಸಸ್ಮಿತಸಮುದ್ಗಮಮುದ್ಗಮದಂತೆ ಸದ್ರವಾ ||
ಸ್ಪದಮಮೃತಾಬ್ಧಿಯಂತೆ ಸರದಬ್ಧಿಪರಾಜಿ ವಿರಾಜಿಪ್ಪೋಲ್ನಿದಾ |
ಘದನವವಿದ್ರುಮಾಧರದಳಾಶ್ರಿತಮಾಶ್ರಿತದಂತೆ ಸಂಭೃತಂ || ೬೧

ವ|| ಅಂತೆಸೆವಶಿರೋಬ್ಜಮಂ ಕರಾಬ್ಜದೊಳ್ಬಿಜಯಂಗೈಸಿಕೊಂಡು ಸೂ
ರ್ಯವೀಥಿಯೊಳಮಂ ತಳ್ವದೈತರುತ್ತುಮಿರೆ ವಿರೆ

ಕಂ|| ಅಮರ್ದಿನೊಳಕ್ಕಿದಕಮಳಮೊ |
ವಿಮಳಸುಧಾಬ್ಧಿಯೊಳ್ಪುಟ್ಟಿದಮೃತದ್ಯುತಿಬಿಂ||
ಬಮೊ ಪೇಳೆನೆ ಮೆರೆದುದು ಹಸ |
ನಮಯೂಖಾಮೃತಮುಖಂ ನರೇಂದ್ರಾತ್ಮಜನಾ || ೬೨

ವೃ|| ಪುರನಾರೀಜನಮೀಕ್ಷಿಸುತ್ತೆ ಮರುಗುತ್ತಿರ್ಪನ್ನೆಗಂ ಕಾಣುತ
ಚ್ಚರಿಯೆಂದಲ್ಲಿ ಬುಧರ್ಕಳೊಲ್ದು ಪೊಗಳುತ್ತಿರ್ಪನ್ನೆಗಂ ಶೈವಭ ||
ಕ್ತರದೆತ್ತಂ ನೆರೆದ... ...ಜಯಯೆನುತ್ತಿರ್ಪನ್ನೆಗಂ ತಂದು ಕಿಂ
ಕರನಾಮಸ್ತಕಮಂ ಕರಾಂಬುಜದೊಳಿತ್ತಂ ಚೋಳಭೂಪಾಲನಾ || ೬೧

ವ|| ಆಗಳ್

ವೃ|| ಕಮಳದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂ |
ಜಿಮುಯುತಫಾಲಮಾಲಲಿತ ಕುಂಡಲಮಂಡಿತಗಂಡಮಂಡಳಂ ||
ವಿಮಳರದದ್ಯುತಿಸ್ಫುಟರದಚ್ಛದಮುದ್ಗತಮಂದಹಾಸವಿ |
ಭ್ರಮಮುರುಮಂತ್ರನಾದಸಹಿತಂ ಶಿರಮೊಪ್ಪಿದುದಾಕುಮಾರನಾ || ೬೧

ವ|| ಅಂತೊಪ್ಪುತ್ತುಮಿರ್ಪನಿಜತನಯನುತ್ತಮಾಂಗಮನುದಾತ್ತಚಿತ್ತ
ನಿರೀಕ್ಷಿಸುತ್ತುಂ

ಕಂ|| ಮೃಡಪಂಚವರ್ಣಮಂತ್ರಮ |
ನಡಿಗಡಿಗಡೆವಿಡದೆ ನುಡಿವಬಗೆಗಂಡರಸಂ ||
ಪಡೆದಚ್ಚರಿಯಂ ಶಿವಶಿವ |
ಕಡುಪೊಸತಿಳಿಗಿಂತಿದೆಂದು ವಿಸ್ಮಿತನಾದಂ || ೬

ನುತಸೌರಭಾಸ್ಪದಶ್ರೀ |
ಯುತಮುದಿತಗುಣಾಂಕಮಖಿಳಸಾರಂ ಭುವನೋ ||
ನ್ನತಮೆನಿಪಸುತಶಿರೋಬ್ಜದೊ |
ಳತಿರತಿವಡೆದತ್ತು ಪಂಚವರ್ಣಭ್ರಮರಂ || ೬

ವ|| ಎಂದು ಕೆಲದೊಳಿರ್ದವೃದ್ಧರಾಜನ್ಯಕದೊಳ್ಪೊಗಳ್ದು ಮಗು
ನಿಜಾನುಚರನ ವದನಾರವಿಂದಮಂ ನೀಡುಂನೋಡಿ

ಕಂ|| ಎಂತು ಪರಿದಿತ್ತಸೀಕುವ |
ರಂ ತಡೆಯದೆ ಮಂತ್ರಸಹಿತಮೀಶಿರಮನದೆಂ ||
ತೆಂತುಸಿರ್ದನೆಲವೊ ಮುಂ ಪೇ |
ಳ್ನೀಂ ತಳ್ವದೆನುತ್ತೆ ಭೂವರಂ ಬೆಸಗೊಂಡಂ || ೬

ವ|| ಆಗಳಾತನಾಯುವರಾಜನೆಂದುದುಮಂ ತಾನೆಂದುದುಮನಿನಿಸುಳಿಯ
ದೆಲ್ಲಮಂ ಪೇಳ್ದನಂತರಂ

ವೃ|| ಅದನೇವೇಳ್ವುದೊ ಭೃತ್ಯಮುಖ್ಯನಳವಂ ತನ್ಮೂರ್ತಿಯಂ ಜಾನಿಸು
ತ್ತದರಿಂ ಯೋಗಿ ಮಹೇಶನಂ ನೆನೆದು ತಾನಾದಂತಿರಾವೇಶಮಂ ||
ಗಡೊಳೆತ್ತಂ ಬಿಡೆತೀವೆ ನಿಷ್ಠೆ ಮಿಗೆ ನೋಡಿಂತೆಂದು ಖಡ್ಗಾಗ್ರದಿಂ |
ದದಟಿಂಮೋಣ್ಕೊರೆದಿತ್ತನಾತ್ಮಶಿರಮಂ ಸನ್ಮಂತ್ರಸಂಯುಕ್ತಮಂ || ೧೮

ವ|| ಅಂತಿತ್ತಾಗಳಾಶಿರಮನಾನರೇಂದ್ರಂ ನಡೆನೋಡಿ ಪಾಮುಕರದೊಳ್ಪಿಡಿದು

ಕಂ|| ಸುಳಿಪಲ್ಕೆರೆ ಪುರುಗುತ್ತಿರೆ |
ಪಿಳಿಸನ್ಮಂತ್ರಮನೆ ಜಪಿಪತನ್ಮಸ್ತಕಮಂ ||
ಸಲಿನಲಿದು ನೋಡಿ ನರಪತಿ |
ತಿಲಕಂ ನಿಜಭೃತ್ಯಕೃತ್ಯಮಿದು ಪೊಸತೆಂದಂ || ೧೯

ವ|| ಆಗಳ್

ಕಂ|| ಪರಶರಣಸಂಗಮೇನಂ |
ದೊರಕೊಳಿಸದೊ ಪಿಪ್ರಳನುಪಿಮೆಯಂ ಶಿವಶಿವ ಭೂ ||
ವರನಣುಗನ ಸಂಗತಿಯಿಂ |
ದೊರೆದುದಿವಂಗವನನ್ನೋಲ್ಮಹಾಮಂತ್ರಜಪಂ || ೨೦

ಮೊದಲಳಿದಮಂತ್ರಪಂಗೇ |
ಪಿದು ದೊರೆದುದೆ ಪರಮಮಂತ್ರಮೀಭೃತ್ಯಂಗಾ ||
ದುದು ಒಳಿಯಿಸಳಿದವಂಗಂ |
ತದರಿಂ ಘನಮಂತ್ರಿ ಬಗೆವೊಡೀಭಟನಲ್ತೇ || ೨೧

ವ|| ಎಂದನೇಕಸುಜನಜನಂ ನುತಿಸುತ್ತುಮಿರೆಯಿರೆ

ಕಂ|| ತಿರುಕೊಳಪಿನಾಚಿ ನಿನ್ನಯ |
ವರಸುತಶಿರವೊಂದಕೆರಡುಶಿರಮಿದೆ ನೋಡೆಂ ||
ದಿರಿಸಿದನವನಿಪಕುಲಶೇ |
ಖರನುರೆ ಶಂಕರನ ಶಿರದ ಕೆಲದೊಳ್ಸಲದೊಳ್ || ೨೨

ತಳೆವಸುಧೆ ಪೊಳೆವಸುಲಿಪ |
ಲ್ವೆಳಗದು ಸಂಜೀವನಾಖ್ಯಮಂತ್ರಂ ಜಪಿಪ ||
ಗ್ಗಳಮಂತ್ರನಾಗೆ ಶಿಶುಶಿರ |
ದೊಳೆ ಜೀವಂಬಡೆದುದಂಶಿರೋದ್ವಯಮಾಗಳ್ || ೭

ಎರಡುಂಕಿವಿಗಳೊಳೆರಗು |
ಚ್ಚರಿಪನುಪಮಮಂತ್ರಮಾಸ್ಯವಿವರದೆ ಪೊರಪಾ ||
ಯ್ದಿರವನನುಕರಿಸಿ ತನ್ನಂ |
ತ್ರರವಂಬಡೆದಿರ್ದುದಾಶಿರಂ ಶಂಕರನಾ || ೭

ವ|| ಆಗಳಾತತ್ತ್ವಭಾವಮನಪೆಳರುಂ ಪೊಗಳುತ್ತುಮಿರ್ಪಿನಂ ತಿರುಕೊ
ಳನಾಚಿ ಸಂದಾಯಿಯ ಕಬಂಧದ ಕರತಳದಖಡ್ಗಮಂ ಕಳೆದುಕೊಂಡು

ವೃ|| ಕೇಳೆಲೆ ಚೋಳಭೂಪತಿ ಮದೀಯತನೂಜನ ಮಸ್ತಕಕ್ಕೆ ಲೋ |
ಕಾಳಿಯನೆಲ್ಲ ಪಾಲಿಪ ಕುಮಾರನ ಮಸ್ತಕಮಿತ್ತೆಯಲ್ತೆ ಸಿ ||
ನ್ನಾಳೆಸಿಪಿದ್ದರ್ಪಕೆ ಮಚ್ಛಿರಮೀ ವಳೆ ನೋಳ್ಪನೆಂದವ |
ಳ್ಬಾಳನಮರ್ಚೆ ಗೋರ್ಗ್ಗಮ ಸಾಚ್ಛಿದಳಾತ್ಮಸಮಂಕ್ರಿಶೀರ್ಷಮಂ ||೭

ವ|| ಆಗಳ್

ಕಂ|| ತಿರುಕೊಳನಾಚಿಯೆಸಗಿದ |
ಪರಿಗಚ್ಚರಿವಟ್ಟು ನೃಪತಿ ಸಚಿವನ ಶಿರಮಂ ||
ತರಿಸಿ ಒಳಿಯಿರಿಸಿ ನೋಳ್ಪ |
ಮಿರದದುಮುಖವಾಂಕಮಂತ್ರಮಾಂತುದು ಪದಪಿಂ || ೭೬

ಪಂಚತ್ವಮನಾನಬೆಯುಂ |
ಪಂಚತ್ವಮನಾಂತು ಪರಮಪಂಚಾಕ್ಷರಮಂ ||
ಪಂಚಮೆನೆ ಬಿಪಿಸತಲೆಗಳ |
ಪಂಚಮುಖರ್ಭಾಸಿ ಚೋಳನೃಪನೀಕ್ಷಿಸಿದಂ || ೭೬

ವ|| ಅಂತೀಕ್ಷಿಸುತ್ತುಮಾಪಂಚಶಿರಃಪಂಚವರ್ಣಂಗಳ್ಗಿನ್ನ ಶಿರಃಪ್ರಣವದಿ
ಸಳಂಕರಿಪೆನೆಂದುತ್ಸಾಹಿಸಿ ಶಿತಾಸಿಯುಂ ಕೊರಲ್ಗಮುರ್ಚಿ ಕೊರೆದು

ಕಂ|| ನರನಾಥಂ ಮಸ್ತಕಮಂ |
ಶಿರೋಧಿಯಿಂದಿಳಿಸಿ ವಾಮಕರದೊಳ್ಪಸುಸಂ ||
ಹರನ ಪೆಸರೆನಿಪಪಂಚಾ |
ಕ್ಷರಮಂ ಜಪಿಸಂತೆ ಮಾಡಿ ಮಡಗಿದನಾಗಳ್ || ೭೮

ಮರಕತಕುಂಡಳದ್ಯುತಿ ಸುವರ್ಣಕಿರೀಟಮಯೂಖಮುಕ್ತಾಭಾ |
ಸುರತರತಾರಕಾಂಶು ರದನಚ್ಛದದೀಧಿತಿ ಸಂಚಯಾಸಬಂ ||
ಧುರರುಚಿ ತಳ್ತು ರಂಜಿಸೆ ತದೀಯಶಿರಂ ಸಿರಪಂಚವರ್ಣಪಂ |
ಬರಮೆನೆ ಪಂಚವರ್ಣಶುಕಮೊಪ್ಪಿದುದಲ್ಲಿ ಚಿದಂಗನಾಪ್ರಿಯಂ || ೭೯

ವ|| ಅನಂತರಮಾಮಿತವಚನನಾತನಾಣಕ್ಕೇಳ್ತಂದವಂಬಿರ ಶಿರಂಗಳಿ
ವಂ ನೋಡಿ

ಉ|| ಶಂಕರನಂ ಕರಂ ತುಳಿದುಪೆನ್ನ ಕುರಂಗಮುಖೀಶಪುತ್ರನಂ |
ಸೋಂಕಿದುದಲ್ತೆ ನೆನ್ನೆರನೆ ಮಾತಿನಮಾಲೆಯು ದೂರದಕ್ಕಟಾ ||
ಶಂಕಿಸದೆಲ್ಲರಂತಳಿನರಾಸಿವರಿಂ ಪೊದಲ್ಕೆದಿದಾವೆನೆ |
ನ್ನಿಂ ಕಡುಗಾಂಪನಾವನೊ ಧರಿತ್ರಿಯೊಳೆಂದು ಕರಾಳಖಡ್ಗಮಂ || ೮೦

ಕಂ|| ನಳಿನಭವಸಂಸ್ತ್ರಿಗೆರಗು |
ತ್ತೊಳಗೆ ಕೊರಲ್ಗೆಱದೆ ಸಾರ್ಚಿ ಘಂಲಿಸಿ ಕೊರೆದು ||
ಜ್ವಳಪಂಚಾಕ್ಷರಜಪಮಂ |
ತಳೆವಂತಿರೆ ಮಾಡಿ ಮಡಗಿದಂ ನಿಜಶಿರಮಂ || ೮೧

ಉ|| ಅರಸಿ ನಿಜೇಶ್ವರಾತ್ಮಜಮುಖರ್ಗಲೆಗೊಟ್ಟರೆನಿಪ್ಪವಾರ್ತೆಯಂ |
ತರುಣಿಯರಿಂದೆ ಕೇಳ್ದು ತರುಣೇಂದುಧರಾಂಘ್ರಿಪಯೋಜಪೂಜಯಂ ||
ವಿರಚಿಸಿ ರತ್ನಭೂಷಣರುಚಿಪ್ರಸರಂ ವದನೇಂದುಕಾಂತಿ ಸೈ |
ವರಿಯೆ ಕುಮಾರಕಾಂತೆಯೊಡನೇಳ್ತರೆ ಬಂದಳುದಗ್ರವೃತ್ತಿಯಿಂ || ೮೨

ವ|| ಆಗಳ್ಸಚಿವಸತಿಯುಂ ಮಿತವಚನಕಾಂತೆಯುಮೊಡನೇಳ್ತರೆ ಸಭಾ
ಸ್ಥಳಕ್ಕೇಳ್ತಂದು ನಿಂದು ನೀಡುಂನೋಳ್ಪನ್ನೆಗಂ

ವೃ|| ಹರಿನೀಲಸ್ಫಟಿಕಕುಟ್ಟಿಮಸ್ಥಳಸರಸಾಸ್ಥಾನಸ್ಥಿತಂಗಳ್ಮಹೇ |
ಶ್ವರನಿಷ್ಠಾಮಿಹಿರಪ್ರಭಾವಿಕಸಿತಂಗಳ್ಕೈವಷಡ್ವರ್ಣಷ ||
ಟ್ಚರಣಧ್ಯಾನಮನೋಹರಂಗಳಮಳಶ್ರೀಮಂಜುಳಂಗಳ್ಮಹೇ |
ಶ್ವರಮುಖ್ಯಸ್ಫುರದುತ್ತಮಾಂಗಕಮಳಂಗಳ್ಕಣ್ಗಾದೇಂತೋರ್ದ್ದುವೋ || ೮೩

ವ|| ಅಂತೆಸೆವಾಶಿರಂಗಳಂ ನಿರೀಕ್ಷಿಸಿ

ವೃ|| ಮೃದುರವವೊಂದೆ ಶಂಕರಶಿರಂ ಸಚಿವಾಸ್ಯಮಮಳ್ಸರೋಜಕಿಂ |
ತಿದು ಸುತಮಸ್ತಕಂ ಗುಣಯುತಂ ಚತುರಂ ಚರಶೀರ್ಷಮಾನನಂ ||
ಸುದತಿಯುಪಂಚಮುರ್ವಿಪಮುಖಂ ನಿಗಮಾಂಗವಿಭಾಸಿ ಮಾತೃಕಾ |
ಸ್ಪದಮಿದು ಮಂತ್ರಿಪುತ್ರವದನಂ ಮೆರೆದಪ್ಪುದುದಾತ್ತವೃತ್ತಿಯಿಂ || ೮೪

ವ|| ಎಂದಮೃತಮತಿಮಹಾದೇವಿ ಕೆಲದೊಳಿರ್ದ್ದಲಲನೆಯರೊಳುಸಿರ್ದ್ದ
ವೀರಾವೇಶಮಂ ಕೈಕೊಂಡು ಕರಾಳಕರವಾಳಮಂ ಕರತಳದಿಂದಡಸಿ ಪಿಡಿದಾಗ
ಳಾಸರ್ವಮಂಗಳಾದೇವಿಯುಂ ಸಚಿವಪತ್ನಿಯುಂ ಮಿತವಚನನಂಗನೆಯುಮರಸಿ
ಯಡಿದಳಿರ್ಗ್ಗೆರಗಿ ತಾಮುಮತಿನಿಶಿತಮಾದಖಡ್ಗಂಗಳಂ ಕರಾಗ್ರದೊಳ್ಪಿಡಿದು
ತಮ್ಮತಮ್ಮನಿಯರ ಶಿರಂಗಳಿದಿರೊಳ್ನಿಂದು ಕಳೆಯೇಲಿ ಮೀರ

ವೃ|| ಹರಹರ ಬಣ್ಣಿಪಂಗರಿದು ತತ್ಸತಿಯರ್ಕ್ಕಳ ವೀರವೃತ್ತಿಯುಂ |
ಕರತಳಖಡ್ಗಮುಂ ಜಡಿದು ಚಾಳಿಸಿ ಶೈಲಜೆಯಾಣ್ಮನಂ ನಿಜೇ ||
ಶ್ವರಶಿರಮೆಂ [illegible] ಗಕೆ ಮುಖಾಂಬುಜದರ್ಚನೆಗೆಯ್ಯಲೆಂದು ಬ |
ತ್ತರಿಸನ್ವೊಲಾತ್ಮಕಂಧರಕಮುರ್ಚ್ಚುತೆ ಖಂಡಿಪತತ್ಕ್ಷಣಾರ್ಧದೊಳ್ || ೮೫

ಇಂದುಖಂಡಮಹಿಕುಂಡಳಮುದ್ಯತ್ಸ್ವರ್ಣದಿ ಭಾಳವಿಲೋಚನಂ |
ದಂದಶೂಕಪತಿಹಾರಮುದಾರಸ್ಮೇರಮುಖಂ ದ್ವಿರದಾಜಿನಂ ||
ಸುಂದರಾಂಗಮಸಿತದ್ಯುತಿ ಕಂಠಂ ಕಣ್ಗಿರದೀಯೆ ಬೆಡಂಗನಾ |
ನಂದಿವಾಹನಸಹಂ ನಿಜರೂಪಂ ತೋರಿದನದ್ರಿಸುತಾಧವಂ || ೮೬

ವ|| ಅಗಳ್

ವೃ|| ಮೊಳಗುವದೇವದುಂದುಭಿರವಂ ಮೊಳಗಲ್ಲಿಳಿತರ್ಪ್ಪದೇವಸಂ |
ಕುಳದ ಕಿರೀಟರತ್ನರುಚಿ ಶಕ್ರಶರಾಸನಮಪ್ಸರೋವಧೂವಿಳಸಿತ ||
ಲೋಚನಾಂಶು ಸೆಳೆಮಿಂಚು ನಭಸ್ಸ್ಥಳಮಭ್ರಮಾಗೆ ಕಾ |
ರ್ಮ್ಮಳೆ ಸುರಿವಂತೆ ಸೂಸಿದುದು ಪೆರ್ಮ್ಮಳೆ ದಿವ್ಯತರುಪ್ರಸೂನದಾ || ೮೭
ಮಾರಜನಕಂ ವಿಪುಳಸಾರಸಭವಂದಿವಿಜವಾರವರಸುಂದಹನಸಾರವಿತಸೂಜಂ |
ಧೀರದಿತಿಜಂಪ್ಸುತನೀರಸಿಲಯಂಪೃಥುಸಮೀರನನಘಂಘನಕುಬೇರನನಲಾಕ್ಷಂ||
ವೀರಗಣಮುಂ ಪ್ರಮಥಸಾರನಿವಹಂ ಸಮದವಾರಣಮುಖಂ ನವಮಯೂರ
(ಪತಿವಾಹಂ)
ಸಾರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ಜ್ವಳಪುರಾರಿ ಮೆರೆ
(ದಿರ್ದ್ದಂ || ೮೮

ವ|| ಅಂತು ಮೆರೆದು ನಿಜಕರಾಗ್ರದಿಂ ತತ್ಕರತಳಕರಾಳಖಡ್ಗಮುಂ ಕಳೆದು
ಂಸುಟು

ಂ|| ದರಹಾಸಪ್ರಭೆ ಸೂಸು |
ತ್ತಿರೆ ಕರುಣಾಮೃತದ ತೆರೆಯಿದೆನೆ ಮೊಗದೊಳ್ ||
ಕರನೆರಗಿ ನಿಂದತನ್ನೃಪ |
ನರಸಿಗೆನಿನ್ನಿಷ್ಟಮಾವುದದನೆರೆಯೆಂದಂ || ೮೯
ಎನಲೊಡನೆ ದೇವ ಪಂಚಾ |
ನನ ಮುನ್ನಳಿದಂಗೆ ಹರ..ಮುಂ ಕರುಣಿಪುದೆಂ ||
ದೆನೆ ಮುಗುಳ್ದು ಮೆಚ್ಚಿದೆಂ ಬೇ |
ಡೆನುತಿರ್ದ್ದಂ ಭಕ್ತವತ್ಸಲಂ ಕೃಪೆಯಿಂದಂ || ೯೦
ವ|| ಎಂದಭವನನೋಘವಚನಮುಂ ಕೇಳ್ದು

ಂ|| ತಿರುಕೊಳವಿನಾಚಿಗಂ ಶಂ |
ಕರ ಕರುಣಿಪುದಸುವನಾದೊಡೆನೆ ಮೆಚ್ಚಿ ಮಾಹೇ ||
ಶ್ವರನಬಳೆ ನೀನೆಣಿಪುದೀ |
ಶಿರಂಗಳಂ ಕ್ರಮದಿನೆಂದು ಬೆಸಸಿದನಾಗಳ್ || ೯೧

ವ|| ಎನೆ ಮಹಾಪ್ರಸಾದವೆಂದದಂ ಮನದೆಗೊಂಡಾಶಿರಂಗಳಂ ಪಡೆದು ನೋಡಿ

ಕಂ|| ಅರಸಿ ನಿಜಾಂಗುಲಿಯಿಂದೊಂ |
ದೆರಡುಂ ಮೂರೈದೆ ನಾಲ್ಕುಮೈದಾರೇಳೆಂ ||
ದಿರದೆಣಿಪುದುಮಾಗಳೆ ನಿಜ |
ಶಿರಂಗಳೇಳ್ಗಂಗದೊಂದುಗೂಡಿದುವಾಗಳ್ || ೯೨

ಜಯರವಮುಂ ಸುರವರಭೇ |
ರಿಯರವಮುಂ ಶರಣಜನದುಘೋರವಮುಂ ವಿ ||
ಸ್ಮಯಕರಸುರಕುಜಸುಮವೃ |
ಷ್ಟಿಯರವಮುಂ ಪೆಸೆಯೆ ನಭೋದರದೇಂ ಮುಸುಕಿದುದೋ || ೯೩

ವೃ|| ಒಲವರಲಾಟಿಸುತ್ತಿರೆ ಪದಂ ಪದಪಿಂ ನಡೆಸೋಡಲೆಂದು ಕ |
ಣ್ಮಲರೆಳಸುತ್ತೆ ಪಟ್ಟಿರೆ ಕರಂ ಕರಮುರ್ಚಿಸಲೆಂದು ನಾಟಕಂ ||
ನಲಿಯೆ ರಸಜ್ಞೆ ಕೀರ್ತನಲೊಡರ್ಚ್ಚಿರೆ ಪಚ್ಚರಮುಚ್ಚಿಗಂ ಪೊಡ |
ರ್ಚಲರೆ ಸಮಾಸಮಾಸರಿಂದೇನೆಸೆದರ್ದ್ದಿರೊ ಭೂಧವಾದಿಗಳ್ || ೯೪

ವ|| ಅಂತೆಸೆಯುತ್ತುಮಿದ್ದರ್ ಕಟ್ಟೆದಿರೊಳೆಸೆವಿಶ್ವಪ್ರದನೆನಿಪಷ್ಟಮೂರ್ತಿಯ ಪಮಳಸೂರ್ತಿಯ ನಾಸಂದಬಾಷ್ಪಬಿಂದುಮಂಜರೀಮಂಜುಳಾಕ್ಷಿಗಳಿನ ವರಭೀಕ್ಷಿಪಾಗಳ್ ||

ವೃ|| ಜಡೆ ಮುಡಿ ತಾಳ್ದಗಂಗೆ ಪಣೆಗಣ್ಮಣಿಕುಂಡಳಮಿಂದುಲೇಖೆ ಪೆ |
ಣ್ಪಿಡಿದೆಸೆವೈಮೊಗಂ ಕರೆಗೊರಲ್ಬಿಳಿಕೃತ್ತಿ ಮೃಗಾರಿಚರ್ಮದೊ ||
ಳ್ಪಡೆ ತ್ರಿಸುಳಂ ಕರೋಟಿ ದಶಬಾಹು ಪುರಾಂತಕನಕ್ಷಿತಳ್ತಮೆ |
ಲ್ಲಡಿವೊಡಲರ್ಧದದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ || ೯೫

ವ|| ಅಂತಿದಿರೊಳೆಸೆವ ಮದನಮದರದನಿಬದುವಿದಳನವಿಳಾಸಪಂಚಾಸ್ಯನ ನವಂಚಿತಪಂಚಾಕ್ಷರೀಪ್ರಭಾವಪ್ರರ್ಭಾವಲ್ಲಭ ಪ್ರಭಭಾರ್ವಂಬೆರಸುವಾಮಹಾನುಭಾವರ್ಭಕ್ತಿರಸವಿಸರವಿಲುಳಿತಲಲಿತಹೃದಯಾರವಿಂದರಾಗಿ ದಂಡಪ್ರಣಾಮಂಗೆಯ್ದು ನುತಿಸುತ್ತುಮಿರ್ಪಾಗಳ್

ವೃ॥ ಜನತಾಪಾಪಹಪಾದಸೂರ್ಜಿತಕಳಾಪೂರ್ಣಂ ಮನೋಜಾತಿರಂ |
ಜನದಿವ್ಯಾಂಗನಸಂತಕಾಂತನಿದಿರೊಳ್ಕಾಣ್ಬೊಸ್ಟೆ ಸೋಮಂ ಸರೇಂ ||
ದ್ರು ಕಣ್ಣೈದಿಲರಲ್ವುದುಂ ಮುಗಿವುದುಂ ಹಸ್ತಾಬ್ಜಮೇಂ ಚಿತ್ರಮಿಾ |
ತನ ಹೃದ್ವಕ್ತ್ರಸರೋಜವೊಲ್ದಲರ್ದುದಾಶ್ಚರ್ಯಾವಹಂ ಭಾಪಸಲ್ || ೯೬
ವ॥ ಎಂಬಲ್ಲಿ ನೆರೆದ ವಿಬುಧಸ್ತುತಿಸುತ್ತುಮಿರ್ಪನ್ನೆಗಂ ||
ವೃ॥ ಪಿರಿದುತ್ಸಾಹದೆ ನೋಡಿಯುಂ ಗಿರಿಶನಂ ಕೊಂಡಾಡಿಯುಂ ಪಾಡೆಯುಂ |
ಚರಣಾಂಭೋಜಕೆ ಮತ್ತಮತ್ತೆರಗಿಯುಂ ರಾಗಾಕುಳಂ ಚಿತ್ತಮೊಂ ||
ದಿರೆ ಪೂರ್ಣೋತ್ಸವಮೈದಿಯುಂ ತಣಿದುದಿಲ್ಲೀಸಂಬಿನುದ್ಯತ್ಕಳೇ |
ವರವಿಸ್ಫೂರ್ಜಿತಸಾತ್ವಿಕಂ ಗುಣನಿಧಿ ಶ್ರೀಚೋಳಭೂಪಾಲಕಂ || ೯೭
ಕಂ॥ ಶ್ರೀರಾಜಶೇಖರಾಖ್ಯಕು |
ಮಾರಂ ಶಿವಮೌಳಿಮಣಿರುಚಿಪ್ರಸವದಿಸಂ ||
ದಾರಾಜಶೇಖರಾಂಘ್ರಿಸ |
ರೋರುಹಮಂ ಪೂಜೆಗೆಯ್ದು ನುತಿಸಿದನೊಲವಿಂ || ೯೮
ವ॥ ಅದೆಂತೆನೆ ||
ವೃ॥ ಪುರಹರ ಪೂರ್ಣರೂಪ ಪುರುಷೋತ್ತಮವಂದ್ಯ ಪುರಂದರಾರ್ಚ್ಯ ಪು |
ಷ್ಕರಸರಿದುತ್ತಮಾಂಗ ಪರಮೇಶ್ವರ ಪನ್ನಗಭೂಷ ಪಾರ್ವತೀ ||
ವರ ಶರಣಾಗತಪ್ರಕರರಕ್ಷಕ ಶಂಕರ ಶರ್ವರೀಶಶೇ |
ಖರ ಜಯ ದೇವದೇವ ಜಗತೀಧರಮಂದಿರ ಮಂಗಳೋದಯಾ || ೯೯
ವ॥ ಎಂದು ಪೊಗಳ್ದು ಮಗುಳ್ದೆರಗಿ ನಿಂದು ||
ಕಂ॥ ಚರಣಸಖಮಣಿಮುಕುರದೊ |
ಳ್ನರಪತಿ ಮಾಪ್ಪೊಳೆದು ತೋರಿದಂ ಕೈಲಾಸ ||
ಸ್ಥಿರತೆಗಿದಗ್ಗಳಮೆನುತಂ |
ತುರಿಪಂ ಮಿಗೆ ನೆಲಸಿದಂತಿರಾಶಶಿಧರನಾ || ೧೦೦
ವ॥ ಆಗಳ್

ವೃ|| ವಿಳಸನ್ನೇತ್ರಂಗಳಿಂದೀಕ್ಷಿಸಿದನಮಮಸತ್ಪ್ರೇಮಮಂ ಬೀರಿದಂ ಮಂ |
ಜುಳಬಾಹಾಮಂಡಳಂ ತಳ್ತಿರೆ ಮಿಗೆ ಬಿಗಿದೊಲ್ದಪ್ಪಿದಂ ಕಂದ ಬಾರೆಂ ||
ದೆಳಸುತ್ತುಂ ಮತ್ತೆ ಮನ್ಮಂತ್ರದಮಹಿಮೆಯನಿಂತಾವನೈ ತೋರ್ದನುರ್ವೀ |
ತಳದೊಳ್ವೇಳೆಂದು ನಂದೀಶನೊಳೆ ಪೊಗಳ್ದನಾನಂದದಿಂದದ್ರಿಜೇಶಂ || ೧೦೧

ವ|| ಎಂದು ಮತ್ತಮಿರದೆ ||

ಕಂ|| ಸ್ಕಂದನುಪಮನ್ಯುಮುನಿ ಸಾ |
ನಂದಶತಾನಂದಮುರುಘರೀಧರಣೀಭೃ ||
ನ್ನಂದನನಿವರರುವಸ್ಸೈರ್ |
ಪೊಂದಿದಪರತರಷಡಕ್ಷರಾತ್ಮಕರಲ್ತೇ || ೧೦೨

ವ|| ಅಂತುಮಲ್ಲದೆಯುಂ ||

ವೃ|| ಇವನೇಸತ್ಯೇಂದ್ರನಪ್ಪಂ ಬಗೆವೊಡಮಮ ಸತ್ಯೇಂದ್ರಚೋಳೋರ್ವಿಪಂ ಮ|
ತ್ತಿವನೇ ಸನ್ಮಂತ್ರಲಕ್ಷ್ಮಂ ನಿಜದಿನಕರರೆ ಸನ್ಮಂತ್ರಲಕ್ಷ್ಮಂ ಬಳಿಕ್ಕಿಂ ||
ತಿವನೇ ನೋಳ್ಪಾಗಳಾಹಾ ಮಿತವಚನನಿವಂ ತಪ್ಪದೆಂತಪ್ಪೊಡಂ ಕೇ |
ಳಿವನೇ ಸನ್ಮಂತ್ರನಾಥಂಗತಿಹಿತನೆನುತುಂ ಶಂಕರಂ ನಂದಿಗೆಂದಂ || ೧೦೩

ವ|| ಮತ್ತಮಲ್ಲಿ

ವೃ|| ಅಂಬಿಕೆ ಸಂಭ್ರಮಂಮಿಗೆ ಪದಕ್ಕೆರಗಿರ್ದ ನರೇಂದ್ರಕಾಂತೆಯಂ |
ತಾಂ ಬಿಗಿದಪ್ಪಿ ತತ್ಸುತಸತೀಮುಖಗಂ ಕೃಪೆಯಿಂದೆ ನೋಡಿ ಹ ||
ಸ್ತಾಂಬುಜದಿಂದೆ ಮೆಯ್ದಡವಿ ಮೇಣ್ಬರಸುತ್ತಿವರಂತೆ ಶಂಭುವಂ |
ನಂಜದರಾರೆನುತ್ತೆ ಪೊಗಳ್ದಳ್ಕಮಳಾಮುಖಶಕ್ತಿಬೃಂದದೊಳ್ || ೧೦೪

ಕಂ|| ಕರಿಮುಖನಿದು ಪೊಸತೆಂದಂ |
ಶರಜನ್ಮಂ ಚಿತ್ರಮೆಂದನಮರರ್ಪ್ಪೆರಿದ ||
ಚ್ಚರಿಯೆಂದಸ್ಸುರರಮುನಿಗ |
ಳ್ಕರಮರಿದರಿದೆಂದರವರಚರಿತಮನಾಗಳ್ || ೧೦೫

ವ|| ಅಂತು ಸಮಸ್ತಪ್ರಶಸ್ತಪ್ರಮಥರುದ್ರಭಕ್ತಮಹಾಗಣಮಗಣಿತೋತ್ಸವಂ ಮಿಗೆಪೊಗಳುತ್ತುಮಿರೆಯಿರೆ

ವೃ|| ಜವದಿಂದೇಳ್ತಂದುವೀಶಂಬೆಸಸಲೊಡನೆ ಬಾನತ್ತಣಿಂ ಭಾನುಭಾಸು |
ಪ್ರವಿರಾಜದ್ಧರ್ಮಜಂಜತ್ಕಳಶವಿಳಸಿತಂಗಳ್ಮಣಿಶ್ರೇಣಿಮಾಲಾ ||
ನಿವಹಂಗಳ್ಮಂಗಳಾಲಂಕರಣಶತಯುತಂಗಳ್ಪತಾಕಾನ್ವಿತಂಗ |
ಳ್ದಿವಿಜಕ್ಷ್ಮಾಜಪ್ರಸೂನಪ್ರಸರಸರಯುತಂಗಳ್ಮಹಾಪುಷ್ಪಕಂಗಳ್ || ೧೦೬

ವ|| ಅಂತೇಳ್ತಂದಪುಷ್ಪಕಂಗಳೊಳವಂದಿರಂ ಕರುಣೋರ್ಮಿಯಿಂ ಕುಳ್ಳಿರಿಸಿ ಪುಷ್ಪೇಷುದರ್ಪಪ್ರಭಂಜನಂಪ್ರಭಂಜನಾಪ್ತೇಕ್ಷಣನಾಕ್ಷಣಂ ಸಕ್ಷಣಂ ಸಕಲಗಣಂಬೆರಸು ಶೈಲಜಾಸಹಿತಂ ಕೈಲಾಸಾಭಿಮುಖನಾಗಿ ಗಗನಮಂಡಳದೊಳಗಣಿತೋತ್ಸವಂ ಮಿಗೆ ಬರುತ್ತುಮಿರೆಯಿರೆ

ಮಂದಾನಿಲರಗಳೆ|| ಆಸಮಯದೊಳಮರರ್ಜಯಜಯನೆಸೆ | ಭಾಸುರ ಸುರಕುಜದಲರ್ವಳೆ ಭೋರೆನೆ | ಸುರಿಯುತ್ತಿರೆ ಸುತ್ತಿರೆ ಗಣನಿಚಯಂ | ಪಿರಿದೊತ್ತರಿಸುತ್ತಿರೆ ಖಚರಚಯಂ | ಎಡವಕ್ಕದೆ ರಕ್ಕಸವಗೆಯಂ ಬರೆ | ಜಡಜಭವಂ ಬಲವಕ್ಕದೊಳ್ಕೈತರೆ | ಪಿಂದೆಸೆ ಸುಮನೋರಮಣಾದಿಗಳಿರೆ | ಮುಂದೆಸೆ ರಂಭಾವಧು ನರ್ತಿಸುತಿರೆ | ಮುತ್ತಿನಸತ್ತಿಗೆ ತೊಳತೊಳಗುತ್ತಿರೆ | ಸುತ್ತಿ ತನುದ್ಯುತಿ ಧಳಧಳಸುತ್ತಿರೆ | ಕರೆದುವು ಬರುದಿನಕಹಳೆಗಳಾಗಳ್ | ಪರೆದುದು ದುಂದುಭಿರವಮೆಣ್ದೆಸೆಯೊಳ್ | ಪೊಸರನ್ನದ ಚಿನ್ನದ ನಸೆತೋರಣ | ನೆಸೆದಿರ್ದುದು ಗಮನೋತ್ಸವಕಾರಣ | ಮಿಂದಿರೆ ಶಾರದೆಯುಚಾಮರಮಂ | ಮುಂದೆಸೆ ಪಾಳಿಸುತಿರೆ ಸಾಮರವಂ| ಗುಡುತುಂ ನುತಿಸುತ್ತಿರೆ ಸುರಮುನಿಗಳ್| ವೃಷಜಯಜಯಯೆಂದೆಸೆ ಘನಮನುಗಳ್ | ಸುರನದಿ ತೆರೆಮುಸಗದತೆರದಿಂದಂ | ಭರದಿಂ ಸಂದಿಯನೇರುತ್ತಂದಂ | ಮಿಗೆ ಬಂದಾಸ್ಥಾನದೊಳಗಜೇಶಂ | ಸೊಗಯಿಸಿದಂ ಕೈಲಾಸದೊಳೀಶಂ

ವ|| ಮತ್ತಮದುಸಂತತಸಮಧಿಗತಭರ್ಮಕರ್ಮಸಶರ್ಮಪರಿಚಳತ್ಪೃಥುಳತರಶಫರಸಲಿಲಕರಿನಿಕರ ಮಕರಸುಕರಹಿಮಕರಧವಳಮರಾಳಮಂಜುಳಮದ

ಮಧುಕರ ಪ್ರಕರಮಧುರರವಪರಿಗತನಿಜರಜಃಪುಂಜಪಿಂಜರಿತಜಳಕನಕಕಮಳಕು ಮುದಕಲ್ಹಾರವಿಸರಸರಳತರತರಂಗರಂಗದಭಂಗಶೈವಲಲತಾವಿತಾನವಿಳಸಿತವಿತತ ಸ್ವಕೀಯಮಹನೀಯಗಾಂಭೀರ್ಯಪರಿಹಸಿತಸುಧಾಶರಧಿಪುರ ಶ್ರೀಮೇಖಲಾಕಲಿತ ಪರಿಖಾವಲಯವಲಿತಪುರೋಪವನ ಪವನಕಂಪಿತಸರಸರಸಾಲತರುಸಲ್ಲಲಿತಸಮುಲ್ಲ ಸಿತಪಲ್ಲವಪ್ರತಾನ ಪ್ರತಿಬಿಂಬಕದಂಬಪದ್ಮರಾಗಾಯಿತಸ್ಫಟಿಕಮಣಿಮಯ ವಿಶಾಲಸಾಲಾಟ್ಟಾಲಚಾಲಚಾರುತರಚತುರ್ದ್ವಾರಸಾರಸುಗಮನಿಗಮಮಯ ನಭಃಕಟಾಹಘುಂಟಿಜೃಂಭಿತಮಹಾಗೋಪುರಾಗ್ರಕಮನೀಯತಪನೀಯದಂಡ ಮಂಡಿತಸಮುತ್ತುಂಗಪುಂಗವಧ್ವಜರುಚಿರಮಣಿಮುಕುರಮುಖಮುಕುರಾವವ ಲೋಕನಸಂಕಿರಸ್ಥಿಮಿತಹಿಮಕರವಧೂನಿಕರಕೇಕರಪ್ರಸಾದಪರಿವಿಲೀನಪರಿಸರಸ್ಥಿತಲ ಸಿತವಿಶದಶಶಿಮಣಿಪ್ರಾಸಾದಪರಿಗಳಿತಸದಮಳಜಳಪ್ರವಾಹಸಿಸ್ತ್ರಯಾಸಪರಿವರ್ಧಿ ತಾನಲ್ಪಕಲ್ಪತರುಪಙ್ಕ್ತಿಸಂತತದರದಳಿತಪರಿಮಳಭರಿತಕುಸುಮವಿಸರವಿಸರದಮಂ ದಮರಂದರಸಕದಂಬಕರ್ದಮಿತವಿಧುರವಿವೀಧೀಸನಾಥಮುಂ, ಮಹೋಜ್ಜ್ವಳಮ ಹೇಂದ್ರಮಣಿಖಚಿತರುಚಿರಚಿತ ಭರ್ಮನಿರ್ಮಿತನಿಶಾಂತಸಂತಾನಪುರೋಭಾಗಭಾ ಸುರನ್ಮಕ್ತ್ತಮುಕ್ತಾಫಳಪ್ರಕರ ಪರಿಖಚಿತವಿಳಾಸಸೌಧಾಗ್ರಪ್ರತ್ಯಗ್ರರತ್ನಪಂಜರ ಮಂಜುಳಶುಕಶಾರಿಕಾನಿಕುರುಂಬಪಾಠಿತನಿಟಿಲನಯನಲೀಲಾಕಥಾಕಲಾ ಕರ್ಣ ನಕರ್ಣಕೌತುಕಾಂತರಂಗಸಂಗತಪ್ರಮದಪ್ರಮೋದಭರಭರಿತಸಹಾತ್ತ್ವಿಕಾಗಣ್ಯಗ ಣಾಗ್ರಗಣ್ಯಾಸಮುದಯಸಮುಂಚಿತಮುಂ, ಮತ್ತಂ ಕಾಂಚನೋದಂಚಿತಪಾಂಚಾ ಲಿಕಾಪುಂಜರಂಜಿತವಜ್ರಮಯಸ್ತಂಭಸಂಭೃತಪ್ರವಾಳದಂಡಮಂಡಿತಹರಿನ್ಮಣಿವಿತ ರ್ದಿವೇದಿಕಾಪರಿಮಣಿಪ್ರತೋಳಿಕಾ ದ್ವಾರಸವಮಣಿಗ್ರಥಿತಚಾರುತೋರಣಾಂಚಿ ತವೈಡೂರ್ಯಮಣಿಸೋಪಾನವಿಳಸಿತವಿಳಾಸಮಂಟಪಪರಂಪರಾಪರಿಶೋಭಿತಪದ್ಮ ರಾಗ ಮಣಿಮಯ ಕನತ್ಕಳಶಪ್ರಭಾಭಭಾಸುರತರುಣಭಾಸ್ಕರಕಿರಣಪಲ್ಲವಿತಘನ ಗಗನಗಹನಮುಂ, ನಿರುಪಮಾನನಿತ್ಯೈಶ್ವರ್ಯಲಕ್ಷ್ಮೀಲಾಸ್ಯರಂಗಸ್ಥಳಮುಂ, ಷ ಡ್ವರ್ಗದುರ್ಗಮಧ್ವಾಂತವಿಧ್ವಂಸನವಿಧಿಮಾರ್ತಾಂಡಮಂಡಲಮುಂ, ನಿರತಿಶಯಸು ಖಫಲೋದಯಕಲ್ಪಪಾದಪಮುಂ, ಸಮಂಜಸಮುಕ್ತಿರಮಣೀರಮಣೀಯಮುಖ

ಮುಕುರಮುಂ, ನಿಜಸ್ಮರಣಪರಿಣತಜನವಿಪುಳವಿಪತ್ಕದಂಬಜಳದಪಟಳಝಂಝಾಪ್ರ
ಭಂಜನಮುಂ, ಶ್ರುತಿತತಿಕೃತಸ್ತುತಿತರಂಗಿಣೀಸಂಗತಪಾರಾವಾರಮುಂ, ಶರಣಾಗ
ತಜನವ್ರಜವಜ್ರಪಂಜರಮುಂ, ಸಕಲಮಂಗಳಕಳಾಕೇಳೀನಿವಾಸಮುಮೆನಿಸಿ ಪೊಗ
ೞ್ತೆವೆತ್ತು ಪೆಂಪುವಡೆದಕೈಲಾಸಾಖ್ಯಮಹಾಪುರದಂತರ್ವಳಯವಿಳಸಿತ ಶಶಧರಶ
ತಕರಸಹಸ್ರರುಚಿನಿಚಯ ರುಚಿರತರಸಗಲಂಕಾರಸಾರಸರ್ವಸ್ವಸದನ ಮಹಾಸಭಾ
ಮಂಟಪಮಧ್ಯಮಂಜುಳದಿವ್ಯಸಿಂಹಾಸನ ಸವ್ಯಪಾರ್ಶ್ವಸಮುಪಸ್ಥಿತಸರ್ವಮಂಗ
ಳಾಚರಣಾರವಿಂದಸೇವಾವಸರಸಾವಧಾನಯಾನಸಮಾನಸಂಯುತನಿರತಿಶಯ ಸೌಂ
ದರ್ಯ ಮಾಧುರ್ಯ ಸಮಾರೂಢಪ್ರೌಢತಾರುಣ್ಯಲಾವಣ್ಯಪರಿಮಿಳಿತಘನಜ
ಘನಕನಕಘಟಸಮಸಮಸ್ತನಯುಗಳಕೇಶಭರಭಾರಭಾಸುರಭಾರತೀಭಾಗ್ಯವೀ
ಪ್ರಮುಖಲೇಖನಾಯಕ ನಿಕಾಯಕಾಮಿನೀಪ್ರಬಲಬಲಕಲಿತಸುಲಲಿತ ಕಳೇವರ
ಸಮುಜ್ಜ್ವಳವಿಳಾಸನಿಚಿತಕುಸುಮವಿಸರವಿಭೂಷಣಭೂಷಿತಾವಯವನವವಯಸ್ಸ
ಮುದಿತ ವಿಪುಳವಿಭವ ವಿಭ್ರಮವಿರಾಜಿತ ಸರತಿಸಾಂಜಲಿಪುಟ ನಿಟಿಲಕುಟಿಲಕೃ
ಷ್ಟೇಕ್ಷುಕೋದಂಡಮಂಡಿತಬಂಧುರಕಂಧರಕಂದರ್ಪನಿಸುದಾರಸಾರಶೃಂಗಾರ
ರಸಮುಮಂ, ಮತ್ತಮತಿ ವಿಕೃತವೇಷಮುಮರ್ದರೆ ನೆತ್ತಿಯೊಳೆತ್ತಿಕಟ್ಟಿದ
ಜಂಡಿಕೆಯೊಳೊತ್ತಿದಚ್ಚರ್ದಪೆಳ್ಗವಡಿಕೆಯಮಾಲೆ ಚೂಳಿಕೆ ವಿಡಿದು ಜತಿಜತಿಗೊಲೆಯೆ
ಪುಲಿದೊವಲಬಲಾಗ್ರಸೆಯುಮೇಲಳವಡಿಸಿ ಕಟ್ಟಿಬಿಟ್ಟಕಿರುಗಂಟೆಗಳ ತೊಂಗಲ್ತೊ
ನೆದು ಝುಣಝುಣಧ್ವನಿಗಳೆಡೆ ಮೊಗಮನುರುಗಿಸಿ ಮೂಗುಮನಲುಕ್ಕಿರ್ದ ಪುರ್ಬ
ನೇರಿಸಿ ಕಣ್ಗಳಂಪೊಕ್ಕಿಸಿ ನಾಲಗೆಯಂ ನೀಡಿ ಪಲ್ಗಳಂ ತೆರೆದು ಬಸಿರನುಬ್ಬಿಸಿ ಕೊರ
ಲಂ ಕೊಂಕಿಸಿ ನಡುವಂ ಬಂಕಿಸಿ ನೆರೆವಗಣಂಗಳ್ಗೆ ಗಗಡಲೊಳೋಲಾಡೆ ಪಾದ
ತ್ರಯದೊಳ್ನಲಿದು ನರ್ತಿಸಿ ವೃಷನ ಮೊಗದಾವರೆಗೆ ಮುಗುಳ್ನಗೆಯನೋಲಗಿ
ಪಭೃಂಗಿರಿಟಿಯಿಂ ಹಾಸ್ಯರಸಮುಮಂ, ಮತ್ತಂ ಚಿರಕಾಲಮುಗ್ರತಪಂಗೈದು ವನ
ಜಭವನಿಂ ವರಂಬಡೆದು ಕಡುಗೊಬ್ಬಿರ್ದದನುಜಜನದಿನಾದಬಾಧೆಗಳ್ಗೆ ಬಳ್ಕಿ ಕಂದಿ
ನೊಂದೇಳ್ತಂದಿಂದುಧರನಂಘ್ರಿಗೆ ಬಿನ್ನವಿಸಲ್ಸಮಯಂಬಡೆಯದೆ ಕಡೆವಾಗಿಲೊಳ್ಪಿ
ರಿದುಕಾಲಂ ಕಾದು ನಿಂದೊಳಗಣ್ಗೆ ಸಲ್ಗೆ ಮಿಗೆ ಪೋಪಗರುಡಧ್ವಜಾದಿದಿವಿಜ

ವ್ರಜದಬೆಂಬಳಿಯೊಳೊಯ್ಯನಡಂಗಿ ಪೊಕ್ಕು ಪೋಪಾಗಳ್ತಡೆದು ಪಿಡಿದು ನೂಂಕಿಝುಂ
ಕಿಸಿಜಡಿದುಪೊಡೆವದೌವಾರಿಕಪ್ರಚಂಡಗಣೇಂದ್ರರ ದಂಡಪಾತದಿಂ ದಿಂಡುಗೆಡೆದ
ಳಲ್ದು ಒಳಲ್ದು ಬಿಸುಸುಯ್ದು ಬಸವಳಿದು ಕಂಬನಿದುಂಬಿ ತಮ್ಮನಗಲ್ದು ಸೆರೆಸಿ
ಕ್ಕಿದನಿಜಾಂಗನೆಯರಂ ನೆನೆನೆನೆದು ಪಲುಂಬಿ ಪಳಯಿಸುವದಿವೌಕಸರಿಂ ಕರುಣ
ರಸಮುಮಂ, ಮತ್ತಮಾವಿಷಾದವಿಧುರಿತರ ಕಾರ್ಪ್ಪಣ್ಯೋಕ್ತಿಗೇಳ್ದು ಕರುಣಂಗೆ
ಯ್ದು ಶಿವನಂಘ್ರಿಯಂ ಕಾಣಿಸಿ ಬಿನ್ನಪಂಗೈಸಿ ತನ್ನಿರೂಪದಿಂ ನಂದೀಶ್ವರಂ ಕಳಿಪೆ
ಕಡುಪಿಂ ಪರಿತಂದು ತದರಾತಿಖಳದನುಜಬಲಮಂ ಬೆಂಬತ್ತಿ ಮುತ್ತಿ ಪೊಡೆದು
ಒಡಿದು ಕಡಿಕಂಡಂಗೈದು ಸೀಳ್ದು ಪೋಳ್ದು ಸಂಹರಿಸಿ ಮಗುಳ್ದುಭವನಲ್ಲಿಗೇಳ್ತಂ
ದಾಗಳ್ಕನ್ನೆತ್ತರಿಂನನೆದಕರುಳ ಮಾಲೆಯುಮಾಂತ್ರಪ್ರೋತಕಪಿ ನಾಸ್ಥಿಮಾತ್ರತಮುಂ
ತೊಡರ್ದಕರಾಳತರಖರಖಡ್ಗಂ ಕರತಳದೊಳಿಂಬುವಡೆಯೆ ಏಕಜಜಪಾಕುಸುಮ
ರಕ್ತರಕ್ತಜಳಧಾರಾಸಿಕ್ತಶ್ಮಶ್ರುಮಾಂಸಳಕಂಠಾಕುಂಠಿತಭ್ರುಕುಟಿಭಯಂಕರ
ಮುಖತದೀಯಪಿಕಟಶಿರೋಮಾಲೆ ಕಂಠೋಪಕಂಠದೊಳ್ಮೆರೆಯೆ ಪೊಡಮಟ್ಟು
ನಿಂದಭೀಕರಾಕಾರಭೈರವವ್ರಜದಿಂ ಬೀಭತ್ಸರಸಮುಮಂ, ಮತ್ತಮನೇಕಮುಖಂ
ಗಳ ನನಂತನೇತ್ರಂಗಳನಪರಿಮಿತಭುಜಂಗಳನಗಣಿತಪದಂಗಳನಸಂಖ್ಯಾತಕರ್ಣಂ
ಗಳಂ ತಳೆದು ಶಿಶ್ವದ್ವಿಶ್ವರೂಪಮಂ ತೋರ್ಪ್ಪ ವಿಧಿಸೃಷ್ಟಿಯುಮನಳಿದು ಪೊಸತಂ
ಮಾಳ್ಪ ನಿಜಾಭರಣಫಣಿಯಿಂಗರುಡನಂ ಬೆಂಕೊಳಿಪ ಮೌಳಿಜೂಳದೊಳ್ತಳೆದವಿ
ಧುಶಕಲದಿಂಪಿಧುಂತುದನನದಿಚ್ಚುರ್ವ ಪದನಖಮಯೂಖದಿಂ ಖದ್ಯೋತಮಂಡಳ
ಮಂ ಖದ್ಯೋತಕಣೆಯೆನಿಪ ಲೀಲಾವೇಶವಶೇಷದುನ್ಮಿಷಿತನಿಟಿಲತಟನಯನಪಟು
ಸ್ಫುಟವಿಸರ್ಗತಶಿಖಿಶಿಖಾವಿಸ್ಫುರದ್ವಿಸ್ಫುಲಿಂಗದಿನಂಭೋಧಿಯೆಲ್ಲಮನಾಪೋಶನಂ
ಗೊಳಿಪಹೂಂಕೃತಿಧ್ವಾನದಿನೆಜಾಂಡಭಾಂಡಮನಲ್ಲಾಡಿಸಭುಜಪರಿಘಭ್ರಾಂತಿಯಿಂ
ಭಗಣಮಸಿಳೆಗುದಿಚ್ಚುರ್ವ ನಿಜಶ್ವಾಸಜಂಝಾಪ್ರಭಂಜನಪಾತದಿಂ ದಿವಿಜವಿಮಾನ
ಕೋಟಿಯಂ ತರಗೆಲೆಯಂತೆ ಪಾರಿಪ ಮಹಾದ್ಭುತವಿಚಿತ್ರಚರಿತ್ರಸನಾಥಶರಣಾಗತ
ರಕ್ಷಕಖಳಶಿಕ್ಷಕನಿರುಪಮಾನಮಾನೋನ್ನತಾನೂನಸಾಮರ್ಥ್ಯಸಮನ್ವಿತಸಮಂ
ಚಿತನಿರರ್ಗಳನಿಸರ್ಗಪ್ರಭಾವಮಹಾನುಭಾವಪ್ರಸಿದ್ಧರುದ್ರಗಣೇಂದ್ರರಿಂದದ್ಭುತ

ರಸಮುಮಂ, ಮತ್ತಮಿದಿರ್ಚಿದೊಡೆ ಜವನಕೋಣನ ಕೋಡಂ ಕೀಳ್ವ, ಮಿಳ್ತುವಿನದಾಡೆಯಂ ಮುರಿವ, ಮಾರಿಯನಾಲಿಗೆಯಂ ಪರಿವ ಭೈರವನ ಮುಂದಲೆಗೊಯ್ವ, ಬಾಸುಗಿಯ ನುಗಿದುಂಗುರಂಗೈದಂಗುಲಿಯೊಳ್ತೊಡರ್ಚುವ, ಕುಳಗಿರಿಯಂ ನೆಗಪಿತಿರಿಕಲ್ಲಾಡುವಾದಿಕಮಠನಕಠಿನಖರ್ಪರಂತಗ್ಗಿನುಗ್ಗಿಮೆಟ್ಟಿನಾಟ್ಯಮನಾಡುವ, ದಿಗ್ಗಜಂಗಳನಿಗ್ಗವಮಂಮುರಿದುಮುದ್ಗರಂಗೆಯ್ದುಪಿಡಿವ, ಮಹೀವಿಯುತ್ತಳಮಂಕರತಳದಿಂತಳೆದುತಾಳಂಗುಟ್ಟುವ, ಸಿಡಿಲಂಕಡಿದುಕಡೆಯಂಗೈದೆಡಗಾಲೊಳಿಕ್ಕುವ, ಕಾಲಾಗ್ನಿಯಂ ಪೊಸೆದು ಬೊಟ್ಟಿಟ್ಟುಕೊಳ್ವ, ಪೊಡೆಯುರಲನಂಜಡಿವ, ಜಡಜಜನಪಣೆಯಕ್ಕರಮಂ ತೊಡೆವ, ಕಡಲಂಕುಡಿವ, ಬಡಬನಂಪಿಡಿವ, ರವಿಶಶಿಗಳಂ ಮಿರ್ವ, ಕುಳಿಕನಂತುಡುವ, ಭಗಣಮಂ ಮುಡಿವ, ಮೃಡನಸಾಸಮೆ ಪಲವುರೂಪಾತುದೆನಿಸಿ ನಿಂದತಿಬಳಪ್ರಥಿತಪ್ರತಾಪಸಮುಗ್ರೋದಗ್ರವಿಗ್ರಹವಿಜಿತವಿಗ್ರಹವೀರವೀರಪ್ರಮಥವಾರದಿಂ ವಿಸ್ಫಾರವೀರರಸಮುಮಂ, ಮತ್ತಂ ಜಡಿವಫಣಿಕುಂಡಳದಕೆಂಬೆಳಗು ಥಳಥಳಿಸಿ ತಳ್ತಿರೆ ಕುಡಿಗೆಂಪನಾಳ್ದು ಪೊಳೆದು ಬಿಂಕಂಬೆತ್ತು ಕೊಂಕಿನಿಂದಕೂದರ್ಜಡೆಗಳ ನಿಜನಿಟಿಲತಟದೊಳಳವಟ್ಟು ಬಿಸಿಯುಬೆಳಗನೊಳಕೊಂಡೊಳಗೊಳಗೆ ಘುಳುಘುಳಿಪವಿಪುಳತರಸ್ಫುರದ್ವಿಸ್ಫುಲಿಂಗಸಂಘಾತಸಂಗತಸಂವರ್ತಶಿಖಿವಿಲೋಚನದಜಟುಲತಟಿಲ್ಲತಾಕುಟಿಲಜಟಾಪಟಲಮಕುಟತಟಘಟಿತಪಟುದನುಜಕಪಾಲವಲಯದ ಧಗಧಗಿತನಿಸ್ತ್ರಿಂಶತ್ರಿಶೂಲಖಡ್ಗಚಾಪಮಾರ್ಗಣಕಲಿತಕರಚತುಷ್ಟಯದ ಕಂಠೋಪಕಂಠಸಂಘಟಿತಘನಘೋಷವಿಷವಿಷಮಭೀಷಣೋತ್ಫಣಿತಫಣೀಂದ್ರಗ್ರೈವೇಯಕದ, ನಿಜಭುಜಾಂತರಾಳದೊಳ್ಬೊಬ್ಬೆಗೊಟ್ಟಬ್ಬರಿಸಿಕೊಬ್ಬಿದಸುರರಿಪುಶಿರೋಮಾಲೆಯವಿಕಟಾಟ್ಟಹಾಸಭಾಸುರಭ್ರುಕುಟಿಭಯಂಕರಮುಖಾಂಬುಜದ ಬಿಗಿದುಟ್ಟಚಿತ್ರಕಾಯಚರ್ಮಚಿತ್ರವಸನದ ಪೊದೆದಮದೇಭಚರ್ಮದುತ್ತರೀಯಕದ ವಾಮಾಂಘ್ರಿಯೊಳೊಲೆದುದ್ಘೋಷಿಪದನುಜಮದಭಂಜನನೆಂಬಬಿರುದಿನತೊಡರ ಸಜಳಜಳಧರಮದಾಳಿಕುಳನೀಲರುಚಿಸಮುಗ್ರೋಗ್ರವಿಗ್ರಹದ ಪೊಡರ್ಪುವಿಜೃಂಭಿಸೆ ಸಮುಪರಾಕ್ರಮಸಮನ್ವಿತಾಪ್ರಮಿತಪ್ರಮಥರುದ್ರಗಣಸಮಾವೃತದಕ್ಷಮಖಸಮಾಗತಸಕಳದಿವಿಜವಿದ್ರಾವಣವೀರಭದ್ರನಿಂ ರೌದ್ರರಸಮುಮಂ

ಮತ್ತಮತಿವಿತತವಿಶದರುಚಿಪರಿಹಸಿತಶಶಿರುಚಿಸ್ಫಟಿಕಮಣಿಕುಟ್ಟಿಮಪ್ರತಿಬಿಂಬಿತಮಹೇಂದ್ರಮಣಿನಿರ್ಮಿತತನ್ಮಂಡಪಾಗ್ರವಲಭಿಭಾಗಸಂಭೃತ ಪ್ರಚುರಮೇಚಕರುಚಿಪ್ರಚಯಮಂ ಮುನ್ನೀರೊಳ್ಮುನ್ನಮೊಗೆದು ಬೆನ್ನಟ್ಟಿ ಸುಟ್ಟುರುಪಿ ವಿಲಯಂಗೆಯ್ಯಲುಜ್ಜುಗಿಸಿ ಪಂದಘೋರತರಗರಳಂಗೆತ್ತಗಿದು ಸುಗಿದು ಪೆಡಂಮೆಟ್ಟಿ ನಡನಡಂನಡುಗಿ ಸೆಡೆದಡಿಗಡಿಗೆ ತಲ್ಲಣಿಸಿ ಮೃಡಂಗೆ ಮೊರೆಯಿಡಲುಜ್ಜುಗಿಸಮುಗ್ಧಾಮರಪ್ರಕರದಿಂ ಭಯಾನಕರಸಮುಮಂ, ಮತ್ತಮೆಳಲ್ವಕೆಂಜಡೆಯ ಪೊಳೆವ ಸುಲಿಪಲ್ಗಳ ನೊಸಲೊಳ್ಮಸುಪಭಸಿತತ್ರಿಪುಂಡ್ರದ ಪಸನರುಚಿಲಸಿತಸುಪ್ರಸನ್ನಮುಖಾಂಬುಜದ ಕೊರಲುರಂತೀವಿತಳೆದ ರುದ್ರಾಕ್ಷಮಾಲಿಕೆಗಳನೆಡಪೆಗಲಿಂ ಬಲದಬರಿವರೆಗಮೆಳಲೆವಿಟ್ಟ ಜೋಗಪಟ್ಟಿಗೆಯ ವಾಮಕಕ್ಷದೊಳಿರುಂಕಿದಭಸ್ಮಘುಂಟಿಕೆಯ ಬಲದಕರಾಗ್ರದೊಳಾಂತಪಳಿಕುಗುಂಡಿಗೆಯ ಪೊದೆನುಟ್ಟಮೃದುವಲ್ಕಲದ ಕಡುಬೆಡಂಗಡರೆ ಹೃದಯಕಮಳಮಧ್ಯಮಂಡಿತಮಂಡಲತ್ರಯಾಗ್ರದೊಳ್ಬಿಡದೆ ಜಾಸಿಪದಿವ್ಯಮೂರ್ತಿ ಜಲಕ್ಕನೆ ಸುರಸಭಾಮಧ್ಯಭಾಸಮಾನಸಿಂಹಾಸನಸಮಾಸೀನಮಾಗಿ ತೊಳತೊಳಗಿ ತೊಟ್ಟನೆ ದಟ್ಟಗಿನಿದುಗರೆದು ನೆರೆಯೆ ಕೀಲಿಸಿದಂತೆ ತಳ್ತೆಸೆಪಿಡುಕದಸೋಟಮುಮಾನೋಟದೊಳ್ಸಿಲ್ಕಿ ಕಟ್ಟುವಡೆದಂತೆ ನೆಲೆಗೊಂಡ ಮನಮುಮಾಮನದ ಬೆಂಬಳಿವಿಡಿದು ಪಾರಿದಶೇಷಕರಣಂಗಳುಮಾಕರಣಂಗಳೊಡನಡಂಗಿ ನಿಷ್ಪಂದತೆಗೆ ಪಕ್ಕಾದಹರಣಮುಮಾಹರಣಮಂ ಬಳಿವಿಡಿದು ನಿಶ್ಚಲತ್ವಂಬಡೆದಪಂಕ್ತಿಯುಳಿದು ಹರವಸಂ ಕಯ್ಮಿಕ್ಕು ಜಲಧಿಯೊಳಾಳ್ದ ಜಲೋಪಳಜಳದಂತೆ ಕಟ್ಟನೆಕರಗಿತೊಟ್ಟನೆ ರಸಮಯಮಾದಪರಮಾನಂದಸುಧಾಸಮುದ್ರದೊಳವಗಾಹಮಿರ್ದ್ದ ಶಿವಯೋಗೀಂದ್ರ ಸಂತಾನದಿಂ ಶಾಂತರಸಮುಮಂ ಕೈಕೊಂಡು ತಳೆದತ್ಯಂತಮನೋಹರಮಾಗಿ ರವಿಶಶಿಶಿಖಿಶತಕೋಟಿದಿವ್ಯರುಚಿಯಂ ಪಳಿದು ಪಜ್ಜಳಿಪನಿರುಪಮನಿರತಿಶಯನಿರವದ್ಯನಿರವಗ್ರವಿವಿಧವಿಭವ ಸಮಧಿಗತತನ್ಮಹಾಸಭಾಮಧ್ಯಮಂಡಿತಮಣಿಗಣಖಚಿತಮಹನೀಯತಪನೀಯಮಯಮಧುಮುದಿತಮಧುಕರರವಮಧುರಸರಸಪರಿಮಳಮಿಳಿತದರದಳಿತಸುರಕುಜಕುಸುಮವಿಸರಮಾಲಿಕಾಲಂಕೃತಮಹಾರಮಣೀಯವಿತಾನದ ಕೆಳಗಳಪಟ್ಟವಿತತಪ್ರಭಾವಳಯವಿಳಸಿತಮಾದಮಹಾಮೃಗೇಂದ್ರಾಸನಮಧ್ಯದಲ್ಲಿ

ಕಂ|| ಫಣಿಪತಿ ನಾಳಂ ದಳಕುಳ |
ಮಣಿಮಾದಿಗಳಮರ್ದಶಕ್ತಿಕರ್ಣಿಕೆ ಭಾಸ್ವ ||
ದ್ಗುಣವಿದ್ಯೇಶಕ್ಕೇಸರ |
ಗಣಮಾಗಿರೆ ಮಿಸುಪಪದ್ಮಪೀಠಸ್ಥಳದೊಳ್ || ೧೦೭

ಸ್ರ|| ವಿತತಾನಂದರಸಾಕರಂ ಪ್ರಣತವೃಂದಶ್ರೀಕರಂ ವಿಶ್ವವಿ |
ಶ್ರುತವಿದ್ಯಾಬ್ಜದಿವಾಕರಂ ಪ್ರಬಳಮಾಯಾಭೀಕರಂ ಭಕ್ತಸಂ ||
ತತಿದುಗ್ಧಾಬ್ಧಿಸುಧಾಕರಂ ಸುಕೃತಸದ್ರತ್ನಾಕರಂ ದೇವವಂ |
ದಿತನಿರ್ದ್ದಂ ಮಹಿಮಾಕರಂ ಶಶಿಕಳಾಶ್ರೀಶೇಖರಂ ಶಂಕರಂ || ೧೦೮

ವ|| ಮತ್ತಂ

ಸ್ರ|| ಗಿರಿಜಾತಾದೀರ್ಘನೇತ್ರದ್ಯುತಿಧವಳಿತಚರ್ಮಾಂಬರಂ ಕ್ಷೌಮದಿವ್ಯಾಂ |
ಬರಮಂ ತನ್ಮಂಜುಮಂದಶ್ವಸಿತಸುರಭಿತಶ್ರೀಗಳಶ್ರೀರಸಂ ಕ ||
ಸ್ತೂರಿಯಂ ತತ್ಕಾಯಭಾಸ್ವದ್ರುಚಿನಿಜಯುಪಿಶಂಗೀಕೃತಾಂಗಾಹಿ ಚಾಮೀ |
ಕರಜಂಜನ್ಮಾಲೆಯುಂ ಪೋಲ್ತಿರೆ ಕರಮೆಸೆದಂ ಬಾಲಚಂದ್ರಾವತಂಸಂ|| ೧೦೯

ಕಂ|| ಕರೆಮರೆಯಿಲ್ಲದ ಬಲ್ಲವ |
ರರಿತಕ್ಕೊಳಗಾಗದಾಗಮದ ಬಗೆವುಗದೆ ||
ಚ್ಚರಜತಿಗಳ ಜಾಣಕ್ಕಿಡೆ |
ದೆರಪಾಗದಚಿನ್ಮಯಪ್ರಭಂ ಮೆರೆದಿರ್ದ್ದಂ || ೧೧೦

ತತ್ವಾತೀತಂ ತತ್ವವಿ |
ಭುತ್ವಯುತಂ ತತ್ವಕಾರಣಂ ತತ್ವನಿಯಂ ||
ತೃತ್ವಪರತಂತ್ರರಹಿತಂ |
ತತ್ವಲಯಸ್ಥಾನನೆಸೆದ ನಾಸ್ಥಾಯಿಕೆಯೊಳ್ || ೧೧೧

ಎಲ್ಲಂ ತಾನಲ್ಲದ ಬಳಿ |
ಕೆಲ್ಲಂ ತಾನಾದ ಶೂನ್ಯನಲ್ಲದ ರೂಪೊಂ ||
ದಿಲ್ಲದೊಳಗಲ್ಲದುರೆ ಪೊರ |
ಗಲ್ಲದ ಪವಣಕ್ಕೆನಿಲ್ಲದನುಪಮನೆಸೆದಂ || ೧೧೨

ಪಳವಾತಿನ ಮೂತಿನ ಗಳ |
ಬಳಮಂ ಬಗೆಗೊಳದ ಒಜ್ಜ ಬರಿಯುರಿವಿನ ತ ||
ಣ್ಸೈಳಗಿನ ಬಳ[illegible] |
ಜ್ಜ್ವಳಿಸಿದುದೆನಿಸಿದುದು ಮೃಡನ ಮೂರ್ತಿವಿಳಾಸಂ || ೧೧೩

ಅಮಿತವುಹಿಮಾಬ್ಧಿ ಶತಕೋ |
ಟಿಮನೋಭವರೂಪನೆನಿಪರುದ್ರನ ಸೌಂದ ||
ರ್ಯಮನಿಂತುಟೆಂದು ಬಣ್ಣಿಸ |
ಲಮರರಾಚಾರ್ಯೋಹಿರಾಜರೇಂ ನೆರೆದಪರೇ || ೧೧೪

ಆದರಿಂ ಪೊಗಳಲ್ಕಾನ |
ಕ್ಕೆದೆನೀವಾಣೀವಧೂಟಿ ಶಿವಭಕ್ತಿರಸೋ ||
ನ್ಮದೆ ಮುಗುಳ್ದು ಪೊಗಳಲಾಟಿಪ |
ಳಿದಲಂಘ್ಯಂ ಪ್ರೇಮಕಾಮಿನೀಜನವೃತ್ತಂ || ೧೧೫

ವ|| ಅದುಕಾರಣದಿಂ ಬಲ್ಲಂತೆ ಬಣ್ಣಿಪೆನದೆಂತೆನೆ

ಕಂ|| ಪರಿವೃತಫಣಿವರಸಮುದ್ರ |
ಪ್ಪಿರೆ ಪರಿಗತಸಿಂಧುಬಂಧುರಂ ಮಂದರಭೂ ||
ಧರಮೆನಿಸಿ ಮೆರೆದುದಾಪುರ |
ಹರನುಜ್ಜ್ವಳಮುಕುಟಮತುಳಮಣಿಗಣಮಹಿತಂ || ೧೧೬

ಜಡೆವಳ್ಳಿಯೊಂತಮುಗುಳ್ಗಳ |
ಗಡಣಂ ತಾನೆನಿಸಿ ಗಾಂಗಜಳಕಣತತಿ ಸಂ ||
ಗಡಿಸಿರೆ ಶಶಿಕಳೆ ಬಳಸಿ |
ರ್ದುಡುಗಳ ಮಧ್ಯದೊಳೆ ಮೆರೆವುದೆನೆ ಕಂಗೊಳಿಕುಂ || ೧೧೭

ಜಡೆದುರುಗಲೆಡೆಯ ಮಡದಿಯು |
ಮುಡಿಯುಗ್ರದೊಳೈದೆ ತೊಳಪಮುತ್ತಿನಪೆರೆಯೆಂ ||
ಬೆಡೆಗೆಡೆಯಾದುದು ಪದಪಂ |
ಪಡೆದೆಳವೆರೆ ಮಕುಟದಗ್ರದೊಳ್ಪಶುಪತಿಯಾ || ೧೧೮

ಗಿರಿಧನುಗೇರಿಸುತುಂ ಪಣಿ |
ದಿರುವಂ ಜೇವೊಡೆಯೆ ಸಿಡಿದಫಣಾಮಣಿ ಪಣಿವ ||
ತ್ತಿರದೆಸೆವಂತೆಸೆದುದು ಭವೆ |
ಹರನನುಪಮನಿಟಿಲತಟಧನಂಜಯ್ಯನಯನಂ || ೧೧೯

ಅಂಬಾನನಬಿಂಬಾಧರ |
ಚುಂಬನಸಂಕ್ರಾಂತಘುಸೃಣರಸತಿಲಕಂ ತಾ ||
ನೆಂಬಿನ್ನಮುಂಬಕಮಳಿಕದೊ |
ಳಿಂಬಾದುದು ಶಂಬರಾರಿಮದಭಂಜನನಾ || ೧೨೦

ವಿಲಸದ್ದ್ವಿಜರಾಜದ್ಯುತಿ |
ಮಿಲಿತಾರುಣಬಿಂಬಸುಪ್ರಭಾಧರಮಧಿಕೋ ||
ಜ್ಜ್ವಲಘನರುಚಿ ವದನಂ ಕ |
ಣ್ಗೊಲವಿತ್ತುದನಂತಸಂಪದಂ ಪರಶಿವನಾ || ೧೨೧

ನಿಂದಿಸಿದುದಿಂದುಬಿಂಬಮ |
ನಿಂದುಧರಾನನಮಮಂದರುಚಿಯುತಮನಿಶಂ ||
ಕಂದದಕುಂದದದೋಷಂ |
ಬೊಂದದಚೆಲ್ವಿಂದೆ ಸತ್ಕಳಾಪರಿಪೂರ್ಣಂ || ೧೨೨

ನಿಜಕೋಟಿ ಮಿಡುಕೆ ಮಿಡುಕಿಪು |
ದು ಜಗತ್ಕೋಟಿಯನೆನಿಪ್ಪಶರ್ವನ ಪುರ್ವಂ ||
ಗಜಧನುಗಸಾರಕೋಟಿಗೆ |
ವಿಜಿತಕ್ಕೆಣೆಯೆಂಬನಾಗನೇ ಕಡುಗಾಂಪಂ || ೧೨೩

ವಿದಿತಜಗತ್ತ್ರಾಣಂ ಪು |
ಟ್ಟಿದತಾಣಂ ಘ್ರಾಣಮತುಳಮಂಜುಳಮದು ಗೆ ||
ಲ್ದುದು ಸಾರ್ದ್ರಾಳಿಶಿಶುವಸುವಂ |
ಸದೆದಿಕ್ಕುವಕನಕಚಂಪಕಮನಘಹರನಾ || ೧೨೪

ಶಿವಕರ್ಣಾಕಾರಶ್ರೀ |
ಭವಮಾಶ್ರೀಕಾರಮಪ್ಪುದಲ್ಲದೊಡುರುವ ||
ರ್ಣವಿಳಾಸತೆ ಶಾಸ್ತ್ರಾದಿ |
ಶ್ರವಣತೆ ಶುಭಕರಣಭಾವಮೇಂ ಸಮನಿಪುದೇ || ೧೩

ಹರಕರ್ಣಪೂರಕಮುಳಂ |
ಶಿರದಿಂದುವಸೆಯ್ದಿ ಪಿಡಿದು ಸೊದೆಗೊಂಬುದೆನು ||
ತ್ತರರೆ ಪಿಸುಣಾಡುವಂತಿರೆ |
ಕರಮೆಸೆದುದು ಕರ್ಣದಹಿಯೊಳಳಿರವಮಿಷದಿಂ || ೧೩

ಗೌರೀವಿಲೋಚನಾಸ್ಯಾಚ |
ಕೋರಾಂಬುಜಸಮ್ಮದ ಪ್ರದಪ್ರಭಮತುಳಂ ||
ರಾರಾಜಿಸಿದುದು ಕುಮುದಸ |
ರೋರುಹಸಖಲೋಚನದ್ವಯುಂ ಶಶಿಧರನಾ || ೧೩

ಫಣಿಫಣಮಣಿಕಿರಣಗಣಾ |
ರುಣಿತಂ ಮಣಿದರ್ಪಣಪ್ರಭಂ ಕದಪದು ಪಾ ||
ರ್ವಣಸಮುದಿತೇಂದುಬಿಂಬಮ |
ನಣಕಿಪುದಮಳಾಂಶು ಚಂದ್ರಚೂಡಾಮಣಿಯಾ || ೧೩

ಹಾರೋರಗಫಣಮಣಿದೀ |
ಪೋರುಶಿಖಾಕಜ್ಜಳಾಯಿತಂ ಗಳಗರಳಂ ||
ಗೌರೀನಯನಾಂಜನರೇ |
ಖಾರಸಮುಮರ್ದಂತೆ ಮೆರೆದುದಹಿಭೂಷಣನಾ || ೧೩

ಗಿರಿಜಾತಾಗುರುತರಕುಚ !
ಭರಕಾಶ್ಮೀರಾಂಗರಾಗರಾಗಾಂಕಪರಿ ||
ಸ್ಫುರಿತಭುಜಮುಜಿತಮಿಳಿಪಿದು |
ದರುಣಾಬ್ಜರಜಃಪಿಶಂಗಿತೋರ್ವಿಯ ಚೆಲ್ವಂ || ೧೪

ಹರಬಾಹುಕಲ್ಪತರುಭಾ |
ರಶಾಖೆಯ ಪಲ್ಲವಂ ಕರಂ ಕರಮೆಸೆಯು ||
ರೆ ತತ್ಪ್ರಸೂನಸವಮಂ |
ರಿಯೆನಿಸಿದುದಮಳನಖನಿಕಾಯಾಂಶುಚಯಂ || ೧೩೧
ನಿಟಿಲಾಕ್ಷವಕ್ಷಮಗಜಾ |
ಟಕುಚಚಂದನರಸಾಂಕಮಮಳಿನಮತುಳ ||
ಟಿಕಕವಾಟದ ಸಿರಿ ಸಂ |
ಟಿಸಿರೆ ಮೆರೆದುದು ಚಿದಂಗನಾಮಣಿಗೃಹದಾ || ೧೩೨
ಕುಂಜರಭಂಜನಶೌರ್ಯದ |
ಂಜಸ ಕುಧರಾಗ್ರವಾಸಿ ಪಂಚಾಸ್ಯಂಗೇಂ ||
ಂಜುಳತರ ಕೃಶಮಧ್ಯಂ |
ಂಜಿಪುದಚ್ಚರಿಯೆ ಸೋಳ್ಪೊಡೆಂಬವೊಲೆಸೆಗುಂ || ೧೩೩
ಇಂಗಡಲೊಳೊಗೆದ ಸುಳಿಯಂ |
ಂಗಾನ್ವಿತಮೆನಿಪಭವನ ನಾಭೀವಲಯಂ ||
ಾಂ ಗೆಲೆವಂದುದರಲ್ದು ಬೆ |
ಂಗಾಂತೆಸೆವಚ್ಚ ದುಂಡುಮಲ್ಲಿಗೆಯುರಲಂ || ೧೩೪
ಅಭ್ರಮುವಲ್ಲಭಕುಂಭದ |
ಭ್ರಮಮಂ ಸೆಳೆದು ತಳೆದು ಮೆರೆದುದು ಪೊರೆವಾ ||
ರ್ಭ್ರರುಚಿ ಹೇಮಸೂತ್ರಪ |
ಭ್ರಾಜಿತಮಧಿಕಮಂಧಕಧ್ವಂಸಕನಾ || ೧೩೫
ಮಾರಾರಿಯ ನುಣ್ದೊಡೆಯಾ |
ಾರಮನಾನಲ್ಕೆ ಬಯಸಿ ಬಾಳೆಗಳನಿಶಂ ||
'ರುಂಡು ನಾರನುಡುತಂ |
ಾರಿ ಸವಾತಪಮನಾಂತು ಮೆರೆಗುಂ ಬನದೊಳ್ || ೧೩೬

ಶಿವಕರ್ಣಾಕಾರಶ್ರೀ |
ಭವಮಾಶ್ರೀಕಾರಮಪ್ಪುದಲ್ಲದೊಡುರುವ ||
ರ್ಣವಿಳಾಸತೆ ಶಾಸ್ತ್ರಾದಿ |
ಶ್ರವಣತೆ ಶುಭಕರಣಭಾವಮೇಂ ಸಮನಿಪುದೇ || ೧೨೫

ಹರಕರ್ಣಪೂರಕಮಳಂ |
ಶಿರದಿಂದುವನೆಯ್ದೆ ಪಿಡಿದು ಸೊದೆಗೊಂಬುದೆನು ||
ತ್ತರರೆ ಪಿಸುಣಾಡುವಂತಿರೆ |
ಕರಮೆಸೆದುದು ಕರ್ಣದಪಿಯೊಳಳಿರವಮಿಷದಿಂ || ೧೨೬

ಗೌರೀವಿಲೋಚನಾಸ್ಯಾಚ |
ಕೋರಾಂಬುಜಸಮ್ಮದ ಪ್ರದಪ್ರಭಮತುಳಂ ||
ರಾರಾಜಿಸಿದುದು ಕುಮುದಸ |
ರೋರುಹಸಖಲೋಚನದ್ವಯಂ ಶಶಿಧರನಾ || ೧೨೭

ಫಣಿಫಣಮಣಿಕಿರಣಗಣಾ |
ರುಣಿತಂ ಮಣಿದರ್ಪಣಪ್ರಭಂ ಕದಪದು ಪಾ ||
ರ್ವಣಸಮುದಿತೇಂದುಬಿಂಬಮ |
ನಣಕಿಪುದಮಳಾಂಶು ಚಂದ್ರಚೂಡಾಮಣಿಯಾ || ೧೨೮

ಹಾರೋರಗಫಣಮಣಿದೀ |
ಪೋರುಶಿಖಾಕಜ್ಜಳಾಯಿತಂ ಗಳಗರಳಂ ||
ಗೌರೀನಯನಾಂಜನರೇ |
ಖಾರಸಮಮರ್ದಂತೆ ಮೆರೆದುದಹಿಭೂಷಣನಾ || ೧೨೯

ಗಿರಿಜಾತಾಗುರುತರಕುಚ !
ಭರಕಾಶ್ಮೀರಾಂಗರಾಗರಾಗಾಂಕಪರಿ ||
ಸ್ಫುರಿತಭುಜಮುಜಿತಮಿಳಿಪಿದು |
ದರುಣಾಬ್ಜರಜಃಪಿಶಂಗಿತೋರ್ವಿಯ ಚೆಲ್ವಂ || ೧೩೦

ಹರಬಾಹುಕಲ್ಪತರುಭಾ |
ರಶಾಖೆಯ ಪಲ್ಲವಂ ಕರಂ ಕರಮೆಸೆಯು ||
ರೆ ತತ್ಪ್ರಸೂನನವಮಂ |
ರಿಯೆನಿಸಿದುದಮಳನಖನಿಕಾಯಾಂಶುಚಯಂ || ೧೩೧

ನಿಟಿಲಾಕ್ಷವಕ್ಷಮಗಜಾ |
ಟಕುಚಚಂದನರಸಾಂಕಮಮಳಿನಮತುಳ ||
ಟಿಕಕವಾಟದ ಸಿರಿ ಸಂ |
ಟಿಸಿರೆ ಮೆರೆದುದು ಚಿದಂಗನಾಮಣಿಗೃಹದಾ || ೧೩೨

ಕುಂಜರಭಂಜನಶೌರ್ಯರಸ |
ಜಸ ಕುಧರಾಗ್ರವಾಸಿ ಪಂಚಾಸ್ಯಂಗೇಂ ||
ಂಜುಳತರ ಕೃಶಮಧ್ಯಂ |
ಂಜಿಪುದಜ್ಜರಿಯೆ ನೋಳ್ಪೊಡೆಂಬವೊಲೆಸೆಗುಂ || ೧೩೩

ಇಂಗಡಲೊಳೊಗೆದ ಸುಳಿಯಂ |
ನಂಗಾನ್ವಿತಮೆನಿಪಭವನ ನಾಭೀವಲಯಂ ||
ಕಾಂ ಗೆಲೆವಂದುದರಲ್ದುಬೆ |
ಶಂಗಾಂತೆಸೆವಚ್ಛ ದುಂಡುಮಲ್ಲಿಗೆಯುರಲಂ || ೧೩೪

ಅಭ್ರಮುವಲ್ಲಭಕುಂಭದ |
ವಿಭ್ರಮಮಂ ಸೆಳೆದು ತಳೆದು ಮೆರೆದುದು ಪೊರೆವಾ ||
ಶುರ್ಭ್ರರುಚಿ ಹೇಮಸೂತ್ರಪ |
ವಿಭ್ರಾಜಿತಮಧಿಕಮಂಧಕಧ್ವಂಸಕನಾ || ೧೩೫

ಮಾರಾರಿಯ ನುಣ್ದೊಡೆಯಾ |
ಕಾರಮನಾನಲ್ಕೆ ಬಯಸಿ ಬಾಳೆಗಳನಿಶಂ ||
ನೀರುಂಡು ನಾರನುಡುತಂ |
ಸಾರಿ ಸದಾತಪಮನಾಂತು ಮೆರೆಗುಂ ಬನದೊಳ್ || ೧೩೬

ಹರಚರಣದ ಸೌಂದರ್ಯವು |
ನರವಿಂದಜನಿಂದಮಾಗದುದನರ್ಥಿಸಿ ಪಂ ||
ಕರುಹಮದುಪಾದಪೀಠದ |
ಪರಿಜಂ ತಳೆದದನೆ ಪೊತ್ತು ಸೇವಿಪುದಿನ್ನುಂ || ೧೩೭

ಮಣಿವಹರಿಮುಖಸುರರ್ಕ್ಕಳ |
ಮಣಿಮುಕುಟದಮೌಕ್ತಿಕಂಗಳುಡುಗಣಮೈತಂ ||
ದಣಿಯುರದಿಂ ಪದನಖಪಾ |
ರ್ವಣಶಶಿಯುಂ ಸೇವಿಪಂತಿರೇನೊಪ್ಪಿದುದೋ || ೧೩೮

ಬಿಡುಗಣ್ಣರ್ಚಿಸಿದಸೊಂ |
ಪಡರ್ದಸರೋಜದ ಪರಾಗತತಿ ಕಂಗೊಳಿಕುಂ ||
ಕಡುಜತಿಗಳಮನಮೆಲ್ಲಂ |
ಬಿಡದೋಲಗಿಪಂತೆ ಮೃಡನ ಮೆಲ್ಲಡಿದಳಿರೊಳ್ || ೧೩೯

ಸೊದೆಗೆತ್ತು ನಖರುಚಿಗೆ ಬಳ |
ಸಿದಫಣಿಪನ ಫಣೆಯ ಮಣಿಯ ಬೆಳಗೆಳವಿಸಿಲೆಂ ||
ದೊದವಿದಸೊಂಪಂ ತಳೆದಂ |
ದದೆ ಮೆರೆದುದು ಪಾದಪಂಕಜಂ ಪುರಹರನಾ || ೧೪೦

ಜನನಕುಜಮೂಲಮಂ ನೆ |
ಟ್ಟನೆ ಕಡಿಯಲ್ಕಿಡಿದನೆನಿಸಿದುದು ಪರಶು ಶಿವಾ ||
ನನಶಶಿಯಿಂ ತೆಗೆದಾಂತವೊ |
ಲೆನಸುಂ ಮಿಗಮಿರ್ದುದ್ದಾಕಪರ್ದಿಯಕರದೊಳ್ || ೧೪೧

ವೃ|| ಪಳಿದುದ್ಯದ್ದುಗ್ಧವಾರ್ಧಿದ್ಯುತಿಯನೊದೆದು ದೇವಾಂಗನಾಪಾಂಗದೊಳ್ಬೆ|
ಳ್ವೆಳಗಂ ತಳ್ಪೊಯ್ದು ಚಂದ್ರಾತಪಮನಲೆದು ವಾಣೀತನುದ್ಯೋತಿಯಂ ಪೆಂ ||
ಪಳಿವನ್ನಂ ಪೊಯ್ದು ತಾರಾಚಳರುಚಿಚಯಮಂ ತೂಳ್ದು ಮಂದಾಕಿನೀಮಂ
ಜುಳಕಾಯಚ್ಛಾಯೆಯಂ ಪರ್ಬ್ಬಿದುದು ಪರಶಿವಾಂಗಾವದಾತಪ್ರಕಾಶಂ ||

ಗಗನಂ ನಾಭಿ ನಿಭಂ ಶತಾಂಶು ನಿಜತೇಜೋಬಿಂದು ಬೀಜಂ ಮಹಾ |
ಗ್ನಿ ಗಳತ್ಪ್ರದರಜಂ ಧರಿತ್ರಿ ಶಶಿ ನಿರ್ಮಾಲ್ಯೋದ್ಗಮಂ ಶ್ವಾಸಮಾ ||
ಶುಗಮಾದ್ಯಂ ಜಲಮಂಗಘರ್ಮಜಲಮಾತ್ಮಾಂಭೋಧಿನಿರ್ಯತ್ಕಣಾ |
ಳಿಗಳಿಂದ್ರಾದಿಗಳೆಂದೊಡೇಂ ಪೊಗಳ್ವೆನೋ ಪೆಂಪಂ ಮಹಾದೇವನಾ || ೧೪೩

ಕನಕನಗೇಂದ್ರಧರ್ಮಕರನಾಗಿಯುಮುನ್ನತಧರ್ಮಹಂತೃ ಸಂ |
ಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾ ||
ಮನುಮೆನಿಸಿದ್ದು ಕಾಮಮಥನಂ ಪರಮೋಕ್ಷದನಾಗಿಯುಂ ಸನಾ | ೧೪೪
ತನಪರಮೋಕ್ಷಲುಬ್ಧಮತಿಯೆಂದೆನಿಸಿರ್ದನಹೀಂದ್ರಭೂಷಣಂ ||

ಚರಿತದೊಳುಂಟೆ ನೋಡೆ ಕರೆ ಕಂಠದೊಳಲ್ಲದೆ ರಾಗಮಾಜಟೋ |
ತ್ಕರದೊಳಮಲ್ಲದುಂಟೆ ಮನದೊಳ್ವಿಷಮಸ್ಥಿತಿ ನೈಜನೇತ್ರಭಾ ||
ಸುರತೆಯೊಳಲ್ಲದುಂಟೆ ಮತಿಯೊಳ್ಜಡಸಂಗತಿ ತನ್ನೊಳುಂಟೆ ಮೋ |
ಣ್ಯೈರದೊಳಗಲ್ಲದೆಂಬನುಡಿಗೊಲ್ದಿಡೆಗೊಟ್ಟನಮಂ ಸದಾಶಿವಂ || ೧೪೫

ಸಿರಿಗಧಿದೇವಿ ಶಾರದೆಯ ಸತ್ಕಳೆ ಸೃಷ್ಟಿನ ಜನ್ಮಭೂಮಿ ಸ |
ಚ್ಚರಿತದ ಸೀಮೆ ಸತ್ಯದತವರ್ಮ್ಮನೆ ಪೆರ್ಮೆಗಡಪ್ಪು ಸಿದ್ಧಿಗಾ ||
ಗರಮತುಳೋತ್ಸವಕ್ಕೆ ನೆಲೆ ಚೆಲ್ವಿನ ಕೋಶಮನೂನಮಂಗಳೋ |
ತ್ಕರನಿಧಿ ಗೌರಿ ರಂಜಿಸಿದಳಂಕದೊಳಿಂದುಕಳಾವತಂಸನಾ || ೧೪೬

ನಗೆಗಣ್ಣೈದಿಲನ್ನೈದೆ ಸೀವ್ಪುಗಿಸೆ ಚಂಪ್ರಂಗೀಯೆ ಕುಂದಂ ಮೊಗಂ |
ನಗಮಂ ಪತ್ತಿಸೆ ನಾಸಿಕಂ ಸುಲಲಿತಂ ಚಾಂಪೇಯಮಂ ಪೊನ್ನಬಿಂ ||
ದಿಗೆಯುಂ ಮೆಯ್ಗರೆವಂತೆ ಗೆಯ್ಯೆ ಕುಚಮಾವೇಣೀಭರಂ ಕಾಳಪ |
ನ್ನಗನಂ ಪುತ್ತುಡರ್ವಂತೆ ಮಾಡೆ ಮೆರೆದಳ್ಶರ್ವಾಣಿ ಸೌಂದರ್ಯದಿಂ || ೧೪೭

ಅರುಣಂ ಪಾಣಿ ತಳಿಕರ್ಜಚಂ ಕುಸುಮಗುಚ್ಛಂ ಕುಂದದಂತಾಂಶು ಭಾ|
ಸುರಪುಷ್ಪಂ ಭ್ರಮರಾಳಿ ನೀಲಮಣಿಚಂಚನ್ಮಾಲೆ ಪಾದಾಬ್ಜಬಂ ||
ಧುರಪೀಠಂ ಕಲಿತಾಲವಾಲಮಮರೀನೇತ್ರಾಂಶು ಪೊಯ್ನೀರದಾ |
ಗಿರೆ ಸಂಶಿಷ.ಶಿವಾಮರಾಗೆ ಶಿ...

ಗಳದುದ್ಯದ್ದಾನಧಾರಾಸುರಭಿಮಿಳಿತಕರ್ಣಾನಿಳೋದ್ದಂಡಶುಂಡಾ |
ಗ್ರಳಸತ್ಫೂತ್ಕಾರ ನಿರ್ಯಜ್ಜಲಲವನಿವಹಕ್ಕಾಸೆವಟ್ಟೈದಿನಿಂದಂ ||
ತಿಳಿಯಂ ಪೊತ್ತಿರ್ದಹೀಂದ್ರಂ ಮಿಸುಗೆಪೊಡೆಯುಹೀಂದ್ರಂ ಕರಂಕಣ್ಗೆವಂದಂ|
ಗಳಿತಾಶಂ ವಿಘ್ನನಾಶಂ ಪೃಥುಸಕಳಕಳಾಪೂರ್ಣಕೋಶಂ ಗಣೇಶಂ|| ೧೪೯
ಬಾಲಾದಿತ್ಯಾಂಶುಭಾಸ್ವತ್ತನು ಮಣಿಗಣಭೂಷಾವಹಂ ಪೀನಮುಕ್ತಾ |
ಮಾಲಾಲಂಕಾರವಕ್ಷಸ್ಸ್ಥಳನುರುತರಕೋಟೀರಧೌರೇಯುಸಸ್ಮೇ ||
ರಾಲಾಪಾಳಿಸ್ವನಾಸ್ಯಾಂಬುಜನಹಿಭುಗಿನಾರೂಢನೊಪ್ಪಿರ್ದನುದ್ಯ |
ಲ್ಲೀಲಾಯುಕ್ತಂ ಸಶಕ್ತಿಸ್ಫುರಿತಭುಜನುಮಾಸತ್ಕುಮಾರಂ ಕುಮಾರಂ||೧೫೦
ಪದಪಾದಂ ವೇದಪಾದಸ್ಫುಟಮಣಿಕಟಕಂ ಕಾಲಪಾಲಂ ಕಳಾಕಾಂ |
ತಿ ದಯಾಸ್ಯಂ ಚಿತ್ಪ್ರಭಾಕ್ಷಂ ಪ್ರಣವರವರಣತ್ಕಾರನಾನಂದಸಾಸ್ನಾ ||
ಸ್ಪದನಾಮ್ನಾಯಾಂತಘಂಟಾಗಳನಮೃತಕಕುದ್ಬಂಧುರಂ ಚಿತ್ಕ್ರಿಯಾಹ್ಲಾ|
ದದಶೃಂಗಂ ಧರ್ಮರೂಪಂ ತೊಳಗಿದನಭವಾಂಭೋಧಿಚಂದ್ರಂ ವೃಷೇಂದ್ರಂ ||
ಸ್ಮಿತವಕ್ತ್ರಂ ರಕ್ತಕರ್ಣಾಭರಣಕಲಿತಮುದ್ದೀಪ್ತದೀರ್ಘಾಂಗನಾಲಂ |
ಚಿತಹಾರಂ ಭಸ್ಮರೇಖಾತ್ರಯುವಿಳಸಿತಭಾಳಸ್ಥಳಂ ಚೀನಚೇಲಾ ||
ವೃತಮಧ್ಯಂ ಮೌಕ್ತಿಕಪ್ರಸ್ಫುಟಮುಕುಟನುದಂಚತ್ಸುವರ್ಣೋರುವೇತ್ರಾಂ |
ಚಿತಹಸ್ತಂ ನಿಂದು ಕಣ್ಗೊಪ್ಪಿದನಭವಸಭಾವಾಸದೊಳ್ನಂದಿಕೇಶಂ || ೧೫೧
ರುರುಘಂಟಾಕರ್ಣಸಂಡಾಭರಣನಹಿಧರಂ ಶಂಕುಕರ್ಣಂ ಪ್ರಕುಂಡೋ |
ದರನಂಭೋದಸ್ವನಂ ಧೂರ್ಜಟಿ ಜಟಿಲಿ ಜಟಾಮಾಲಿ ಕಾಲಾಂತಕಂ ಶಂ ||
ಕರನೋಂಕಾರಂ ವೃಷೇಂದ್ರಧ್ವಜನಜಿನವಸಾನಂ ವಿಷಾದಂ ವಿಪದ್ಭೀ |
ಕರನಂಗಾರಾಂಗನಂಗೋದ್ಭವಹರನಸುರಧ್ವಂಸಕಂ ವೀರಭದ್ರಂ || ೧೫೨
ಹರಿವಕ್ತ್ರಂ ಕರಿವಕ್ತ್ರನಶ್ವಪರವಕ್ತ್ರಂ ಮೇಷವಕ್ತ್ರಂ ಫಣೀ|
ಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ ಗೋಪವಕ್ತ್ರಂ ವನೇ ||
ಚರವಕ್ತ್ರಂ ಕಿರಿವಕ್ತ್ರನುಗ್ರಶಿಖಿವಕ್ತ್ರಂ ವ್ಯಾಘ್ರವಕ್ತ್ರಂ ಪಯ |
ಶ್ಚರವಕ್ತ್ರಂ ರುರುವಕ್ತ್ರರೆಂಬರೆಸೆದರ್ವಿಶ್ವೇಶ್ವರಾಸ್ಥಾನದೊಳ್ || ೧೫೪

ವಟರುದ್ರಂ ವಂದ್ಯರುದ್ರಂ ಕಲವಿಕರಣರುದ್ರಂ ಕಳಾಮೇಯರುದ್ರಂ |
ವಿಟರುದ್ರಂ ವೀರರುದ್ರಂ ಬಲವಿಕರಣರುದ್ರಂ ಮಹಾಬಾಹುರುದ್ರಂ ||
ಪಟುರುದ್ರಂ ಪಾಶಿರುದ್ರಂ ಪರಮಮಹಿಮರುದ್ರಂ ಪರೇಶಾನರುದ್ರಂ |
ನಟರುದ್ರಂ ನೀಲರುದ್ರಂ ಜಗದಧಿಪತಿರುದ್ರಂ ಜನಾಧಾರರುದ್ರಂ || ೧೫೫

ತಿರುಮೂಲಂಚೇರಮಾಂಕಂಮುರುಘುರಿರಿವದಾಂಡಾರಿವಾಗೀಶ್ವರಂಸೌಂ|
ದರನಾನ್ಯೆನಾರರೇಣಾಂಧಣರಣುಕನುವೆಳ್ಳ್ಕತರೇಣಾಧಿನಾಥಂ |
ಸಿರಿಯಾಳ್ವಂ ಸೇದಿರಾಜಂ ಮೊನೆಯಿಡುವನುಮಷ್ಪೂತಿಯೇಕಾಳಿ ಚಂಡೇ |
ಶ್ವರನಾಕಣ್ಣಪ್ಪದೇವಮ್ಮೆರೆದರಭಸದ್ಭಕ್ತಿಸಂಪತ್ತಿಯುಕ್ತರ್ || ೧೫೬

ಶುಕಕಣ್ವಾಗಸ್ತ್ಯಭೃಗ್ವಂಗಿರಸಸನಕಸಾನಂದಸೂತಾತ್ರಿಗಳ್ಕಾ |
ಶಿಕಭಾರದ್ವಾಜಶಾತಾತಪಕಪಿಲಕಣಾದಾಸಿಲಾದಾಕ್ಷಪಾದಾ ||
ಒಕಮಾರ್ಕಂಡೇಯಮಾಂಡವ್ಯರುರುವಿಮದಜಾಬಾಲಬೋಧಾಯನನ್ನಿರ್ಂ |
ದಕಳಂಕಕ್ಕೀರ್ತಿಸುತ್ತೊಪ್ಪಿದರಭವಸಭಾವಾಸದೊಳ್ಭಕ್ತಿಯಿಂದಂ ||೧೫೭

ವರುಣಂ ಪೊಂಗಿಂಡಿಯಂ ವಾಸವನೆ ಡವಕೆಯಂಪಾವಕಂ ದೀಪಮಂಭಾ|
ಸ್ಕರಪುತ್ರಂಛತ್ರಮಂ ವೀಜನಮನನಿಲನಬ್ಜಾಕ್ಷನಾದರ್ಶಮಂ ಚಾ |
ಮರಮಂ ಶ್ರೀವಾಣಿಗಳ್ವಿತ್ತಪನಡಪವನೀಶಾನನಂಗಾಂಗರಾಗೋ ||
ತ್ಕರಮಂಖಡ್ಗಾದಿಯಂ ದಾನವಪತಿ ಪಿಡಿದೋಲೈಸಿ ನಿಂದರ್ದರಾಗಳ್||೧೫೮

ಯಮಕವಚನ|| ಮತ್ತಮಾಮಹಾಸ್ಥಾನಂ ಸಾರಸ್ವತಸ್ಫುರಿತಮಾನಸಕ
ಮಳವಿತತಾಮೋದವಾಹಸುಧೀರಾಜಸಮನ್ವಿತಮುಂ | ಸಾರಸ್ವತಸ್ಫುರಿತಮಾನಸ
ಕಮಳವಿತತಾಮೋದವಾಹಸುಧೀರಾಜ ಸಮನ್ವಿತಮುಂ| ಸಾನಂದಸನಂದನಸಮಾ
ಗತಶತಕ್ರತುಸುಮನೋಮುನಿಸಮಂಚಿತಮುಂ | ಸಾನಂದಸನಂದನಸಮಾಗತಶತ
ಕ್ರತುಸುಮನೋಮುನಿಸಮಂಚಿತಮುಂ | ವಿತತಸಖುರುಚಿರುಚಿರವನಮಾಲಾಸು
ಮನಸ್ಸುಗಂಧದೇಹಾನುಕಂಪಿತಸುಪರ್ಣಸಮುದ್ಧೃತಪರಾಗಸ್ತೋಮಮಧುಹರ
ರಮಹಿಮಯುತಹರಿವಿರಾಜಿತಮುಂ | ವಿತತಸಖುರುಚಿರುಚಿರವನಮಾಲಾಸುಮ

ಮಹಿಮಯುತಹರಿವಿರಾಜಿತಮುಂ | ಹುತಾಶನಚಂಡದಂಡಧರಪಾಶಹಸ್ತನಿಧೀಶವೃಷಾಂಕಶೂಲಧರರುಂಡಾಭರಣಮಹಾಭೈರವಗಣಕಲಿತಮುಂ| ಹುತಾಶನಚಂಡದಂಡಧರಪಾಶಹಸ್ತನಿಧೀಶವೃಷಾಂಕಶೂಲಧರರುಂಡಾಭರಣಮಹಾಭೈರವಗಣಕಲಿತಮುಂ | ಸದಾಲೋಕಹಿತಕರಸ್ಫುರಿತಪುಷ್ಕರವಿಬುಧಚಕ್ರಸಮೀಹಿತೋದಯರುಚಿರಸಿತಭಾನುರಂಜಿತ ಮಹೋತ್ಪಳಮಿತ್ರವಿಳಸಿತಮುಂ | ಸದಾಲೋಕಹಿತಕರಸ್ಫುರಿತಪುಷ್ಕರವಿಬುಧಚಕ್ರಸಮೀಹಿತೋದಯರುಚಿರಸಿತಭಾನುರಂಜಿತಮಹೋತ್ಪಳಮಿತ್ರವಿಳಸಿತಮುಮೆನಿಸಿರ್ದುದಂತುಮಲ್ಲದೆಯುಂ ||

ವೃ|| ಮರುದಾಕೀರ್ಣಾಪ್ಸರಂಸತ್ತಿಲಕವಿಲಸಿತಂರಾಜಹಂಸಾನ್ವಿತಂ ಭಾ|
ಸುರರಂಭಾಶೋಕಪೂಗಸ್ಥಿತಿ ಶಿಖಿಶುಕವಿಭ್ರಾಜಿತಂ ಗಂಧವಾಹಾ |
ಗುರುಗೋಜಸ್ಫಾರಪುನ್ನಾಗಕಮುರುಸುಮನೋವೃಂದಪದ್ಮಾಭಿರಾಮ |
ಸ್ವರಚಂಚದ್ಭೃಂಗ್ಯಲಂಕಾರಕಮಭವಸಭಾವಾಸಮುದ್ಯಾನಸಾಮ್ಯಂ ೧೫೯
ಕರಮೆಸೆದಿರ್ದುದಭ್ರಚರದಿಂಚರದಿಂ ಚರದಿಂದಿರಾಮುಖಾ |
ಮರತರುಣೀಸುಲಾಸ್ಯರಸದಿಂ ರಸದಿಂ ರಸದಿಂ ಪೊದಳ್ದು ಶಂ ||
ಕರಕವಿವರ್ಗದಿಂದೆ ಸುರಭಾಸುರಭಾಸುರ ಭಾಗಭಂಗಮಾ |
ವರನುತಿಯಿಂ ಸಭಾಸ್ಥಳಿ ಕಳಾಪಕಳಾಪಕಳಾಪಮೌಳಿಯಾ ||೧೬೦||

ವ|| ಇಂತನಂತಸಂಭ್ರಮಮನಮಂದವಿಭ್ರಮಮನನೂನಾಶ್ಚರ್ಯಮನತೀವಸಂಪದಮನತರ್ಕ್ಯವಿಸ್ತಾರಮನಖಂಡಮಹಿಮೆಯನೊಳಕೊಂಡು ನುತಿಪೊಡಸದಳಮಾದನಿರುಪಮಾನಾನೂನಘನಪರಮಮಂಗಳ ಮಹಿತಮಹಾಸ್ಥಾನದಲ್ಲಿ ||

ಕಂ|| ನಮದಮರಕನಕಮೌಳಿಗ |
ಳಮರ್ದೊರಸಿದೊಡುದಿರ್ದರೇಣು ಪುಗೆ ಬಾಯ್ಗಳೊಳಾ||
ಗಮಮಂ ಪದೆದೋದುವವಾ |
ಗ್ರಮಣಂತಳೆದಂ ಹಿರಣ್ಯಗರ್ಭಾಖ್ಯತೆಯಂ ||೧೬೧||

ವೃ|| ಗಳಪದಿರಿಂದ್ರ ನೂಂಕದಿರುಪೇಂದ್ರ ತೊಲಂಗೆಲೆಚಂದ್ರ ಮೆಲ್ಲನೊ |
ಲ್ದೊಳಪುಗುಮಿತ್ರ ಕಯ್ಮುಗಿ ವಿಧಾತ್ರ ಶರಣ್ಬುಗು ವೀತಿಹೋತ್ರಪಿಂ||
ದುಳಿ ಧನಪಾಲ ಸಾರ್ಕೆಡೆಗೆಲೋಲಸಮೀರಣ ಕಾಲನಿಲ್ವುದೆಂ |
ದಳಘುರವಂ ಗುಡುತ್ತೆ ಜಡಿದಂ ಜವದಿಂದಮೆ ನಂದಿಕೇಶ್ವರಂ ||೧೬೨||

ಪೊಡೆಯುತ್ತುಂ ವೇತ್ರದಿಂದಿಟ್ಟಣಿಪದನುಜರಂ ಯಕ್ಷರಂ ಸೂಂಕುತುಂ ಕ|
ಣ್ಗಡೆಯಿಂದಂಝುಂಕಿಸುತ್ತುಂಮುನಿನಿವಹಮನಾದ್ಧೋರ್ತ್ತುತುಂಸಿದ್ಧರಂಮೇ||
ಣ್ಜಡಿಯುತ್ತುಂ ಸಾಧ್ಯರಂ ಹೊಯ್ಯೆಸುತೆ ನಿಲಿಸುತಿಂದ್ರಾದ್ಯರಂ ಗೀತನೃತ್ಯ |
ಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ದ್ದಂ ||
ಶ್ರುತಿಕೋಟಿಸ್ತೋತ್ರನಾದಂಮುನಿಪಜಯಜಯಧ್ವಾನಮಂಭೋಜಗರ್ಭೋ
ನ್ನತವಕ್ತ್ರೋದ್ಭೂತಸಾಮಧ್ವನಿ ಸುರವನಿತಾಗೀತರಾವಂ ಪ್ರನೋದಾಂ ||
ಚಿತಗಂಧರ್ವಾಂಗನಾನರ್ತನ ಘನನಿನದಂ ಭೃಂಗಿನಾಟ್ಯಸ್ವನಂ ಪ್ರ |
ಸ್ತುತನಾನಾವಾದ್ಯಘೋಷಂ ಬೆರಸಿಒಳೆದುದೆತ್ತೆತ್ತಲುಂ ಪರ್ಬ್ಬಿತಾಗಳ್ ||

ಸುರಪಂ ಮಂದಾರದಿಂದಚ್ಯುತನರುಣಸರೋಜಾತದಿಂ ಚಂದ್ರನಿಂದೀ |
ವರದಿಂ ಬಾಲಾಬ್ಜಮಿತ್ರಂ ಧವಳಕಮಳದಿಂ ಪದ್ಮಜಂ ಹೇಮಪದ್ಮೋ ||
ತ್ಕರದಿಂ ವಿತ್ತೇಶನುದ್ಯತ್ಕನಕಕುಸುಮದಿಂ ಮಾರುತಂ ದಿವ್ಯಸೌಗಂ |
ಧಿರಜಃಸೌಗಂಧದಿಂದರ್ಚಿಸೆ ನಿಜಪದಮಂ ಭರ್ಗನೊಪ್ಪಿರ್ದ್ದನಾಗಳ್ ||

ಕರಮೆಸೆದಿರ್ದ್ದರೀಶ್ವರಸಮಕ್ಷದೊಳುದ್ಭಟಬಾಣಭಟ್ಟಭಾ |
ಸ್ಕರವರಪುಷ್ಪದತ್ತರುಮುದಗ್ರಹರೀಶ್ವರರಾಘವಾಂಕಶಂ ||
ಕರವಿಭುಗಳ್ಸುಕೇತಿ ಮಲಯಾಧಿಪಮಲ್ಲಣಭೀಮಬಿಲ್ಲಣ |
ಸ್ಸುರುಚಿರ ಕಾಳಿದಾಸಕವಿಭೋಜಮುಖರ್ನ್ನುತಿಸುತ್ತೆ ಭಕ್ತಿಯಿಂ ||೧೬೬||

ಮಣಿಮಣಿದೇಳ್ವ ನಿಲ್ವ ನಡೆನೋಡುವ ಪಾಡುವ ಜೋಲ್ವ ತೇಲ್ವಸಂ |
ದಣಿಪಕುಕಿಲ್ವ ಕೂಗಿಡುವ ರಾಗಿಪ ರಂಜಿಪ ಸುತ್ತಿಬರ್ಪ್ಪರಿಂ ||
ಗಣಗುಣಿಪಾರ್ವ್ವ ಸಾರ್ವ್ವ ನಗುವಂಘ್ರಿಯನಪ್ಪುವ ಲಲ್ಲೆದೋರ್ಪ ಕ |
ಣ್ಬೊಣರ ಸುಖಾಶ್ರುವಿಂ ನನೆವ ನಚ್ಚಿನ ಮಚ್ಚಿನ ಭಕ್ತರೊಪ್ಪಿದರ್ ||೧೬೭||

ತವಕದೆ ನೋಡಿನೋಡಿ ತಣಿವೈದವು ಕಣ್ಗಳನೂನಮೂರ್ತಿಯಂ |
ಸವಿಮಿಗೆ ಪಾಡಿಪಾಡಿ ತಣಿವೈದದು ಜಿಹ್ವೆ ತದೀಯಕೀರ್ತಿಯಂ ||
ಸವೆಯದೆ ಮಾಡಿಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ |
[illegible]

ಇಂತತ್ಯಂತಪ್ರಭಾವಂಬಡೆದು ಮಿಸುಗುವಾಸ್ಥಾನದೊಳ್ಸತ್ಕೃಪಾರ್ದ್ರ |
ಸ್ವಾಂತಂ ಸತ್ಯೇಂದ್ರನಂ ತತ್ತನುಜಮುಖರನೊಲ್ದೀಕ್ಷಿಸುತ್ತುಂ ಭವಾನೀ||
ಕಾಂತಂ ಕೊಂಡಾಡಿ ಕೇಡಿಲ್ಲದಗಣಪದಸಾಮ್ರಾಜ್ಯಮಂ ಸಾರ್ಚಿ ತಾನ|
ಶ್ರಾಂತಂ ಕಣ್ಗೊಪ್ಪಿದಂ ಮಂಜುಳಗುಣಗಣಮಾಣಿಕ್ಯಕೋಶಂಮಹೇಶಂ ||

ವ|| ಆಗಳ್ಮೆಯ್ಯಿಕ್ಕಿ ಕಯ್ಯೆತ್ತಿ ಸಮ್ಮುಖದೊಳ್ಚಂಡಕೀರ್ತಿಗಳ್ಕಳಕಳಮಂ ಸಿವಾರಿಸಿ ಸಂಭ್ರಮಿಸಿ ನಿಂದು

ಸ್ತುತಿ|| ಲಲಿತರಗಳೆ|| ಜಯಜಯಸುಧಾಕರಕಲಾಕಲಿತಕೋಟೀರ | ಜಯಜಯಶಿವಾಂಗಸಂಗತಮಂಗಳಾಕಾರ | ಜಯಜಯವಿತಂದ್ರವೃಷಭೇಂದ್ರಚತುರತುರಂಗ | ಜಯಜಯ ಮಹಾನಟನಚಲಕುಲಾಚಲಶೃಂಗ | ಜಯಜಯ ಮಹಾಮಹಿಮಹಿಮಗಿರಿಸುತಾಕಾಂತ | ಜಯಜಯಸಂಭಿಕ್ಷಾಟನೇಕ್ಷಿತೇಂದ ನಿಶಾಂತ | ಜಯಜಯವಿಶೃಂಖಲಖಲಾಂಗಜಾಂಗವಿಭಂಗ | ಜಯಜಯಹ, ತೋದ್ದಂಡದಂಡಧರಕುಧರಾಂಗ | ಜಯಜಯ ನಭೋನಗರಹರಣಪಟುನಿಟಿಲಾಕ್ಷ | ಜಯಜಯಜಲಂಧರಮದಾಂಧಗಜಹರ್ಯಕ್ಷ | ಜಯಜಯ ಪಿತಾಮಹಮಹಾಕರೋಟಿಕರಾಗ್ರ | ಜಯಜಯ ನಿಕೃತ್ತಸುರಪಕ್ಷದಕ್ಷಮಹೋಗ್ರ| ಜಯಜಯ ನೃಸಿಂಹ ಸಂಹರಣಪಟುಶರಭಾಂಗ | ಜಯಜಯ ನಿಜಾಂಗಾರ್ಧ ಸಂಗನಗಜಾರ್ಧಾಂಗ | ಜಯಜಯ ಸುತಾಕಾಮವಿಧಿಹರಕಿರಾತೇಶ | ಜಯಜಯ ಚಿಕಿತ್ರಿವಿಕ್ರಮವಿಕ್ರಮನಿವೇಶ | ಜಯಜಯ ಸವಾದತ್ತಚಂಡವರವರದೇವ | ಜಯಜಯ ಜಗತ್ತ್ರಳಯಕರಗರಧರಗ್ರೀವ | ಜಯಜಯಾಚ್ಯುತದತ್ತಚಕ್ರರಕ್ಷಣಶೀಲ | ಜಯಜಯ ಗಜೇಂದ್ರಮುಖಮುಖವಿಲೋಕನಲೋಲ | ಜಯಜಯ ಕುಮಾರಮಾರಿತದಿವಿಜರಿಪುಜಾಲ | ಜಯಜಯ ವಿಳಾಸಕೃತವಿದಿತೈಕಪದಲೀಲ | ಜಯಜಯಶುಭಾವಹಸುಖಾವಹಸದಾಲಾಪ | ಜಯಜಯ ಸುದಕ್ಷಿಣಾಮೂರ್ತಿವಿಳಸಿತರೂಪ | ಜಯಜಯ ಹರಿಬ್ರಹ್ಮಮೃಗ್ಯಪರತರಲಿಂಗ | ಜಯಜಯ ಸದಾಮ್ನಾಯಗೇಯಮಹಿಮೋತ್ತುಂಗ | ಜಯದೇವ ದೇವಮಹಾದೇವನಮಸ್ತೇನಮಃ

ವ|| ಎಂದಖಂಡವಿಭವಕ್ಕೊರ್ಗೊಂಡಾಡುತ್ತುಮಿರೆಯಿರೆ

ಕಂ|| ಹರಭಕ್ತಿಸುಖಸುಧಾಸಾ |
ಗರಮುಗ್ನಂಗಣುತೃಣೋಪಮಂ ಹರಿಸುರಪಾ ||
ದ್ಯರ ಪದಪಲ್ಲವಮುಮುದರ್ಗಂ |
ಡರಬಾಯ್ಗಂಬಿಲದ ರಸಮುದೇಂ ಸೊಗಯಿಕುಮೇ || ೧೭೦

ವ|| ಎನಿಸಿ

ವೃ|| ಪರಮಾನಂದರಸಪ್ರಸನ್ನವದನಂ ಪಂಚಾಕ್ಷರಾಮೋದವಿ |
ಸ್ಫುರಿತಸ್ವಾಂತಪಯೋರುಹಂ ಶಿವಪದಾಂಭೋಜಾತಭೃಂಗಂ ಗುಣಾ ||
ಕರಚೂಡಾಮಣಿ ರಾಜಶೇಖರಮಹೀಶಂ ತನ್ಮಹಾದೇವ ಭ |
ಕ್ತಿರಸಾನಂದತೃಣೀಕೃತಾನ್ಯಸುಖನೊಪ್ಪಿರ್ದ್ದಂ ತದಾಸ್ವಾದನದೊಳ್ ||೧೭೧

ಇಂತೀಕಾವ್ಯಮನೊಲ್ದು ಕೇಳ್ದ ವಿಬುಧರ್ಮ್ಮೆಚ್ಚಿಕೊಂಡಾಡೆ ಪೇ |
ಳ್ದಂ ತಾನೊರ್ವ್ವನೆ ಸಾಂಬಶಂಭುಕೃಪೆಯಿಂದೀಕಾಬ್ದದೊಳ್ಪೂರ್ಣಮ ||
ಪ್ಪಂತೋರಂತೆ ಷಡಕ್ಷರಾರ್ಯ್ಯನನಘಂ ಸಾಹಿತ್ಯಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗಸಂಗತಮಹಾಮಾಹೇಶ್ವರಂ ಭಕ್ತಿಯಿಂ || ೧೭೨

ಸರಸಾರ್ಥಂ ಸವಿಮಾತು ಜಾಣ್ಮೆಯೊಳವೆಂಬಾಮ್ನಾಯಸಂಸ್ತುತ್ಯಶಂ |
ಕರನಾಮಾಂಕಿತಮಲ್ಲದನ್ಯಕೃತಿಯೊಳ್ವಿದ್ವಜ್ಜನಂ ಮೋಹಿಪೊಂ ||
ದಿರವಲ್ತೆಂದಿದರೊಳ್ಪದಾರಮಿಸುಗೆಂದೋರಂತೆಪೇಳ್ದಂ ಷಡ ||
ಕ್ಷರದೇವಂ ರಸಮರ್ಥಮೊಳ್ಪುಮಿಸುಪೀಸತ್ಕಾವ್ಯಮಂ ಶ್ರಾವ್ಯಮಂ || ೧೭೩

ತ್ರಿದಶಜನರ್ಗ್ಗದೀವುದೆರೆದರ್ಥಮನೈದುಸುರೋರ್ವಿಜಂ ಸಮಂ |
ತಿದು ಬಿಡದೊಂದೆ ಕಾವ್ಯನವಕಲ್ಪಕುಜಂ ಸಕಳರ್ಗ್ಗವೀವುದು ||
ರ್ವ್ವಿದಸುಪದಾರ್ಥಮಂ ಸವಿಕಳಧ್ವನಿ ಪಲ್ಲವಸೂನಶೋಭಿ ತಾ |
ನದರಿನಿದಕ್ಕೆ ಸಧ್ವನಿಲಸತ್ಪದಪೂರ್ಣಕದಿಂ ಸಮಾನಮೇ || ೧೭೪

ಕಂ|| ಪದಪಾಳಿಕ್ರಮಯುಕ್ತಂ |
ಸದಮಳಮಂತ್ರಾರ್ಥವಾದಸಹಿತಂ ತಾನಾ ||
ದುದರಿಂದೀಕಾವ್ಯಂ ವೇ |

ಶ್ರುತಿಗತಿಪಿತಮತಿವಿಬುಧ |
ಪ್ರತತಿಗೆ ಶಿವಮಂತ್ರಮಹಿಮಯುತಮೀಕಾವ್ಯಂ ||
ಶ್ರುತಿಗತಿಪಿತಮತಿವಿಬುಧ |
ಪ್ರತತಿಗೆ ತಾನೆನಿಪುದರರೆ ವಿಶ್ವಂಭರೆಯೊಳ್ || ೧೭೬

ವೃ|| ಸರಸಾಲಂಕೃತಿ ಜಾತಿ ರೀತಿ ಗಮಕಂ ಸೊಂಪಿಂಪು ನುಣ್ಪೊಳ್ಪು ಭಾ |
ಸುರಭಾವಂ ನೆಲೆಗೊಂಡು ತೋರೆ ರಸಗಾನಂಬೋಲ್ಮನಂಗೊಳ್ವವಿ ||
ಸ್ಫುರದಸ್ಮತ್ಕೃತಿಯುಂ ಸದಾವಿಷಮದಾಟೋಪಂ ಜಗತ್ಪ್ರಾಣಸಂ |
ಹರವಕ್ರಕ್ರಮವಿಕ್ರಮಂಖಳಭುಜಂಗಂ ಕೇಳದೇಂ ಪೋಕುಮೇ || ೧೭೭

ಇದುಪೊಸತಿಂಪು ಸೋಡಿದು ನವೀನಮನೂನಮೃದೂಕ್ತಿ ಭಾವಮಿಂ |
ತಿದು ನವಮಿಂತಿದಲ್ತೆ ಸದಲಂಕೃತಿ ನವ್ಯಮುದಾತ್ತವೃತ್ತಿ ತಾ ||
ನಿದು ಮಿಗೆ ನೂತ್ನಮೆಂದಖಿಳಕಾವ್ಯಕಳಾವಿದರೊಲ್ದು ಕೇಳ್ದು ಮ |
ಚ್ಚದೆ ನುತಿಗೆಯ್ಯದಿರ್ಪ್ಪರೆ ಷಡಕ್ಷರದೇವಕೃತಪ್ರಬಂಧಮಂ || ೧೭೮

ವಿತತಾಲಂಕಾರವಿಭ್ರಾಜಿತೆ ಗುಣಗಣಸಂಯುಕ್ತೆ ಶೃಂಗಾರಸಾರಾ |
ನ್ವಿತೆ ಸದ್ವೃತ್ತಿಪ್ರಕಾಶೋದಯೆ ಮೃದುಪದವಿನ್ಯಾಸೆ ಸದ್ಭಾವಶೋಭಾ ||
ನ್ವಿತೆ ಭಾಸ್ವದ್ರೀತಿರೇಖಾಲಸಿತೆ ಭೃತಸದಾಮೋದೆ ಭೂಚಕ್ರದೊಳ್ಮ |
ತ್ಕೃತಿಚಂಚತ್ಕಾಂತೆ ಮತ್ಕೀರ್ತಿಯಸಖಿಯೆನೆ ಸಂತೋಷದಿಂದಿರ್ಕೆ ನಿಚ್ಚಂ ||

ಅಕಳಂಕಂ ವಿಬುಧಪ್ರಣೀತಸುಮನಸ್ಸಂಯುಕ್ತಮಿಷ್ಟಾರ್ಥದಂ |
ಸುಕುಮಾರಸ್ಥಿತಿ ಸಾರಲಕ್ಷಣಯುತಂ ಸದ್ರಾಗಶೋಭಾಕರಂ ||
ಸಕಳಾಮ್ನಾಯಶಿರಸ್ಸ್ಥಳಸ್ಥಗಿತಮೆಂದುಂ ನಿಂದಪೋಲ್ಕಂಕರಾಂ |
ಘ್ರಿ ಕರಂ ನಿಲ್ಕೆ ಮದೀಯಕಾವ್ಯಮನಿಶಂ ವಿಶ್ವಂಭರಾಚಕ್ರದೊಳ್ || ೧೮೦

ಪರಮೈಶ್ವರ್ಯಮನೀಶ್ವರಂ ಪ್ರವಿಲಸತ್ಕಲ್ಯಾಣಿ ಕಲ್ಯಾಣಮಂ |
ಕರಿವಕ್ತ್ರಂ ಕರಣೀಯಸಿದ್ಧಿಯನಮಂದಾನಂದಮಂ ನಂದಿ ಬ ||
ರ್ಹಿರಥಂ ಪೂರ್ಣಮನೋರಥಂಗಳನತಂದ್ರಂ ಶ್ರೀವೃಷೇಂದ್ರಂ ವೃಷೋ |
ತ್ಕರಮಂ ಮತ್ಕೃತಿಗೇಳ್ವವರ್ಗ್ಗಿಳೆಯೊಳೆಂದುಂ ಮಾಳ್ಕೆ ಸಂಪ್ರೀತಿಯಿಂ ||೧೮೧

ಅಮೃತಶ್ರೀವೃತೆ ಸತ್ಫಳಾನ್ವಿತೆ ಮರುತ್ಸಂಸೇವ್ಯೆ ಸಚ್ಛಾಯೆ ಸ |
ಪ್ರಮದಾನೂನವಿನಾಯಕೋತ್ಸವೆ ಸದಾಮೋದಪ್ರಸನ್ನಸ್ಫುರ ||
ತ್ಸುಮನಸ್ಸಂಯುತೆ ನಿರ್ಜರಾರ್ಯಹಿತೆ ಹೈಮಕ್ಷ್ಮಾಧ್ರಸಂಜಾತೆಯಾ |
ಕ್ರಮಿತಸ್ಥಾಣು ಮೃಡಾನಿ ಕಲ್ಪಲತೆಯಂತೀಗೆಮ್ಮಭೀಷ್ಟಾರ್ಥಮಂ || ೧೮೩

ಶ್ರೀಮನ್ನಂದನಭಾಸಿ ಸಂಗತಮಹಾಪರ್ಣಾಶ್ರಿತಾಂಗಂ ಸದಾ |
ಳ್ಯಾಮೋದಪ್ರದಸೌಮನಸ್ಯಮಧಿಕಚ್ಛಾಯಂ ಶುಕಾದಿದ್ವಿಜ ||
ಸ್ತೋಮಪ್ರೇಮಕರಂ ಕುವೃತ್ತಿರಹಿತಂ ಸರ್ವಾಗಮೌಘಸ್ತುತಂ |
ಸ್ವಾಮಿಶ್ರೀಶಿವಲಿಂಗಮೀಗೆಮಗಮರ್ತ್ಯೋರ್ವೀಜಮಿಷ್ಟಾರ್ಥಮಂ || ೧೮೩

ಸುರಚಿರಶಾಲಿವಾಹನಶಕಾನ್ವಿತರತ್ನಸಮುದ್ರಬಾಣಭೂ |
ಪರಿಗಣನಾಂಕಬಂಧುರಜಯಾಬ್ದದ ಮಾಘದ ಶುಕ್ಲಪಕ್ಷವಿ ||
ಸ್ಫುರಿತತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣಮಾಯ್ತು ಶಂ |
ಕರಶಿವಲಿಂಗದಂಘ್ರಿಕೃಪೆಯಿಂದೆ ಷಡಕ್ಷರದೇವನಿರ್ಮಿತಂ || ೧೮೪

ಗದ್ಯ|| ಇದು ವಿನಮದಮರವರಮಕುಟತಟಘಟಿತಮಣಿಗಣಮಹಾ
ಪ್ರಭಾಪಟಲ ಪರಿವೃತ ಪರಶಿವ ಶ್ರೀಪಾದನಖಚಂದ್ರಸಾಂದ್ರರುಚಿ
ರುಂದ್ರ ಚಂದ್ರಿಕಾಚಂಚಚ್ಚಕೋರಾಯಮಾನ ಸರಸಜನ
ಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರ
ದೇವ ವಿರಚಿತಮಪ್ಪ ರಾಜಶೇಖರವಿಳಾಸ
ವಿಪುಳಪ್ರಬಂಧದೊಳ್ಪರಮೇಶ್ವರಪ್ರ
ಸನ್ನತಾತದಾಸ್ಥಾನವರ್ಣನಂ
ಚತುರ್ದಶಾಶ್ವಾಸಂ
ಸಂಪೂರ್ಣಂ.

---

ಅಂತು ಆಶ್ವಾಸ ೧೪ಕ್ಕಂ ಪದ್ಯ ಗಣನೆ ೧೨೬೯ಕ್ಕಂ ಮಂಗಳಮಸ್ತು.

ರಾಜಶೇಖರವಿಲಾ

ಶ್ಲೋಕಃ

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರ |
ನ್ಮಂಜೀರದ್ವಯಮಂಜುನಾದವಿಭವಶ್ರೀಗರ್ವಸರ್ವಂಕಷಾಃ ||
ಜೀಯಾಸುರ್ಭವತಷ್ಷಡಕ್ಷರವಿಭೋಃ ಕುಂದಾರವಿಂದಾವಳೀ |
ಮಂದಾರದ್ರುಮಮಂಜರೀಮಧುಝರೀಮಾಧುರ್ಯಧುರ್ಯಾಗಿರಃ ||೧|

ಬಾಲಸುಧಾಂಶುಪತ್ತನ ಷಡಕ್ಷರಸತ್ಕವಿನಿರ್ಮಿತಂ ಸುಧೀಃ |
ಲಾಲಿತರಾಜಶೇಖರವಿಳಾಸಸಮಾಹ್ವಯಸುಪ್ರಬಂಧಮಾ ||
ಮೀಲಿತಬುದ್ಧಿಪಾತಕವಿಲೇಖಕಸಂಗತಿಯಿಂದಬದ್ಧಮಾ |
ಲಾಲಯಮಾಗಿ ನಂಜುವೆರಸಿರ್ದನಿವಾಲವೊಲಿರ್ದುದಕ್ಕಟಾ ||೨||

ಪಂಡಿತರುದ್ರದೇವತನಯಂ ಗಿರಿಜಾಪತಿಪಾದಪೂಜನೋ |
ದ್ದಂಡತರಪ್ರಭಾವಪರಿಲಬ್ಧಲಸತ್ಕವಿತಾವಿಲಾಸನಾ ||
ಖಂಡಲಸಾಮ್ಯಕೃಷ್ಣವಸುಧಾಪತಿದಿವ್ಯಸಭಾಮಸೀಷಿಕ್ಕೈ |
ಕೊಂಡುಸಮಂತಿದಂ ಕರಿವೃಷಾಂಕನೆ ತಿರ್ದುತೆಮುದ್ರೆಗೈಸಿದಂ ||೩||



Printed at the Crown Press, Mysore—1913.